# ಹೊಸತು

ಒಳಗೇನಿದೆ.....




*ಚಿತ್ರಗಳು : ಪಿ. ಮಹಮ್ಮದ್, ವಸಂತ ಹೊಸಬೆಟ್ಟು, ಬಿ. ವಿಲ್ಸನ್, ಜಿ. ಎಂ. ಬೊಮ್ನಳ್ಳಿ ರವಿಕುಮಾರ್ ಅಜ್ಜೀಪುರ, ಉಮೇಶ್, ಶ್ರೀಹರಿ, ಸತೀಶ್ ಯಲ್ಲಾಪುರ, ಹರಿಣಿ,*
*ಮುಖಚಿತ್ರ : ವರ್ಣಪಾರದರ್ಶಿಕೆ - ಕೆ. ಪಿ. ಸ್ವಾಮಿ (ಚಿತ್ರದಲ್ಲಿ ವಿಶಾಲ್)*
*ವಿನ್ಯಾಸ : ನವಕರ್ನಾಟಕ ವಿನ್ಯಾಸ*
*ಕಚೇರಿ ಸಹಕಾರ : ಜಿ. ವಿ. ತೇಜೋವತಿ*


## ಈ ತಿಂಗಳು

ಅಂತೂ ೭೦ನೆಯ ಕನ್ನಡ ಸಾಹಿತ್ಯ ಸಮ್ಮೇಳನ ತುಮಕೂರಿನಲ್ಲೇ ನಡೆದು ಒಂದಷ್ಟು ನಿರ್ಣಯಗಳನ್ನು ಅಂಗೀಕರಿಸಲಾಯಿತು. ಅವ್ಯವಸ್ಥೆಯ ಮಹಾಪೂರದಲ್ಲಿ ಸಮ್ಮೇಳನವು ಕೊಚ್ಚಿಹೋಗದಿದ್ದುದೇ ಸಮಾಧಾನ. ನಾವೆಷ್ಟು ಸಹನಾಶೀಲರು ಎಂಬುದಕ್ಕೆ ಇದೂ ಒಂದು ನಿದರ್ಶನ. ಅವ್ಯವಸ್ಥೆಗೆ ಕಾರಣರಾದವರನ್ನೂ, ಯಥಾಪ್ರಕಾರ ದೊಣ್ಣೆಗಳನ್ನು ಬಲವಾಗಿ ಬೀಸಿದ ಪೊಲೀಸರನ್ನೂ ಕ್ಷಮಿಸುವುದು ಮಾತ್ರವಲ್ಲ, ಮರೆತುಬಿಡುವುದೂ ನಮ್ಮ ವೈಶಿಷ್ಟ್ಯ. ಈ ಸಮ್ಮೇಳನದಿಂದ ತಿಳಿಯಬೇಕಾದ ಅಂಶಗಳು ಹಲವಿವೆ: (ಅ) ಸಾಹಿತ್ಯ ಪರಿಷತ್ತು ಒಂದು ಪ್ರಾತಿನಿಧಿಕ ಸಂಸ್ಥೆಯಾಗಿ ಬೆಳೆಯಬೇಕಾದರೆ ಅದರ ಕಾರ್ಯವಿಧಾನ, ಸಂರಚನೆ ಎಲ್ಲಾ ಬದಲಾಗಬೇಕು. ಸಾರ್ವಜನಿಕ ಹಣವನ್ನು ದೊಡ್ಡ ಪ್ರಮಾಣದಲ್ಲಿ ಪಡೆಯುವ ಸಂಸ್ಥೆಯಲ್ಲಿ ಅಪ್ರಯೋಜಕರಿಗೆ ಸ್ಥಾನವಿರಬಾರದು. ತಮ್ಮ ವೈಯಕ್ತಿಕ ಘನತೆಯ ಗಂಧವೇ ಇಲ್ಲದಿರುವವರು ಪರಿಷತ್ತಿನ ಘನತೆಯನ್ನು ರಕ್ಷಿಸುತ್ತಾರೆಂದು ನಿರೀಕ್ಷಿಸಬಹುದೆ ? (ಆ) ಇನ್ನು ಮುಂದೆ ಸಮ್ಮೇಳನಗಳನ್ನು ಎರಡು ಭಾಗವಾಗಿ ವಿಂಗಡಿಸಿ ನಡೆಸಬೇಕು. ಮೊದಲ ಭಾಗದಲ್ಲಿ ಕೆಲವು ಸ್ವಾಮಿಗಳು ಮತ್ತು ಸಚಿವರು ದೊಡ್ಡ ಸರ್ಕಾರಿ ಕನ್ನಡ ಮೇಳವನ್ನು ನಡೆಸುವುದು. ಅದರಲ್ಲಿ ಸಾಹಿತ್ಯ ಪರಿಷತ್ತಿಗೆ ಯಾವ ಸ್ಥಾನವೂ ಬೇಕಿಲ್ಲ. ಮಂತ್ರಿಗಳಿಗೆ ಕನ್ನಡ ಪರವಾದ ಹೇಳಿಕೆಗಳನ್ನು ನೀಡಲು ಮತ್ತು ಸರ್ಕಾರದ ನೀತಿಗಳನ್ನು ಜನರ ಮುಂದಿಡಲು ಈ ಮೇಳವು ಅವಕಾಶ ಕಲ್ಪಿಸಿಕೊಡುತ್ತದೆ. ಅದ್ದೂರಿಯ ಜಾತ್ರೆಯ ವಾತಾವರಣ ತುಮಕೂರಿನಲ್ಲಿ ಇದ್ದಂತೆ ಮುಂದುವರಿಯಬಹುದು. ಪ್ರತಿ ವರ್ಷವೂ ರಾಜ್ಯದ ಬೇರೆ ಬೇರೆ ನಗರಗಳಲ್ಲಿ ಯೋಜಿಸಲಾಗುವ ಈ ಉತ್ಸವವು ನವಂಬರ್‌ನಲ್ಲಿ ಒಂದು ದಿನ ನಡೆದರೆ ಒಳ್ಳೆಯದು; ಆಗ ಊರೂರಲ್ಲೂ ರಾಜ್ಯೋತ್ಸವ ಆಚರಿಸುವ ಬದಲು ಈ ಮೇಳವೊಂದೇ ವಿಜೃಂಭಣೆಯಿಂದ ನಡೆದರೆ ಸಾಕು. ಇಂದಿನಂತೆ ಆಗಲೂ ಆಯಾ ಜಿಲ್ಲೆಗಳಲ್ಲಿ ಸ್ವಾಗತ ಸಮಿತಿಗಳು ಜವಾಬ್ದಾರಿ ಹೊರಬಹುದು ಮತ್ತು ಸರ್ಕಾರಿ ಹಾಗೂ ಖಾಸಗಿ ಹಣವನ್ನು ಒಟ್ಟುಗೂಡಿಸಿ ಖರ್ಚು ಮಾಡಬಹುದು. (ಇ) ಎರಡನೆಯ ಭಾಗದಲ್ಲಿ ಸಾಹಿತ್ಯ ಪರಿಷತ್ತು ಮೇಳದ ನಂತರದ ಎರಡು ದಿನಗಳಲ್ಲಿ ತನ್ನ ಗೋಷ್ಠಿ-ಸಂವಾದ -ಚರ್ಚೆ-ನಿರ್ಣಯ ಮುಂತಾದುವನ್ನು ಆಯೋಜಿಸಿಕೊಳ್ಳಬಹುದು. ಮೇಳದಲ್ಲಿ ಮೂಲವಿಗ್ರಹವಾಗಿದ್ದ ಸಾಹಿತಿಯು ಪರಿಷತ್ತಿನ ಎರಡು ದಿನಗಳ ಸಮ್ಮೇಳನದಲ್ಲೂ ಭಾಗವಹಿಸಿ ಮಾರ್ಗದರ್ಶನ ನೀಡಲು ಸಾಧ್ಯ. ಇದರಲ್ಲಿ ಸರ್ಕಾರದ ಮತ್ತು ಸ್ವಾಗತ ಸಮಿತಿಯ ನೇರ ಭಾಗವಹಿಸುವಿಕೆ ಇರುವುದಿಲ್ಲ. ಮೊದಲ ದಿನದಲ್ಲಿದ್ದಷ್ಟು ಜನರೂ ಇರುವುದಿಲ್ಲ. ಕೇವಲ ಆಸಕ್ತರು, ಆಹ್ವಾನಿತರು, ಪ್ರತಿನಿಧಿಗಳು ಇರುತ್ತಾರೆ. ಸ್ವಾಗತ ಸಮಿತಿಯೇ ಅವರಿಗೆ ಎಲ್ಲ ಸೌಲಭ್ಯಗಳನ್ನೂ ಕಲ್ಪಿಸಿಕೊಡುತ್ತದೆ. (ಈ) ಪುಸ್ತಕ ಮಳಿಗೆಗಳು, ಸಾಂಸ್ಕೃತಿಕ ಕಾರ್ಯಕ್ರಮಗಳು ಇತ್ಯಾದಿ ಮಿಕ್ಕೆಲ್ಲವನ್ನೂ ಮೂರೂ ದಿನ ವ್ಯವಸ್ಥೆಗೊಳಿಸಬಹುದು.

ಈ ರೀತಿಯ ಸ್ಪಷ್ಟ ಭಿನ್ನೈಸುವಿಕೆಯಿಂದ ಪರಸ್ಪರ ದೂಷಣೆಗಳನ್ನು ಇಲ್ಲವಾಗಿಸಬಹುದು ಮತ್ತು ಸಾಹಿತ್ಯ ಪರಿಷತ್ತಿನ ಕಾರ್ಯಕರ್ತರಿಗೆ ಹಣವು ಆಮಿಷವಾಗುವ ಸಾಧ್ಯತೆಯನ್ನು ಬಗೆಹರಿಸಬಹುದು. ಯಾವನೋ ಮಂತ್ರಿಯು ಪರಿಷತ್ತಿನ ಕಾರ್ಯಕರ್ತರನ್ನು ಅಗ್ಗವಾಗಿ ಕಾಣುವ ಪ್ರಸಂಗವೂ ಆಗ ನಿವಾರಣೆಯಾಗುತ್ತದೆ. ಸಾಹಿತ್ಯ ಸಮ್ಮೇಳನವೊಂದರಲ್ಲಿ ಲಾಠಿ ಪ್ರಹಾರ, ಮಾಧ್ಯಮದವರ ಮೇಲೆ ಹಲ್ಲೆ, ಊಟಕ್ಕಾಗಿ ಹೋರಾಟ ಅಥವಾ ಅದು ಸಾಧ್ಯವಿಲ್ಲದಾಗ ಉಪವಾಸ, ಇವೆಲ್ಲ ನಡೆಯಬಾರದ ಸಂಗತಿಗಳು. ಇನ್ನು ಮುಂದೆ ಅವಿಲ್ಲದ ಉತ್ಸವಗಳು ನಡೆಯಲು ಸೂಕ್ತ ಕ್ರಮಗಳನ್ನು ಸಾಹಿತ್ಯ ಪರಿಷತ್ತು ಕೈಗೊಳ್ಳಲೆಂದು ಆಶಿಸೋಣ.

ಈ ಬಾರಿಯ ಸಮ್ಮೇಳನದಲ್ಲಿ ಅಧ್ಯಕ್ಷರ ಲಿಖಿತ ಭಾಷಣಕ್ಕಿಂತಲೂ ಭಿನ್ನವಾಗಿದ್ದ ಅವರ ಸಮಯಸ್ಫೂರ್ತಿಯ ಭಾಷಣವು ಬಹಳ ಪ್ರಭಾವಶಾಲಿಯಾಗಿದ್ದಿತೆಂದು ಸಾಮಾನ್ಯವಾಗಿ ಎಲ್ಲರೂ ಒಪ್ಪಿದ್ದಾರೆ. ಲಿಖಿತ ಭಾಷಣದಲ್ಲಿ ಅವರ ವೈಯಕ್ತಿಕ ವಿಕಾಸದ ಹಾದಿಗೆ ಹೆಚ್ಚು ಪ್ರಾಶಸ್ತ್ಯ ನೀಡಲಾಗಿತ್ತು; ಆದರೆ ಸಂವಾದದಂತಿದ್ದ ಅವರ ನೇರ ಭಾಷಣವು ಪ್ರಸ್ತುತ ಸಂದರ್ಭದ ಹಲವು ಪ್ರಮುಖ ವಿಷಯಗಳತ್ತ ಗಮನ ಸೆಳೆಯಿತು. ಅವರ ಭಾಷಣಕ್ಕೆ ಮುಖ್ಯಮಂತ್ರಿಗಳು ಪ್ರತಿಕ್ರಿಯೆ ನೀಡುವಂತಿದ್ದರೆ ಸೊಗಸಾಗಿರುತ್ತಿತ್ತು ಎನ್ನಿಸುತ್ತದೆ. ನಮ್ಮ ಸರ್ಕಾರಗಳ ಜನವಿರೋಧಿ ನೀತಿಗಳತ್ತ ಬೆರಳು ಮಾಡಿ ತೋರಿಸಿದ್ದು ಅಧ್ಯಕ್ಷರ ಶ್ಲಾಘನೀಯ ಕೊಡುಗೆ ಎನ್ನಬಹುದು. ಆದರೆ ಅವರ ಪ್ರಸಿದ್ಧ ಚಮತ್ಕಾರಗಳೂ ಹೇರಳವಾಗಿದ್ದವು. ಉದಾಹರಣೆಗೆ, ಪರಿಸರವಾದಿಗಳು ಕೆಲವರು ತಮ್ಮನ್ನು ಬಳಸಿಕೊಂಡರು ಎಂಬರ್ಥ ಬರುವ ಮಾತುಗಳನ್ನು ಅನಂತಮೂರ್ತಿ ಹೇಳಿದ್ದು ಚರ್ಚಾಸ್ಪದ. ಅವರು ಇವರನ್ನು ಬಳಸಿಕೊಂಡರೋ, ಇವರು ಅವರನ್ನು ಬಳಸಿಕೊಂಡರೋ ಎಂಬುದರ ಜಿಜ್ಞಾಸೆ ಸ್ವಾರಸ್ಯಕರವಾಗಿರುತ್ತದೆ ! ತಮ್ಮ ಪರಿವಾರದವರನ್ನೇ ಹೆಚ್ಚಾಗಿ ತುಂಬಿಕೊಂಡಿದ್ದ ಸಂವಾದ ಗೋಷ್ಠಿಯಲ್ಲಿ ಅನಂತಮೂರ್ತಿ

(೬ನೇ ಪುಟಕ್ಕೆ)




ಸಂಪುಟ-೩ ಸಂಚಿಕೆ - ೮ ಮಾರ್ಚ್ ೨೦೦೨

*ಪ್ರಧಾನ ಸಂಪಾದಕ*

ಜಿ. ರಾಮಕೃಷ್ಣ

*ಸಂಪಾದಕ ಮಂಡಲಿ*

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಚಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ

*ವ್ಯವಸ್ಥಾಪಕರು*

ಎಸ್. ಸುರೇಂದ್ರ
ಎ. ಆರ್. ಉಡುಪ

*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೧ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೨೬

*ಹೊಸತು ಕಚೇರಿಯ ವಿಳಾಸ*




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
e-mail : nkp@bgl.vsnl.net.in

## ಸಂಪಾದಕೀಯ

# ಕೇವಲ ಫಲಾನುಭವಿಗಳಲ್ಲ

ಸರ್ಕಾರ ಘೋಷಿಸಿದ 'ಮಹಿಳಾ ಸಶಕ್ತೀಕರಣ ವರ್ಷ' ಮುಗಿದಿದೆ. 'ಸ್ತ್ರೀ ಶಕ್ತಿ ಪುರಸ್ಕಾರ'ದಂತಹ ವೈಭವದ ಸಮಾರಂಭಗಳಿಂದ ಹಿಡಿದು ವಿವಿಧ ರೀತಿಯ ವಿಚಾರ ಸಂಕಿರಣ, ಸಭೆ, ಸಮಾರಂಭ ಉತ್ಸವಗಳನ್ನು ವರ್ಷದುದ್ದಕ್ಕೂ ನಡೆಸಿ ಮಹಿಳಾ ಸಶಕ್ತೀಕರಣಕ್ಕೆ ತಮ್ಮ ಕೈಂಕರ್ಯವನ್ನು ಸಲ್ಲಿಸಿಬಿಟ್ಟಿದ್ದೇವೆಂದು ಬೀಗುವ ಸರ್ಕಾರ ಮತ್ತು ಅಧಿಕಾರಾರೂಢರಾದ ನಮ್ಮ ರಾಜಕಾರಣಿಗಳ ಕಾರ್ಯವೈಖರಿ ಹಲವಾರು ಅನುಮಾನಗಳನ್ನು ನಮ್ಮಲ್ಲಿ ಮೂಡಿಸುತ್ತದೆ. ಮಹಿಳಾ ಜಗತ್ತಿನ ಆಗುಹೋಗುಗಳಿಗೆ ಸರ್ಕಾರ ಸ್ಪಂದಿಸುತ್ತಿರುವ ರೀತಿ ನಿಜಕ್ಕೂ ಬೆಚ್ಚಿಬೀಳಿಸುತ್ತದೆ.

ಸ್ವಾತಂತ್ರ್ಯಾನಂತರದ ದಿನಗಳಿಂದಲೂ ಮಹಿಳೆಯರ ಜಾಗೃತಿಯ ಬಗ್ಗೆ, ಕಲ್ಯಾಣದ ಬಗ್ಗೆ, ಮಾತನಾಡುತ್ತಲೇ ಬಂದ ಸರ್ಕಾರ ಮತ್ತು ಸರ್ಕಾರದ ಅಭಿವೃದ್ಧಿ ಯೋಜನೆಗಳು ಮಹಿಳೆಯರನ್ನು ಈ ಯೋಜನೆಗಳ ಫಲಾನುಭವಿಗಳನ್ನಾಗಿ ಮಾತ್ರ ಗುರುತಿಸಿದೆ; ಇಲ್ಲವೇ ಸಾಮಾಜಿಕ ದೌರ್ಜನ್ಯಗಳಿಂದ ರಕ್ಷಣೆ ಬಯಸುವ ಅರಕ್ಷಿತರನ್ನಾಗಿಯೇ ಗುರುತಿಸಲಾಗಿದೆ. ಇಷ್ಟಾದರೂ ಈ ಎರಡು ಪಾತ್ರಗಳನ್ನೂ ನಿರ್ವಹಿಸಲು ಸರ್ಕಾರ ಸಂಪೂರ್ಣವಾಗಿ ಸೋತಿದೆ. ಇದಕ್ಕೆ ಮುಖ್ಯಕಾರಣ ಮಹಿಳೆಯರನ್ನು ಸಮಾಜ ನಿರ್ಮಾಣ ಕಾರ್ಯದಲ್ಲಿ ಸಶಕ್ತವಾಗಿ ಪಾಲ್ಗೊಳ್ಳಬಹುದಾದ ಹಾಗೂ ಪಾಲ್ಗೊಳ್ಳಬೇಕಾದ ಸ್ವತಂತ್ರ ಪ್ರಜೆಗಳನ್ನಾಗಿ ಸರ್ಕಾರ ಭಾವಿಸದೇ ಇರುವುದು.

ಆದರೆ ಎಂಭತ್ತರ ದಶಕದಲ್ಲಿ ಗಟ್ಟಿಗೊಳ್ಳುತ್ತಾ ಹೊರಟ ಸಂಘಟಿತ ಮಹಿಳಾ ಸಮುದಾಯವು 'ಮಹಿಳಾ ಅಭಿವೃದ್ಧಿ'ಗೆ ಬೇರೆಯದೇ ಆದ ವ್ಯಾಖ್ಯಾನವನ್ನು ರೂಪಿಸಿತು. ಮಹಿಳೆಯರ ಕಲ್ಯಾಣದ ಜೊತೆಗೆ ಮಹಿಳೆಯರ ಸಶಕ್ತೀಕರಣದ ಅಗತ್ಯತೆ ಮತ್ತು ಅನಿವಾರ್ಯತೆಯನ್ನು ಮನದಟ್ಟು ಮಾಡಿಕೊಡುವ ಮತ್ತು ಅದಕ್ಕಾಗಿ ಹೋರಾಡುವ ಅಗತ್ಯವನ್ನು ಪ್ರಗತಿಗಾಮಿ ಮಹಿಳಾ ಸಂಘಟನೆಗಳು ತೋರಿಸಿಕೊಟ್ಟವು. ಈ ಎಲ್ಲ ಪ್ರಕ್ರಿಯೆಗಳಿಂದಾಗಿ ಹುಟ್ಟಿದ ಎಚ್ಚರ ಸರ್ಕಾರಿ ಕಾರ್ಯಕ್ರಮಗಳನ್ನು, ಕಾರ್ಯವೈಖರಿಯನ್ನು , ಕೃಪಾಕಟಾಕ್ಷವೆಂದು ಸ್ವೀಕರಿಸದೆ ತಮ್ಮ ಹಕ್ಕುಗಳ ಬಗ್ಗೆ ಜಾಗೃತರಾಗಬೇಕಾದ ಅಗತ್ಯವಾಗಿ ರೂಪಿಸಿತು.

ಸರ್ಕಾರದ ದೃಷ್ಟಿಯಲ್ಲಿ ಇಂದು ಮಹಿಳೆ ಒಂದು ಪ್ರಮುಖ ವೋಟ್ ಬ್ಯಾಂಕ್ ಆಗಿದ್ದಾಳೆ. ಅದನ್ನು ದೃಷ್ಟಿಯಲ್ಲಿರಿಸಿಕೊಂಡೇ ಅವಳನ್ನು ಕುರಿತ ಅಭಿವೃದ್ಧಿ ಯೋಜನೆಗಳು ರೂಪಿತವಾಗುತ್ತವೆ. ಉದಾಹರಣೆಗೆ, ಈ ವರ್ಷ ಸರ್ಕಾರ ರೂಪಿಸಿದ 'ಸ್ತ್ರೀ ಶಕ್ತಿ' ಕಾರ್ಯಕ್ರಮದ ಲಾಭ ಪಡೆದ ಹಲವಾರು ಮಹಿಳೆಯರು ಈ ಯೋಜನೆಯನ್ನು ಯಶಸ್ವಿಯಾಗಿ ಬಳಸಿಕೊಂಡು ಆರ್ಥಿಕ ಸ್ವಾವಲಂಬನೆಯನ್ನು ಸಾಧಿಸಿದ್ದಲ್ಲದೆ, ಹೊರಜಗತ್ತಿನ ತಿಳುವಳಿಕೆಯಿಂದ ಮೂಡಿದ ಜಾಗೃತಿಯಿಂದಾಗಿ ತಮ್ಮ ಸುತ್ತಮುತ್ತಲಿನ ಸಮಸ್ಯೆಗಳಿಗೆ ಕ್ರಿಯಾಶೀಲವಾಗಿ ಸ್ಪಂದಿಸುವ ಮನೋಭಾವ ಬೆಳೆಸಿಕೊಂಡರು. ಕೆಲವೆಡೆ ಮದ್ಯದಂಗಡಿಗಳ ವಿರುದ್ಧ ಪ್ರತಿಭಟಿಸಿ ಬೀದಿಗಿಳಿದರು. ಯಾರಾದರೂ ಮೆಚ್ಚಬಹುದಾದ ಮಹಿಳೆಯರ ಇಂತಹ ಚಟುವಟಿಕೆಗಳನ್ನು ಹತ್ತಿಕ್ಕುವ ಕೆಲಸ ಸರ್ಕಾರ ಮಾಡಿದ್ದು ದುರದೃಷ್ಟಕರ. ಹೆಂಗಸರ ಈ ಜಾಗೃತಿಯ ಬೆಳವಣಿಗೆಗೆ ಸಂತೋಷಪಡುವುದರ ಬದಲು ಮದ್ಯದಂಗಡಿಗಳ ಮಾಲಿಕರಿಗೆ ಪೊಲೀಸ್ ಬೆಂಬಲ ಕೊಟ್ಟು ಸ್ವಸಹಾಯ ಗುಂಪುಗಳ ವಿರುದ್ಧ ಸರ್ಕಾರ ಸಮರ ಸಾರಿದೆ. ಕೆಲವು ಊರುಗಳಲ್ಲಿ ಸ್ವಸಹಾಯ ಗುಂಪುಗಳು ಕೇವಲ ಆರ್ಥಿಕ ಚಟುವಟಿಕೆಯಲ್ಲಿ ತೊಡಗುವುದನ್ನು ಬಿಟ್ಟು ಉಳಿದ ಸಾಮಾಜಿಕ ಕಾರ್ಯಗಳಲ್ಲಿ ಯಾಕೆ ತೊಡಗಬೇಕು ಎಂಬ ಬೆದರಿಕೆಯನ್ನು ಹಾಕಲಾಗಿದೆ. ಹಾಗಾದರೆ ಸರ್ಕಾರದ 'ಮಹಿಳಾ ಕಲ್ಯಾಣ'ದ ಉದ್ದೇಶ ಪ್ರಚಾರ ತಂತ್ರವಲ್ಲದೆ ಮತ್ತೇನು ?

ಮಹಿಳಾ ಆಯೋಗ, ಮಹಿಳಾ ಮಂಡಳಿಗಳ ನೇಮಕಾತಿಗಳು ರಾಜಕೀಯದ ಅಧಿಕಾರದ ಹಂಚುವಿಕೆಯ ವಿವಿಧ ವಶೀಲಿ, ಪ್ರಭಾವಗಳ ವ್ಯವಹಾರಗಳಾಗಿವೆಯೇ ಹೊರತು ಮಹಿಳೆಯರ ಕಾಳಜಿಗಳನ್ನು ಪ್ರತಿನಿಧಿಸುವುದಿಲ್ಲ. ರಾಷ್ಟ್ರೀಯ ಮಹಿಳಾ ಆಯೋಗಕ್ಕೆ ಇತ್ತೀಚೆಗೆ ಆಯ್ಕೆಯಾಗಿರುವ ಶ್ರೀಮತಿ ಪೂರ್ಣಿಮಾ ಆದ್ವಾನಿ ಮಹಿಳಾ ಚಳುವಳಿಗಾರರಿಂದ ಟೀಕೆಗೆ ಒಳಗಾದವರು, 'ಅತ್ಯಾಚಾರ : ಒಂದು ಕಾನೂನಿನ ಅಧ್ಯಯನ' ಎಂಬ ಪುಸ್ತಕ ಬರೆದು ಅದರಲ್ಲಿ ಮುಸ್ಲಿಂ ಆಕ್ರಮಣಕಾರರೆಲ್ಲ ಅತ್ಯಾಚಾರಿಗಳು ಎಂದು ಬರೆದವರು, ಅಧಿಕಾರದಲ್ಲಿರುವ ಭಾರತೀಯ ಜನತಾ ಪಕ್ಷವು ಪ್ರತಿಪಾದಿಸುವ 'ಹಿಂದುತ್ವ'ದ ರಾಜಕೀಯ ಪೋಷಕದ್ರವ್ಯ ಒದಗಿಸಿದವರು. ಇಂತಹವರು ಯಾವ ಮಹಿಳೆಯರ ಕಾಳಜಿಯನ್ನು ಪ್ರತಿನಿಧಿಸುತ್ತಾರೆ ? ಕೇಂದ್ರ ಆಯೋಗದ ಕಥೆ ಇದಾದರೆ ಕರ್ನಾಟಕದಲ್ಲಿ ಎರಡೂವರೆ ವರ್ಷಗಳಿಂದ ಮಹಿಳಾ ಆಯೋಗವೇ ರಚನೆಯಾಗಿಲ್ಲ! ಶಾಸನಬದ್ಧವಾಗಿ ಮಾಡಬೇಕಾದ ಈ ಮುಖ್ಯಕಾರ್ಯವನ್ನು ಬಿಟ್ಟು ನಮ್ಮ ಮುಖ್ಯಮಂತ್ರಿಗಳು ಮಹಿಳೆಯರಿಗಾಗಿ ಟಾಸ್ಕ್ ಫೋರ್ಸ್ ಮಾಡಿದ್ದಾರೆ; ಸಶಕ್ತರಾದ ಮಹಿಳೆಯರಿಗೆ ಸನ್ಮಾನ ಮಾಡಹೊರಟಿದ್ದಾರೆ. ದೈನಂದಿನ ಬದುಕಿನಲ್ಲಿ ಮಹಿಳೆಯರು ಎದುರಿಸುತ್ತಾ ಬಂದಿರುವ ಹಲವಾರು ದೌರ್ಜನ್ಯಗಳನ್ನು ಕುರಿತು ದೂರು ಸಲ್ಲಿಸಲು ಕರ್ನಾಟಕದಲ್ಲಿ ಮಹಿಳಾ ಆಯೋಗವೇ ಇಲ್ಲವಾಗಿದೆ. ಗುಲಬರ್ಗಾ ಮತ್ತು ಹೈದರಾಬಾದ್‌ನ ಗಡಿಭಾಗಗಳಲ್ಲಿ ಲಂಬಾಣಿ ತಾಂಡಗಳ ಮಕ್ಕಳನ್ನು ದತ್ತು ತೆಗೆದುಕೊಂಡು ವಿದೇಶಕ್ಕೆ ರವಾನಿಸುತ್ತಿದ್ದ ಕಳ್ಳ ವ್ಯವಹಾರಗಳ ವಿರುದ್ಧ ಇಲ್ಲಿನ ಸ್ಥಳೀಯ ಮಹಿಳಾ ಸಂಘಟನೆಗಳು ಕೇಂದ್ರ ಆಯೋಗಕ್ಕೆ ದೂರಿತ್ತಾಗ ರಾಷ್ಟ್ರೀಯ ಮಹಿಳಾ ಆಯೋಗವು ಸ್ಥಳಕ್ಕೆ ಭೇಟಿ ನೀಡಿತ್ತು. ಬಳ್ಳಾರಿಯ ಎರ್ರೆಮ್ಮನ ಬೆತ್ತಲೆ ಪ್ರಸಂಗ, ದಿನನಿತ್ಯ ನಡೆಯುತ್ತಿರುವ ಅತ್ಯಾಚಾರ, ವರದಕ್ಷಿಣೆ ಸಾವು - ಮುಂತಾದ ಹಲವಾರು ದೌರ್ಜನ್ಯಗಳ ವಸ್ತುಸ್ಥಿತಿಯನ್ನು ಪರಿಶೀಲಿಸಿ ಮಹಿಳೆಯರಿಗೆ ನ್ಯಾಯ ದೊರಕಿಸಬೇಕಾದ ಜವಾಬ್ದಾರಿಯ ಮಹಿಳಾ ಆಯೋಗದ ಅಗತ್ಯತೆಯೇ ನಮ್ಮ ಮುಖ್ಯಮಂತ್ರಿಗಳಿಗೆ ಕಾಣದಿರುವುದು ಜಾಣ ಕುರುಡಾಗಿ ಕಾಣುತ್ತಿದೆ. ಕರ್ನಾಟಕವನ್ನು ವಿಶ್ವಭೂಪಟದಲ್ಲಿ ದಾಖಲಿಸುವ ಸಂಭ್ರಮದಲ್ಲಿರುವ ಮುಖ್ಯಮಂತ್ರಿಗಳಿಗೆ ರಾಜ್ಯದ ಮಹಿಳೆಯರು ತೀರಾ ಅಗ್ಗವಾಗಿ, ಅವರಿಗಾಗಿ ಆಯೋಗ ರಚಿಸುವುದು ಅನಗತ್ಯವಾಗಿ, ಕಂಡರೆ ಇದನ್ನು ಇಡೀ ಮಹಿಳಾ ಸಮುದಾಯ ಪ್ರತಿಭಟಿಸಲೇಬೇಕಾಗುತ್ತದೆ. ಸರಕಾರ ಹಮ್ಮಿಕೊಳ್ಳುವ ಕಲ್ಯಾಣ ಕಾರ್ಯಕ್ರಮಗಳು ಮತ್ತು ಸೌಲಭ್ಯಗಳನ್ನು ನಿರೀಕ್ಷಿಸುವ ಕೇವಲ ಫಲಾನುಭವಿಗಳ ಪಾತ್ರವನ್ನು ಮೀರಿ ಮಹಿಳೆಯರು ತಮ್ಮ ಹಕ್ಕುಗಳ ಬಗ್ಗೆ ಸರ್ಕಾರಕ್ಕೆ ಮನವರಿಕೆ ಮಾಡಿಕೊಡುವ, ಪ್ರಜಾಪ್ರಭುತ್ವಕ್ಕೆ ಅರ್ಥ ತುಂಬುವ ಕೆಲಸ ಮಾಡಬೇಕಾದ್ದು ಇಂದಿನ ಅಗತ್ಯವಾಗಿದೆ.

**ಡಾ|| ಎನ್. ಗಾಯತ್ರಿ**

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

# ಸಾರ್ವಜನಿಕ ಸಂಪತ್ತಿನ ಲೂಟಿ

ಆರ್ಥಿಕ ಉದಾರೀಕರಣ ಕಾರ್ಯಕ್ರಮದ ಅಂಗವಾಗಿ ''ಬಂಡವಾಳ ಹಿಂತೆಗೆದುಕೊಳ್ಳುವುದು'' ಎಂಬ ನಾಟಕದ ಮತ್ತೊಂದು ಮುಖ್ಯ ಅಂಕ ಈಗಷ್ಟೆ ಅಭಿನಯವಾಯಿತು. ಸಾರ್ವಜನಿಕ ಉದ್ದಿಮೆಗಳು ದೇಶದ ಆರ್ಥಿಕತೆಯ ಬೆನ್ನೆಲುಬು ಎಂದು ಪ್ರಧಾನಿಯವರು ಚುನಾವಣಾ ಪ್ರಚಾರ ಭಾಷಣ ಮಾಡುತ್ತಿದ್ದಂತೆಯೇ, ವಿದೇಶ ಸಂಚಾರ ನಿಗಮ, ಐಬಿಸಿ ಪೆಟ್ರೋಲ್ ಘಟಕ ಮತ್ತು ಕೆಲವು ಹೋಟೆಲುಗಳನ್ನು ಮಾರಾಟ ಮಾಡಿದ ಸುದ್ದಿ ಪ್ರಕಟವಾಯಿತು ! ಇಂಥ ತೀರ್ಮಾನಗಳನ್ನು ತೆಗೆದುಕೊಳ್ಳುವ ಆರ್ಥಿಕ ಪ್ರಬಲರು ಸರ್ಕಾರದ ಹೊರಗಿದ್ದಾರೆಂಬುದು ಸ್ಪಷ್ಟ.

ವಿದೇಶ ಸಂಚಾರ ನಿಗಮ ಲಾಭದಾಯಕ ಉದ್ದಿಮೆ. ಇದನ್ನು ಮಾರಲು ಯಾವ ಅಗತ್ಯವೂ ಇರಲಿಲ್ಲ. ಇದು ಅಮೆರಿಕದ ಒತ್ತಡಕ್ಕೆ ಮಣಿದು ನಡೆಸುತ್ತಿರುವ ಕಾರ್ಯಕ್ರಮವಷ್ಟೆ. ಈ ಸಂಸ್ಥೆಯ ನಿಧಿಯನ್ನು ಮೊದಲು ಸರ್ಕಾರದ ಖಾತೆಗೆ ತೆಗೆದುಕೊಂಡು ಹಾಗೂ ಅಂತರರಾಷ್ಟ್ರೀಯ ಒಪ್ಪಂದದಂತೆ ವಿದೇಶೀ ಸಂಪರ್ಕದ ಬೆಲೆಯನ್ನು ಕೆಳಗಿಳಿಸಿ, ಅದರ ಮಾರುಕಟ್ಟೆಯ ಷೇರಿನ ಬೆಲೆಯನ್ನು ಕೃತಕವಾಗಿ ಕೆಳಮಟ್ಟಕ್ಕೆ ಇಳಿಸಲಾಯ್ತು. ಈಗ ಮಾರುಕಟ್ಟೆಯ ಬೆಲೆಗಿಂತ ತೀರ ಹೆಚ್ಚಿನ ಬೆಲೆಗೆ ಟಾಟಾ ಕಂಪೆನಿಗೆ ಶೇ. ೨೫ರಷ್ಟು ಷೇರನ್ನು ಮಾರಿ, ತುಂಬಾ ಲಾಭ ಪಡೆದೆವೆಂಬಂತೆ ಹೇಳಲಾಗುತ್ತಿದೆ. ಈಗಾಗಲೇ ಟಾಟಾ ಕಂಪೆನಿ ವಿದೇಶ ಸಂಚಾರ ನಿಗಮದ ಆಡಳಿತ ಸೂತ್ರವನ್ನು ಕೈಗೆತ್ತಿಕೊಂಡಿದೆ. ಒಂದು ಸಮಾಧಾನವೆಂದರೆ ಈ ಸಂಸ್ಥೆ ಸದ್ಯದಲ್ಲಂತೂ ಪರದೇಶೀ ಕಂಪೆನಿಗಳ ವಶವಾಗದ್ದು. ಆದರೆ ಟಾಟಾ ಕಂಪೆನಿ, ಉತ್ತಮ ತಂತ್ರಜ್ಞಾನವನ್ನು ಪಡೆಯುವ ಮತ್ತು ಅಧಿಕ ಬಂಡವಾಳ ತರುವ ನೆವವಿಟ್ಟು ಪರದೇಶೀ ಪಾಲುದಾರರನ್ನು ತರುವಂತಾದರೆ ಆಶ್ಚರ್ಯವಿಲ್ಲ. ಈ ಒಂದು ವ್ಯವಹಾರವನ್ನು ಸರ್ಕಾರ ತನ್ನ ಹಣದ ಕೊರತೆಯನ್ನು ತೂಗಿಸಿಕೊಳ್ಳಲು ಮಾಡಿದ ವ್ಯವಹಾರವೆನ್ನುವುದಕ್ಕಿಂತ ಖಾಸಗೀಕರಣಗೊಳಿಸುವ ತಂತ್ರವಾಗಿ ಕೈಗೊಂಡಂತೆ ತೋರುತ್ತದೆ.

ಐಬಿಪಿಯನ್ನು ಐಓಸಿ ಪೆಟ್ರೋಲಿಯಂ ಕಂಪೆನಿಗೆ ಮಾರಿರುವುದು ಒಂದು ಸಾರ್ವಜನಿಕ ಉದ್ದಿಮೆಯನ್ನು ಇನ್ನೊಂದು ಸಾರ್ವಜನಿಕ ಉದ್ದಿಮೆಯೊಡನೆ ಸೇರಿಸಿದಂತಾಗಿದೆ. ''ಪೆಟ್ರೋಲಿಯಂ ಬೆಲೆ ತೂಗಿಸುವ ನಿಧಿ''ಯಿಂದ ಸರ್ಕಾರ ತನ್ನ ಕೊರತೆಯನ್ನು ಸ್ವಲ್ಪ ಸರಿಪಡಿಸಿಕೊಳ್ಳಲು ಐದು ಸಹಸ್ರ ಕೋಟಿ ರೂಪಾಯಿಯನ್ನು ಹಿಂತೆಗೆದುಕೊಂಡಿತ್ತು. ಇದರಿಂದಾಗಿ ಬರುವ ಏಪ್ರಿಲ್‌ನಲ್ಲಿ ಪೆಟ್ರೋಲ್, ಡೀಸೆಲ್ ಮತ್ತು ಇತರ ಉತ್ಪನ್ನಗಳಲ್ಲಿ ಬೆಲೆ ಏರಿಕೆ ಆಗುವುದು ಖಂಡಿತ. ಈ ಹಿನ್ನೆಲೆಯಲ್ಲಿ ಐಓಸಿಯನ್ನು ಖಾಸಗಿವಲಯದಲ್ಲಿ ಕೊಂಡುಕೊಳ್ಳುವವರು ಮುಂದಾಗುತ್ತಿರಲಿಲ್ಲ. ಅದೇ ಸಮಯದಲ್ಲಿ ಸರ್ಕಾರಕ್ಕೆ ತನ್ನ ಬಜೆಟ್ ಕೊರತೆಯನ್ನು ನೀಗಿಸಿಕೊಳ್ಳಲು ಮತ್ತೊಂದು ಚಮತ್ಕಾರ ಮಾರ್ಗವಾಗಿ ಈಗ ಈ ಸಾರ್ವಜನಿಕ ಉದ್ದಿಮೆಗಳ ಪರಸ್ಪರ ವಿಲೇವಾರಿ ಆಗಿದೆ. ಏಪ್ರಿಲ್‌ನಲ್ಲಿ ಅನಿವಾರ್ಯವಾಗಿ ಐಬಿಸಿ ಐಓಬಿಗಳು ಗ್ರಾಹಕ ಬೆಲೆ ಏರಿಸುತ್ತವೆ. ಈ ಬೆಲೆ ಏರಿಕೆ ಪರೋಕ್ಷವಾಗಿ ಖಾಸಗಿಯ ರಿಲೈಯನ್ಸ್ ಕಂಪೆನಿಗೆ ಲಾಭ ತಂದುಕೊಡುತ್ತದೆ. ಒಂದು ವೇಳೆ ಸಂಪೂರ್ಣ ಖಾಸಗೀಕರಣ ಆಗಿ, ವಿದೇಶಿ ಕಂಪೆನಿಗಳು ಒಳಹೊಕ್ಕರೆ, ಬಹುಶಃ ಅವರ ಸಾಮರ್ಥ್ಯ ಮತ್ತು ಹಗುರವಾದ ಬೆಲೆಯ ಮುಂದೆ ಐಓಸಿಯ ಬಹುಭಾಗ ಸುಲಭ ದರದಲ್ಲಿ ರಿಲೈಯನ್ಸ್ ಬುಟ್ಟಿಗೆ ಹೆಜ್ಜೆ ಹೆಜ್ಜೆಯಾಗಿ ಬೀಳುವವರೆಗೂ ಈ ನಾಟಕವನ್ನು ನೋಡುತ್ತಿರಬಹುದು. ದೂರಸಂಚಾರದ ಕತೆಯೂ ಇದೇ ಆಗುವ ಎಲ್ಲ ಸೂಚನೆಗಳಿವೆ. ಇದು ಒಟ್ಟಿನಲ್ಲಿ ಆಳುವ ವರ್ಗದೊಳಗಿನ ಆಂತರಿಕ ವ್ಯವಹಾರವೆನಿಸುವಷ್ಟು, ಸಂಬಂಧಪಟ್ಟ ಬಂಡವಳಿಗರು ಪರಸ್ಪರ ಒಪ್ಪಂದದಂತೆ ಹಂಚಿಕೊಂಡಂತೆ ಕಾಣುತ್ತಿದೆ. ಸಾರ್ವಜನಿಕರಿಗೆ ಇದರಲ್ಲಿ ಧ್ವನಿಗೂಡಿಸಲು ಅವಕಾಶವಿದ್ದರೆ ಅದರ ಪರಿಯೇ ಬೇರೆಯಾಗುತ್ತಿತ್ತು. ಇನ್ನು ಪಂಚತಾರಾ ಹೋಟೆಲುಗಳ ವಿಲೇವಾರಿ : ಈ ವ್ಯವಹಾರ ಸರ್ಕಾರಿ ಕ್ಷೇತ್ರದಿಂದ ಹೊರಹೋದಷ್ಟು ಒಳ್ಳೆಯದು. ಕಾರಣ ಇವುಗಳು ಆಳುವವರ, ರಾಜಕೀಯ ಪ್ರತಿನಿಧಿಗಳ, ಉನ್ನತ ಅಧಿಕಾರಿಗಳ ವಿನೋದರಂಗವಾಗಿ, ಸರ್ಕಾರಿ ಆಸ್ತಿಯ ದುರುಪಯೋಗವಾಗುತ್ತಿದ್ದ ಕ್ಷೇತ್ರ. ಒಂದು ಖಂಡನೀಯ ಸಂಗತಿಯೆಂದರೆ ಆರ್ಥಿಕತೆಯಲ್ಲಿ ಇಳಿಮುಖವಿದ್ದು ಪ್ರವಾಸ ಮುಂತಾದ ಕ್ಷೇತ್ರಗಳು ಸೊರಗಿದ್ದು ಬೆಲೆ ಕುಸಿದಿರುವಾಗ, ಹಲವಾರು ದಶಕಗಳಿಂದ ಸಾರ್ವಜನಿಕ ಬೆಲೆ ತೆತ್ತು ಬೆಳೆಸಿದ್ದ ಇವುಗಳನ್ನು ಬಲು ಅಗ್ಗದಲ್ಲಿ ಮಾರುತ್ತಿರುವುದು.

ಈ ಯಾವ ಕ್ರಮದಿಂದಲೂ ಬಜೆಟ್ ಕೊರತೆಯನ್ನು ನೀಗಿಸಿಕೊಳ್ಳಲು ಯಾವ ಮಹತ್ವಮಾಣದ ನೆರವೂ ದೊರಕದೆ ಇರುವಾಗ ಈಗಿನ ತುರ್ತಿನ ಕ್ರಮಕ್ಕೆ ಅರ್ಥವಿಲ್ಲ. ಯಾರೋ ಸಂದಿಯಲ್ಲಿ ಸಮಾರಾಧನೆ ಮಾಡಿಕೊಂಡಂತೆ ಕಂಡರೆ ಆಶ್ಚರ್ಯವಿಲ್ಲ. ಮುಂಬರುವ ಖಾಸಗೀಕರಣದಲ್ಲಿ ಬಂಡವಳಿಗರು ಪರಸ್ಪರ ಒಪ್ಪಂದಕ್ಕೆ ಬಂದು, ತೆರೆಮರೆಯಲ್ಲಿ ಅಗ್ಗದಲ್ಲಿ ಸಾರ್ವಜನಿಕ ಆಸ್ತಿಯನ್ನು ಲಪಟಾಯಿಸುವ ಮಾರ್ಗ ಈಗ ಸ್ಪಷ್ಟವಾಗಿದೆ. ಅರುಣ್ ಶೌರಿಗೆ ಭಾರತರತ್ನ ಕೊಡಿಸಿದರೆ ಆಶ್ಚರ್ಯವಿಲ್ಲ! ಈ ಮಧ್ಯೆ ಮರೆಮಾಚುತ್ತಿರುವ ಮುಖ್ಯ ವಿಷಯ ಇದು: ಸಾರ್ವಜನಿಕ ಉದ್ದಿಮೆಗಳನ್ನು ಮಾರಾಟ ಮಾಡಿ ಬಂದ ಹಣವನ್ನು ಕಾರ್ಮಿಕರ ಸಾಮಾಜಿಕ ಭದ್ರತೆಗೆ ನಿರ್ಮಿಸಲಾಗುವ ಒಂದು ನಿಧಿಯಾಗಿ ನೋಡುತ್ತೇವೆ ಎಂದು ಹೇಳಲಾಗಿತ್ತು. ಅದನ್ನು ಸರ್ಕಾರದ ಅಹನ್ಯಹನಿ ವೆಚ್ಚಕ್ಕೆ ಉಪಯೋಗಿಸುವುದಿಲ್ಲ ಎಂದೂ ಹೇಳಲಾಗಿತ್ತು. ಆದರೆ ಆಗುತ್ತಿರುವುದು ಈ ಹಣದ ದುರುಪಯೋಗ. ದೇಶಾದ್ಯಂತ ಮನೆಮನೆಯಲ್ಲೂ ಕೆಲಸದಲ್ಲಿದ್ದವರೂ ನಿರುದ್ಯೋಗಿಗಳಾಗಿ ಮನೆಗೆ ಹಿಂತಿರುಗುತ್ತಿದ್ದಾರೆ. ಹೊಸ ಉದ್ದಿಮೆಗಳಿಲ್ಲದೆ, ಬಂಡವಾಳ ಹೂಡಿಕೆಯಿಲ್ಲದೆ, ಯುವಕರಿಗೆ ಉದ್ಯೋಗ ದೊರೆಯುತ್ತಿಲ್ಲ. ರಾಷ್ಟ್ರದ ಸಾಧಾರಣ ಜನತೆಯ ಬಹುಕಾಲದ ಉಳಿತಾಯವನ್ನೆಲ್ಲಾ ದಿವಾಳಿ ಮಾಡುತ್ತಿರುವ ಉದ್ದಿಮೆಗಳು, ವಂಚಕ ಹಣಕಾಸು ಸಂಸ್ಥೆಗಳು, ಸಾಲ ಹಿಂತಿರುಗಿಸದ ಉದ್ದಿಮೆದಾರರು, ವರ್ತಕರು ದೋಚಿಕೊಳ್ಳುತ್ತಿದ್ದಾರೆ. ಸಾರ್ವಜನಿಕ ಉದ್ದಿಮೆಗಳ ಮಾರಾಟದಿಂದ ವಸೂಲಾದ ಹಣವನ್ನು ದುರ್ವಿನಿಯೋಗ ಮಾಡುವುದರ ವಿರುದ್ಧ ಒಂದು ಸಾರ್ವಜನಿಕ ಹಿತಾಸಕ್ತಿಯ ಮೊಕದ್ದಮೆ ಹೂಡಿದರೆ ಹೇಗೆ ?

ಸೊರಗುತ್ತಿರುವ ಆರ್ಥಿಕತೆಯ ಪುನಶ್ಚೇತನಕ್ಕೆ ಸಾರ್ವಜನಿಕ ಹಣ ಹೂಡಿಕೆ ಅತಿ ಅವಶ್ಯ, ತುರ್ತಾಗಿ ಆಗಬೇಕು. ಒಂದು

(೭ನೇ ಪುಟಕ್ಕೆ )



ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☏ : ೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧ ☏ : ೪೪೧೦೦೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪ ☏ : ೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨ ☏ : ೨೪೩೦೨




ಮಂಗಳೂರಿನ ಬೀದಿಗಳಲ್ಲಿ 'ಎಬಿವಿಪಿ' ವಿದ್ಯಾರ್ಥಿ ಸಂಘಟನೆಗಳು 'ಭಾರತ ಮಾತೆಗೆ ಹೂ ಹಾಕಿ, ಪಾಕಿಸ್ತಾನಕ್ಕೆ ಬಾಂಬ್ ಹಾಕಿ' ಎನ್ನುವ ಘೋಷಣ ವಾಕ್ಯಗಳನ್ನು ಬರೆದಿದ್ದಾರೆ. ಪೋಟೊ ಕಾಯಿದೆ ಯಾರ ಮೇಲೆ ಪ್ರಯೋಗಿಸಬೇಕೆಂದು ಈಗ ಕೇಂದ್ರ ಸರ್ಕಾರಕ್ಕೆ ಸ್ಪಷ್ಟವಾಗಿರಬೇಕು. ಮದ್ರಸಾಗಳಲ್ಲಿ ಉಗ್ರಗಾಮಿ ಸಂಘಟನೆಗಳನ್ನು ಬೆಳೆಸುತ್ತಾರೆಯೇ ! ಈ ರೀತಿ ಘೋಷಣೆ ಬರೆಯುವವರು ಉಗ್ರಗಾಮಿಗಳೇ !

*ಆನೆಗುಂದಿ* **ಎ. ರಾಧಾಕೃಷ್ಣ**

**'ಹೊಸತು' ಫೆಬ್ರವರಿ ೨೦೦೨**

''ಸ್ವಚ್ಛ ಬೆಂಗಳೂರಿನ ಹಿಂದಿನ ಕಣ್ಣೀರಿನ ಕತೆ'' ಓದಿ ಕರುಳು ಕಿವುಚಿದಂತಾಯಿತು. ರಾಜಧಾನಿಯಾದ ಬೆಂಗಳೂರಿನಲ್ಲಿ ಅದರಲ್ಲೂ ಸರ್ಕಾರದ ಸ್ವಾಮ್ಯದ ಬೆಂಗಳೂರು ಮಹಾನಗರಪಾಲಿಕೆಯಲ್ಲಿ ಕಾರ್ಯನಿರತ ಸ್ವಚ್ಛ ಕಾರ್ಮಿಕರ ಗೋಳಿನ ಕತೆ ನಿಜಕ್ಕೂ ಅರಣ್ಯರೋದನ. ಕಾರ್ಮಿಕ ಇಲಾಖೆಯು ಈ ದಿಸೆಯಲ್ಲಿ ಯಾವುದೂ ಕಾನೂನಿನ ಕ್ರಮ ಜರುಗಿಸದಿದ್ದಲ್ಲಿ ಈ ಕೆಲಸಗಾರರ ಗೋಳು 'ಮುಗಿಯದ ಕಥೆ !' ಸರ್ಕಾರದ ಸಮ್ಮುಖದಲ್ಲಿಯೇ ಇಂತಹ ಕಾರ್ಮಿಕ ಶೋಷಣೆಯಾದಲ್ಲಿ ಇನ್ನು ಖಾಸಗಿ ಮತ್ತು ಮಾಲೀಕಶಾಹಿ ವರ್ಗದಡಿಯಲ್ಲಿನ ಕಾರ್ಮಿಕರ ಬವಣೆ ಲೆಕ್ಕಿಸುವವರಾರು ?

ಬೆಂಗಳೂರು ಮಹಾನಗರ ಪಾಲಿಕೆ ತನ್ನಲ್ಲಿನ ಗುತ್ತಿಗೆ ನೌಕರರ ಪಾಲಿಗೆ ಮಹಾನರಕ ಪಾಲಿಕೆಯಾಗಿರುವುದು ಶೋಚನೀಯವಲ್ಲದೆ ಖಂಡನೀಯವೂ ಹೌದು.

*ಬೆಂಗಳೂರು* **ನೆ. ಲ. ರಾಂ**

**'ಹೊಸತು' ವಿಶೇಷ ಸಂಚಿಕೆ** ನೋಡಿದೆ. ತುಂಬಾ ಸೊಗಸಾಗಿದೆ. ತಮ್ಮ ಸಾಧನೆ ಪ್ರಶಂಸನೀಯ. ಪ್ರತಿಯನ್ನು ದೊರಕಿಸಿಕೊಟ್ಟುದಕ್ಕೆ ನಾನು ಉಪಕೃತ.

*ಧಾರವಾಡ* **ಪ್ರೊ|| ಎಸ್. ಶೆಟ್ಟರ್**

ಮಹತ್ವದ ಲೇಖನಗಳನ್ನೊಳಗೊಂಡ 'ಹೊಸತು' ಜನವರಿ ವಿಶೇಷ ಸಂಚಿಕೆ ಸರ್ವಾಂಗ ಸುಂದರ. ಎಂ.ಬಿ.ಲಾಲ್ ಅವರ 'ನೂತನ ಭಯೋತ್ಪಾದಕತೆಯತ್ತ' ಲೇಖನವನ್ನು ಹೆತ್ತವರು, ಶಿಕ್ಷಕರು ಹಾಗೂ ಮಕ್ಕಳು ಅವಶ್ಯ ಓದಿ ಚಿಂತನೆ ಮಾಡಬೇಕು. ಈ ಲೇಖನವನ್ನು ಜಿ. ರಾಮಕೃಷ್ಣ ಕನ್ನಡಕ್ಕೆ ಅನುವಾದಿಸಿ ಕನ್ನಡಿಗರಿಗೆ ಮಹದುಪಕಾರ ಮಾಡಿದ್ದಾರೆ.




ನಗರ ಪ್ರದೇಶದಲ್ಲಿ ಮಕ್ಕಳು ೧೦ನೇ ತರಗತಿ ದಾಟಿದೊಡನೆ - ಕಾಲೇಜ್ ಮೆಟ್ಟಲು ಏರಿದೊಡನೆ ಸೈಕಲ್ ಸವಾರಿ ಕೈದು ಮಾಡುತ್ತಾರೆ. ಕಾಲೇಜಿಗೆ ಸೈಕಲ್‌ನಲ್ಲಿ ಹೋದರೆ ಅಪಮಾನವಂತೆ. ಏನಿದ್ದರೂ ಲೂನಾ, ಸ್ಕೂಟರ್, ಬೈಕ್ ಆಗಬೇಕು. 'ತಮಾಷೆ ಮಾಡಿದರೆ ಮಾಡಲಿ, ನಾನು ಸೈಕಲಲ್ಲೇ ಹೋಗುವುದು' ಎಂದು ಈಗ ಯಾವ ಮಕ್ಕಳೂ ಹೇಳುವುದಿಲ್ಲ. ಅಂಥ ಗಟ್ಟಿ ಮನವಿಲ್ಲ. ಕಾರಣವೇನು ? ಆತ್ಮವಿಶ್ವಾಸದ ಕೊರತೆಯೇ ? ಮಹಾಮಹಿಮರ ಜೀವನ ಚರಿತ್ರೆಗಳನ್ನು ಓದದ ಕೊರತೆಯಿಂದಲೋ ? ಐಷಾರಾಮದ ಜೀವನದ ಕಡೆಗೆ ಸೆಳೆದುದರಿಂದಲೋ ? ಎಂದು ನಾನು ಎಷ್ಟೋ ಬಾರಿ ಚಿಂತಿಸಿದ್ದೇನೆ.

ಪ್ರೀತಿಯ ರೀತಿ, ನಾಮಪೀಡಿತರ ಎಡೆಯಲ್ಲಿ ಹಾಸ್ಯಲೇಖನ ರಸಾಯನ ಸೇವಿಸಿದಂತೆ ಖುಷಿ ಕೊಟ್ಟಿತು. ಆರ್. ಎಲ್. ನರಸಿಂಹಯ್ಯ ಕೆಲವು ನೆನಪುಗಳು, ಹೂವಿನಿಂದ ನಾರಿಗೆ ಸ್ವರ್ಗ, ಇದು ಕಾರಣ (ಏಕಾಂಕ) ಇತ್ಯಾದಿ ಲೇಖನಗಳು ಚೆನ್ನಾಗಿತ್ತು.

*ಮೈಸೂರು* **ಮಾಲಾ**

ವಿಶೇಷ ಸಂಚಿಕೆಯನ್ನು ಓದಿದ ನಂತರ ನಿಮಗೆ ಬರೆದು ಅಭಿನಂದನೆಗಳನ್ನು ತಿಳಿಸಬೇಕೆಂದು ಯೋಚಿಸುತ್ತಲೇ ಇದ್ದೆ. ಇಂದು ಫೆಬ್ರವರಿಯ ಸಂಚಿಕೆ ಕೂಡ ಕೈ ಸೇರಿತು. ನಿಮಗೆ ಪತ್ರ ಬರೆದ ನಂತರವೇ ಇದನ್ನು ಓದಬೇಕೆಂದು ತೀರ್ಮಾನಿಸಿ ಬರೆಯುತ್ತಿದ್ದೇನೆ. ಕನ್ನಡದಲ್ಲಿ ಎಷ್ಟೋ ವರ್ಷಗಳ ನಂತರ ಒಂದು ವಿಶೇಷ ಸಂಚಿಕೆಯನ್ನು ಓದಿದ ಅನುಭವವಾಯಿತು. ಪ್ರತಿ ಯೊಂದು ಪುಟವೂ ಒಂದು ನಾಗರಿಕ ಸಮಾಜದಲ್ಲಿ ಎಲ್ಲರಿಗೂ ದೊರಕಬೇಕಾದ ಓದುವಿಕೆಯ ಸಾಮಗ್ರಿ ಎನ್ನಿಸಿತು. ದಯಮಾಡಿ ನನ್ನ ಅಭಿನಂದನೆಗಳನ್ನು ಸ್ವೀಕರಿಸಿರಿ.

*ಬೆಂಗಳೂರು* **ಅಗ್ರಹಾರ ಕೃಷ್ಣಮೂರ್ತಿ**

'ಹೊಸತು' ವಿಶೇಷ ಸಂಚಿಕೆಯನ್ನು ಓದಿದೆ. ಒಟ್ಟಾರೆ ಸಂಚಿಕೆ ಸೊಗಸಾಗಿ ಬಂದಿದೆ. ಎಲ್ಲ ವಿಭಾಗಗಳಲ್ಲೂ ಖ್ಯಾತನಾಮರಷ್ಟೇ ಅಲ್ಲದೆ ಯುವ ಪ್ರತಿಭೆಗಳಿಗೂ ಅವಕಾಶ ನೀಡಿದ್ದೀರಿ. ಹತ್ತು ಹಲವು ಪ್ರಕಾರಗಳಲ್ಲೂ ಉತ್ತಮ ಬರಹಗಳಿವೆ.

ನಿಮ್ಮ ಸಂಪಾದಕೀಯ ಚೆನ್ನಾಗಿದೆ.

ಹೊಸ ವರ್ಷಕ್ಕೆ ಸಂಚಿಕೆ ತರುವಾಗ ಕಳೆದ ವರ್ಷದ ಸವಾಲುಗಳು - ಸೋಲು - ಸಾಧನೆಗಳ ಕುರಿತ ಒಂದು ಸಿಂಹಾವಲೋಕನವುಳ್ಳ ಲೇಖನವನ್ನು ನೀಡಿದರೆ ಅಂದಂದಿನ ಇತಿಹಾಸದ ಅವಲೋಕನ ದೊರಕಿದಂತಾಗುತ್ತದೆ. ಮತ್ತೆ ಮರುಚಿಂತನೆಗೂ ಒಂದು ದಾಖಲೆ ಸಿಕ್ಕಂತಾಗುತ್ತದೆ. ಜನಪ್ರಿಯ ಮುದ್ರಣ ಮಾಧ್ಯಮವು ನೀಡುವ ಸಮಕಾಲೀನ ಚರಿತ್ರೆಯ ಚಿತ್ರಕ್ಕಿಂತ ಭಿನ್ನವಾಗಿ 'ಹೊಸತು' ಭಾರತದ ಸೋಲು-ಸಾಧನೆಗಳ ದಾಖಲೀಕರಣಮಾಡಿದರೆ ಒಳ್ಳೆಯದು.

ನಿಮ್ಮ ಸಂಪಾದಕೀಯಕ್ಕೆ ಈ ಗುಣ ಇದೆ. ಆದರೆ ಒಂದು ಸಮಕಾಲೀನ ಇತಿಹಾಸದ ಅವಲೋಕನವಾಗುವ ಸಮಗ್ರತೆಯಿಲ್ಲ. ಯಾಕೆಂದರೆ ಇದು ಆ ರೀತಿಯ ಲೇಖನವಲ್ಲ.

*ಟಿ. ಬೇಗೂರು* **ರಾಮಲಿಂಗಪ್ಪ ಟಿ. ಬೇಗೂರು**

ಪತ್ರಿಕೆ ಓದಿದೆ. ಎಲ್ಲಾ ಲೇಖನಗಳೂ ಅತಿ ಉತ್ತಮಮಟ್ಟದವೇ. ಅದರಲ್ಲೂ ಶ್ರೀಯುತ ಎಂ. ವಿ. ಕೃಷ್ಣಸ್ವಾಮಿಯವರ ''ಹೂವಿನಿಂದ ನಾರಿಗೆ ಸ್ವರ್ಗ'' ಲೇಖನವು ನನಗೆ ಬಹಳ ಪ್ರಿಯವಾಯಿತು. ಅಂತೆಯೇ ಅ. ರಾ. ಮಿತ್ರರವರ 'ನಾಗಾಲಿಗಳು' ನವಿರಾದ ಹಾಸ್ಯದೊಂದಿಗೆ ಬಲು ಸವಿಯಾಗಿತ್ತು.

ಸರ್. ಎಂ. ವಿಶ್ವೇಶ್ವರಯ್ಯನವರ ಬಗ್ಗೆ ಬರೆದ ಲೇಖನ ಅತ್ಯುಪಯುಕ್ತವಾಗಿದೆ. ಪೂಜ್ಯರ ಜೀವನಶೈಲಿ, ನಯ-ವಿನಯ, ಸಮಯಪ್ರಜ್ಞೆ, ನಿಸ್ವಾರ್ಥ ಮನೋಭಾವ ನಮಗೆಲ್ಲರಿಗೂ ಅತ್ಯಗತ್ಯವಾಗಿದೆ. ಈ ರೀತಿ ಇನ್ನೂ ಹೆಚ್ಚಿನ ರೀತಿಯಲ್ಲಿ ಇಂತಹ ಲೇಖನಗಳನ್ನು ಪ್ರಕಟಿಸುವಿರೆಂದು ಭಾವಿಸುತ್ತೇನೆ. ಕನ್ನಡಿಗರು ಇದನ್ನು ಮೆಚ್ಚುತ್ತಾರೆ, ಖಂಡಿತಾ. ಲೇಖಕರುಗಳಿಗೆ ನನ್ನ ಪ್ರಣಾಮಗಳನ್ನು ತಿಳಿಸಿ ದಯಮಾಡಿ.

ಉತ್ತಮ ಅಭಿರುಚಿಯ 'ಹೊಸತು' ಪತ್ರಿಕೆ ಕನ್ನಡಿಗರಿಗೆ ಅಚ್ಚುಮೆಚ್ಚಿನ ಪತ್ರಿಕೆಯಾಗಲಿ ಎಂದು ಹಾರೈಸುವ.

*ಬೆಂಗಳೂರು* **ಎಚ್. ಗಣೇಶ ಐತಾಳ**

'ಹೊಸತು' ಓದುಗರಾದ ಬೆಂಗಳೂರಿನ ಶ್ರೀ ಸಿ. ವಿ. ರಘುಪತಿ ಅವರು ಪತ್ರಿಕೆಗೆ ಒಂದು ಸಾವಿರ ರೂಪಾಯಿ ದೇಣಿಗೆ ನೀಡಿದ್ದಾರೆ. ಕ್ರಿಯಾಶೀಲರಾದ ಈ ಮಾನ್ಯರಿಗೆ 'ಹೊಸತು' ವಂದನೆ ಸಲ್ಲಿಸುತ್ತದೆ.

*— ಸಂಪಾದಕ, 'ಹೊಸತು'*



(೩ನೇ ಪುಟದಿಂದ - ಈ ತಿಂಗಳು)

ಇನ್ನೂ ಹೆಚ್ಚು ಆಕರ್ಷಕವಾಗಿ ತಮ್ಮ ಚಮತ್ಕಾರಗಳನ್ನು ಪ್ರಯೋಗಿಸಿರುವುದು ಅಷ್ಟೇನೂ ರುಚಿಕರವಲ್ಲ. ಮುಖ್ಯಮಂತ್ರಿಗಳಿಗೆ ಹೆಚ್ಚಿನ ಪ್ರಾಶಸ್ತ್ಯ ದೊರೆಯದಂತಾಗದಿರಲಿ ಎಂದು ತಾವು ಮೆರವಣಿಗೆಯಲ್ಲಿ ಭಾಗವಹಿಸಿದರಂತೆ ! ತಮ್ಮ ಮೇಲೆ ಪ್ರಭಾವ ಬೀರಿದವರಲ್ಲಿ ಹೆಣ್ಣು-ಗಂಡು ಎಂಬ ಭೇದವಿಲ್ಲವಂತೆ, ಪ್ರಭಾವ ಬೀರಿದವರೆಲ್ಲಾ ಸ್ತ್ರೀತ್ವವನ್ನು ಮೈಗೂಡಿಸಿಕೊಂಡವರಂತೆ ! ಇನ್ನು ಮುಂದೆ ಅವರನ್ನು ಮಾಜಿ ಸಮ್ಮೇಳನಾಧ್ಯಕ್ಷ ಎಂದೇ ಗುರುತಿಸಿದರೆ ಅವರಿಗೆ ಸಮಾಧಾನವಂತೆ ! ಹೀಗೆಲ್ಲಾ ಹೇಳುವಾಗ ಈ ನುರಿತ ಮಾನ್ಯ ಸಾಹಿತಿಗಳಿಗೆ ಯಾವ ಮಾತು ಯಾರಿಗೆ ಪ್ರಿಯವೆನಿಸುತ್ತದೆ ಎಂಬ ಗುಟ್ಟು ಗೊತ್ತಿರುತ್ತದೆ. ಅದನ್ನು ಅಚ್ಚುಕಟ್ಟಾಗಿ ಬಳಸಿಕೊಳ್ಳುತ್ತಾರೆ. ಅವರು ಅಧ್ಯಕ್ಷ ಸ್ಥಾನವನ್ನು ಅಲಂಕರಿಸಲು ಒಪ್ಪಿದ್ದೇ ಒಂದು ಕೌತುಕವೆಂದು ಹೇಳುತ್ತಾ ಜ. ಹೊ. ನಾರಾಯಣಸ್ವಾಮಿಯವರು ಅನಂತಮೂರ್ತಿಯವರ ಪೂರ್ವಾಪರಗಳನ್ನು ಬಿಚ್ಚಿಟ್ಟದ್ದು ಮೂರ್ತಿಯವರ ವ್ಯಕ್ತಿತ್ವವನ್ನು ಸ್ಫುಟಗೊಳಿಸುವ ಉದ್ದೇಶದಿಂದಲೇ. ಅದಕ್ಕೆ ಮಾನ್ಯರು ಪ್ರತಿಕ್ರಿಯಿಸಿದಂತೆ ಕಾಣುವುದಿಲ್ಲ. ತಾವು ಶ್ರೇಷ್ಠ ಸಾಹಿತ್ಯದ ಪ್ರತಿಪಾದಕರೆಂದು ಡಂಗೂರ ಹೊಡೆದಿದ್ದು, ಅನಂತಮೂರ್ತಿಯವರ ಸಾಹಿತ್ಯದಲ್ಲಿ ಶ್ರೇಷ್ಠ-ಅಶ್ರೇಷ್ಠಗಳ ಪ್ರಮಾಣ ಎಷ್ಟಿದೆಯೆಂದು ತೂಗಿನೋಡುವ ಕೆಲಸ ನಡೆದೇ ಇದೆ. ಆದರೆ ಯಾವುದನ್ನು ಅವರು ಅ-ಶ್ರೇಷ್ಠವೆಂದು ತಳ್ಳಿಹಾಕಿದ್ದರೋ ಅದನ್ನೂ ಇಂದು ಮಾನ್ಯ ಮಾಡಲು ಸಿದ್ಧರಿದ್ದಾರೆ. ಸಮ್ಮೇಳನಾಧ್ಯಕ್ಷರಾಗಿ ಬಂಡಾಯ ಸಾಹಿತ್ಯವನ್ನು ಬರಡು ಸಾಹಿತ್ಯವೆಂದು ಹೇಳಲಾದೀತೆ ? ಇದೆಲ್ಲದರ ನಡುವೆ ವಿಕೇಂದ್ರೀಕರಣದ ಬಗೆಗೆ ತಮ್ಮ ನಿಲುವನ್ನು ಹೊರಗೆಡಹಿದ್ದು ಇಡೀ ಚರ್ಚೆಗೆ ನಿರ್ದಿಷ್ಟ ಆಯಾಮವನ್ನು ಒದಗಿಸಲು ಸಹಾಯಕವಾಯಿತು. ಅಲ್ಲದೆ ಸಂಘಟಕರ ಪರವಾಗಿ ಸಾರ್ವಜನಿಕರ ಕ್ಷಮೆ ಕೇಳಿದ್ದೂ ಅವರ ಔದಾರ್ಯದ ಕುರುಹೇ ಆಗಿದೆ. ಅನಂತಮೂರ್ತಿಯವರು ನಿಜಕ್ಕೂ ತುಳಿದುಬಂದ ಹಲವು ದಾರಿಗಳು ಈ ಹಿನ್ನೆಲೆಯಲ್ಲಿ ಮಸುಕಾಗಿ ಬಿಟ್ಟಿದ್ದರೆ ಆಶ್ಚರ್ಯವಾಗಲಿ ಪಶ್ಚಾತ್ತಾಪವಾಗಲಿ ಅಗತ್ಯವಿಲ್ಲ.

ಸಮ್ಮೇಳನದ ಒಂದು ಗೋಷ್ಠಿಯಲ್ಲಿ ಜಾನಪದ ಅಕಾಡೆಮಿ ಅಧ್ಯಕ್ಷ ರಾಮಚಂದ್ರೇಗೌಡರು ಇಂದಿನ ಜಾಗತಿಕ ಸನ್ನಿವೇಶದಲ್ಲಿ ಅಮೆರಿಕಾ ಸರ್ಕಾರವು ಮೊಟ್ಟಮೊದಲ ಉಗ್ರ ಭಯೋತ್ಪಾದಕ ಎಂಬ ವಿಷಯವನ್ನು ಮನದಟ್ಟು ಮಾಡಿಕೊಟ್ಟದ್ದು, ಅನಂತಮೂರ್ತಿ ಅರ್ಜೆಂಟೈನಾದ ಭೀಕರ ಆರ್ಥಿಕ ಮುಗ್ಗಟ್ಟಿಗೆ ಜಾಗತೀಕರಣವು ಹೇಗೆ ಕಾರಣವೆಂದು ಪ್ರಸ್ತಾಪಿಸಿದ್ದು ಇವೆಲ್ಲಾ ನಮ್ಮ ಇಂದಿನ ರಾಷ್ಟ್ರೀಯ ಆಶಯಗಳ ಹಿನ್ನೆಲೆಯಲ್ಲಿ ಬಹಳ ಪ್ರಸ್ತುತವಾದ ಅಂಶಗಳು. ಆದರೆ ಜಿ. ಎಸ್. ಸಿದ್ಧಲಿಂಗಯ್ಯನವರು ಹೇಳಿದಂತೆ ಭಾರತದಲ್ಲಿ ಇಂದು ತೀವ್ರವಾಗಿ ಬೆಳೆಯುತ್ತಿರುವ ಕೋಮುವಾದಿ ಅತ್ಯಾಚಾರಗಳನ್ನು ವಿಶ್ಲೇಷಿಸುವಂತಹ ಒಂದು ಗೋಷ್ಠಿ ಇರದಿದ್ದುದು ದೊಡ್ಡ ನ್ಯೂನತೆಯೇ ಸರಿ. ಅಂತೆಯೇ ವಿಜ್ಞಾನ, ಮಹಿಳಾ ಪ್ರಶ್ನೆ, ಮಕ್ಕಳ ಶಿಕ್ಷಣ ಮುಂತಾದುವಕ್ಕೂ ಸ್ಥಾನ ದೊರಕದೆ ಹೋಯಿತು. ಇವನ್ನೆಲ್ಲಾ ಸರಿದೂಗಿಸಲು ಸಮ್ಮೇಳನವೊಂದೇ ಕಾರ್ಯಕ್ಷೇತ್ರವಲ್ಲ, ಅವೆಲ್ಲಾ ನಿರಂತರವಾಗಿ ನಮ್ಮ ಮುಂದಿರುವ ಸವಾಲುಗಳು.

[signature]

## ಪತ್ರಗಳು.....

ತಾವು ನನಗೆ ಕಳುಹಿಸಿದ 'ಹೊಸತು' ವಿಶೇಷ ಸಂಚಿಕೆ ತುಂಬಾ ಚೆನ್ನಾಗಿ ಮೂಡಿಬಂದಿದೆ. ನಾನು ಕನ್ನಡದಲ್ಲಿ ಬರೆಯಲು ಮುಖ್ಯ ಪ್ರೇರಣೆ ತಾವೆ. ತಮ್ಮ ಉತ್ತೇಜನಕ್ಕೆ ನನ್ನ ವಂದನೆಗಳು.

*ಬೆಂಗಳೂರು* **ಡಾ|| ಎಸ್. ಬಿಸಲಯ್ಯ**

'ಹೊಸತು' ನನ್ನ ಅಭಿರುಚಿಗೆ, ಆಸಕ್ತಿಗೆ ತಕ್ಕುದಾಗಿದೆ ಸರಿ, ಆದರೆ ನನ್ನ ಮನೆಯ ಇತರರೂ ಅದನ್ನು ಓದುವಂತಾಗಬೇಕೆಂಬುದು ನನ್ನ ಆಶಯವಾಗಿದೆ. ಇಂಥ ಓದುಗರನ್ನು ಸೆಳೆಯಲು ನೀವು ಕತೆಗಳಿಗೆ ಹೆಚ್ಚು ಪುಟಗಳನ್ನು ಕೊಡಬಹುದೆಂದು ಕಾಣುತ್ತದೆ. ಜೊತೆಗೆ 'ಓದಿಸಿಕೊಳ್ಳುವಂಥ' ಲೇಖಕರಿಂದ ಅಂಕಣಗಳನ್ನು ಬರೆಸುವುದು ಒಳ್ಳೆಯದು.

ನಾನು ಇಷ್ಟೆಲ್ಲ ಬರೆಯಲು ಕಾರಣ, ನಮ್ಮ ಓದುವ ಖುಷಿ ಗಂಭೀರ ಸಾಹಿತ್ಯವನ್ನು ಮಾತ್ರ ಓದುವುದರಲ್ಲಿ ಇಲ್ಲ. ಓದುಗ ಬೇರೆ ನಮೂನೆಯ ಬರವಣಿಗೆಗಳನ್ನೂ ಓದಲು ಬಯಸುತ್ತಾನೆ. 'ಹೊಸತು'ವಿನ ವಿಶೇಷ ಸಂಚಿಕೆಯಲ್ಲಿ ಇಂಥ ಬರಹಗಳಿವೆ. ನನಗಂತೂ ಈ ದೃಷ್ಟಿಯಿಂದ ವಿಶೇಷ ಸಂಚಿಕೆ ತುಂಬ ಖುಷಿ ಕೊಟ್ಟಿದೆ.

*ಅಂಕೋಲ* **ಸಂದೀಪ ನಾಯಕ**

ಅನೇಕ ವಿಷಯ ವೈವಿಧ್ಯತೆಗಳುಳ್ಳ 'ಹೊಸತು' ವಿಶೇಷ ಸಂಚಿಕೆಯಲ್ಲಿ ಪ್ರಕಟವಾದ ಲೆಫ್ಟಿನೆಂಟ್ ಜನರಲ್ ನರಹರಿಯವರನ್ನು ಕುರಿತ ಸಂದರ್ಶನ ಲೇಖನವೊಂದು ಸಂಚಿಕೆಯ ತೂಕ ಹೆಚ್ಚಲು ಧಾರಾಳವಾಗಿ ಸಾಕು.

ವರ್ಣಚಿತ್ರಗಳು, ಅವುಗಳನ್ನು ಜೋಡಿಸಿದ ಕ್ರಮ, 'ಹೊಸತು' ಶೀರ್ಷಿಕೆಯ ಬಂಗಾರದ ಬಣ್ಣ ಎಲ್ಲವೂ ಎರಕ ಹೊಯ್ದಂತೆ ಒಟ್ಟಂದದಲ್ಲಿ ಫೆಬ್ರವರಿ ೨೦೦೨ರ ಹೊಸತು ಸಂಚಿಕೆಯ ಮುಖಪುಟ ತುಂಬಾ ಸುಂದರ; ಆಕರ್ಷಕ.

* * *

ಚಿಂತನೆಗೆ ಹಚ್ಚುವ ಸಂಪಾದಕೀಯ, ಸೀಯಾರ್ಕೆ, ಡಾ|| ಎಚ್. ಎನ್. ಮಂಜುರಾಜ್, ಸನತ್‌ಕುಮಾರ ಬೆಳಗಲಿ, ಪೀರ್ ಬಾಷ, ಚಂದ್ರಶೇಖರ ನಂಗಲಿ ಇವರೇ ಮೊದಲಾದವರ ಲೇಖನಗಳು ಖಂಡಿತವಾಗಿ ಪತ್ರಿಕೆಯ ಮೌಲ್ಯವನ್ನು ಹೆಚ್ಚಿಸಿವೆ. ಹಾಗೆ ನೋಡಿದರೆ ಗಾತ್ರದಲ್ಲಿ ಮಾತ್ರ ಈ ಸಂಚಿಕೆ ಸಣ್ಣದು. ಇದೂ ಒಂದು ಪುಟ್ಟ ವಿಶೇಷ ಸಂಚಿಕೆಯಂತಿದೆ.

*ದೊಡ್ಡತೋಟ* **ಜಿ. ಎಸ್. ಉಬರಡ್ಕ**

ವಿಶೇಷಾಂಕ ಖಂಡಿತಾ ಮನಮೆಚ್ಚುವಂತಿದೆ. ಒಂದೊಂದೂ ಲೇಖನವೂ ಓದುಗನಿಗೆ ಖುಷಿ ನೀಡುತ್ತದೆ. ಜ್ಞಾನ ದಾಹ ತಣಿಸುತ್ತದೆ. ಕೇವಲ ೨೫ ರೂ.ಗಳಿಗೆ ಇಂತಹ ಸುಂದರ ಹಾಗೂ ಸತ್ವಪೂರ್ಣ ಸಂಚಿಕೆಯನ್ನು ನೀಡಿದ ತಮ್ಮನ್ನೂ ಹಾಗೂ ಹೊಸತು ಬಳಗವನ್ನೂ ಮನದುಂಬಿ ಅಭಿನಂದಿಸುತ್ತೇನೆ.

*ಚಿತ್ರದುರ್ಗ* **ಬಿ. ತಿಪ್ಪೇರುದ್ರಪ್ಪ**

ಡಾ|| ಶೈಲಜಾ ಅವರು 'ಹೊಸತು' ಜನವರಿ ಸಂಚಿಕೆಯಲ್ಲಿ ''ಮಾಸಾನಾಂ ಮಾರ್ಗಶೀರ್ಷೋಽಹಂ'' ಎಂದೇಕೆ ಹೇಳಿರುವ ಎಂಬ ಬಗ್ಗೆ: ಚೈತ್ರವಲ್ಲವೇ ವರ್ಷಾರಂಭದ ತಿಂಗಳು, ಮಾರ್ಗಶೀರ್ಷ ಹೇಗೆ ಮೊದಲಿನದು ? ''ಋತೂನಾಂ ಕುಸುಮಾಕರ'' ಎಂದಿರುವ. ವರ್ಷದ ಮೊದಲ ತಿಂಗಳು, ವಸಂತ ಋತು ತಾನೆಂದಿರುವ. ಮಾರ್ಗಶೀರ್ಷಕ್ಕೆ ಇನ್ನೊಂದು ಹೆಸರು ''ಅಗ್ರಹಾಯನ'' ಎಂದು. ಉತ್ತರ ಭಾರತದಲ್ಲಿ ''ಅಗ್‌ಹಗ್'' ಎಂದು ಈಗಲೂ ಹೇಳುತ್ತಾರೆ. ಬಹು ಹಿಂದೆ ವರ್ಷ ಶರತ್ ಕಾಲದ ಕೊನೆಯಿಂದ ಪ್ರಾರಂಭವಾಗುತ್ತಿತ್ತು – ಕಾರ್ತಿಕದ ತರುವಾಯ. ಆದ್ದರಿಂದ ವರ್ಷದ ಮೊದಲ ತಿಂಗಳು ಮಾರ್ಗಶೀರ್ಷ ಮಾಸ - ಅಗ್ರಹಾಯನ ಆಗಿತ್ತು.

*ಸಾಗರ* **ಬ. ನಾ. ರಘುರಾಮ**

೫ನೇ ಪುಟದಿಂದ - ಸಂಪಾದಕೀಯ

ಉದ್ದಿಮೆಯನ್ನು ಮಾರಿ ಬಂದ ಹಣವನ್ನು ಇನ್ನೊಂದು ಉದ್ದಿಮೆಯನ್ನು ಸೃಷ್ಟಿಸಲು ಬಳಸುವುದು ಈ ಹಿನ್ನೆಲೆಯಲ್ಲಿ ಹಿತವಾದ ಕ್ರಮ. ದೇಶದಲ್ಲಿನ ಮೂಲಭೂತ ಸೌಕರ್ಯಗಳ ಸೃಷ್ಟಿಗಾಗಿ ಇಂಥ ಹಣವನ್ನು ವಿನಿಯೋಗ ಮಾಡಬೇಕು. ಎರಡು ಲಕ್ಷ ಕೋಟಿಯಷ್ಟು ಹಣದ ಬಜೆಟ್ ಕೊರತೆ ಬೆಳೆಸಿಕೊಂಡು ಕೃಶವಾಗಿರುವ ಸರ್ಕಾರ ಈ ಕೆಲಸವನ್ನು ನಿರ್ವಹಿಸಲು ಖಂಡಿತ ಸಮರ್ಥವಲ್ಲ. ಕಳೆದ ವರ್ಷದ ಬಜೆಟ್‌ನ ಎಲ್ಲ ಉದ್ದೇಶಗಳಲ್ಲೂ ವೈಫಲ್ಯ ಹೊಂದಿರುವ ಆರ್ಥಿಕ ಮಂತ್ರಿ, ಯಾವ ಮೋರೆ ಇಟ್ಟುಕೊಂಡು ಇನ್ನೊಂದು ಬಜೆಟ್ ಮಂಡಿಸುತ್ತಾರೋ ತಿಳಿಯದು. ''ಸಾರ್ವಜನಿಕ ಹಣಕಾಸು'' ಎಂಬ ಅರ್ಥಶಾಸ್ತ್ರದ ಬಹುಮುಖ್ಯ ಅಂಗಕ್ಕೆ ತಿಲಾಂಜಲಿ ಯಿತ್ತಿರುವ ಇಂದಿನ ರಾಜಕೀಯ ನಾಯಕರು ಸರ್ಕಾರ ವನ್ನು ಒಂದು ಉದ್ಯಮವೆಂದೂ, ತಮ್ಮನ್ನು ತಾವು ಚೀಫ್ ಎಕ್ಸಿಕ್ಯೂಟೀವ್ ಆಫೀಸರ್ ಎಂದೂ ಹೇಳಿಕೊಳ್ಳಲು ನಾಚದಿರುವುದು, ಸರ್ಕಾರದ ಬಹುಮುಖ್ಯ ಪಾತ್ರವಾದ 'ಸೇವೆ' ಪದ ಬಳಸಲು ನಾಚುವುದು ಆರ್ಥಿಕ ಉದಾರೀಕರಣ ನೀತಿಯ ಒಂದು ಹೀನಾಯ ಕೊಡುಗೆ. ಸಾರ್ವಜನಿಕ ಶಿಕ್ಷಣ, ಸಾರ್ವಜನಿಕ ಆರೋಗ್ಯ ಕ್ಷೇತ್ರದ ಖರ್ಚನ್ನು ಮೂಲಭೂತ ಅಗತ್ಯ ವೆಂದೂ, ಕರ್ತವ್ಯ ವೆಂದೂ ಅಥವಾ ಬಂಡವಾಳದ ಪರಿಭಾಷೆಯಲ್ಲೇ ಹೇಳುವು ದಾದರೆ ಅದು ದೇಶದ ಆರ್ಥಿಕತೆಗೆ, ಉತ್ಪಾದನೆಗೆ ಬಹುಕಾಲೀನ ಬಂಡವಾಳ ಹೂಡಿಕೆಯೆಂದೂ ಪರಿಗಣಿಸಲು ಅಸಮರ್ಥವಾದ, ಅದರಲ್ಲೂ ಲಾಭ-ನಷ್ಟ ಲೆಕ್ಕ ಹಾಕುವ, ಈ ವರ್ತಕ ಸರ್ಕಾರ ಕೊನೆಗಾಣುವವರೆಗೆ ಹದಗೆಟ್ಟ ಪರಿಸ್ಥಿತಿ ಸರಿ ಹೊಂದುವುದಿಲ್ಲ. ಇದಕ್ಕೆ ಮುರಳಿ ಮನೋಹರರ ಜ್ಯೋತಿಷ್ಯ ಶಾಸ್ತ್ರದಲ್ಲಿ ಉತ್ತರ ಸಿಗದು. ಪರಿಸ್ಥಿತಿ ಜನ ಸಮೂಹದ ವ್ಯಾಪಕ ಚಳುವಳಿಯನ್ನು ತೀವ್ರವಾಗಿ ಬೇಡುತ್ತಿದೆ.

– ಕೆ. ಎಸ್. ಪಾರ್ಥಸಾರಥಿ

# ಮಾನವತಾವಾದಿಯ 'ಜಿಹಾದ್'

**ಮಾ**ನವತಾವಾದಿಯ ದುಃಖ ಯಾರ ಬಳಿಯೂ ಹೇಳಿಕೊಳ್ಳಲಾಗುವುದಿಲ್ಲ. ಪ್ರತಿ ಮಾನವತಾವಾದಿಯ ದುಃಖ, ತಳಮಳ, ಅನುಭವಿಸುವ ಹಿಂಸೆ ಒಂದೇ ತೆರನಾಗಿರುತ್ತವೆ.

ಸೆಪ್ಟೆಂಬರ್ ಹನ್ನೊಂದನೇ ತಾರೀಖು ಟಿ.ವಿ. ಪರದೆಯ ಮೇಲೆ ಮೂರು ವಿಮಾನಗಳು ನ್ಯೂಯಾರ್ಕ್‌ನ ಗಗನಚುಂಬಿಯನ್ನು ವಿಕೃತವಾಗಿ ಚುಂಬಿಸಿದ ದೃಶ್ಯ ನೋಡಿದಾಗ ಆತನು ಅದೆಷ್ಟು ಚಡಪಡಿಸಿರಬೇಕು ? ಯಾರೋ ಆಡುವ ಅಮಾನವೀಯ ಆಟದಲ್ಲಿ ಅಮಾಯಕರ ಬಲಿ !

ಈ ದುರ್ದಿನದ ನಂತರ ಆತ ನಿದ್ದೆ ಮಾಡಿದ ಕ್ಷಣಗಳೇ ಇರಲಾರವು ! ಕಣ್ಣು ಮುಚ್ಚಿದರೆ ಅಫ್ಘನ್ ಬಡಪಾಯಿಗಳ, ಹೊಟ್ಟೆಗೆ ಹಿಟ್ಟಿಲ್ಲದೆ ಹಸಿವಿನಿಂದ ನರಳುತ್ತಿರುವ ದುರ್ದೈವಿಗಳ ಮನಮಿಡಿಯುವ ದೃಶ್ಯಗಳು ಪ್ರತ್ಯಕ್ಷವಾಗುತ್ತವೆ. ಸಾಲದೆಂಬಂತೆ ಅವರ ಮೇಲೆ ಅಮೆರಿಕಾದ ಬಾಂಬುಗಳ ಸುರಿಮಳೆ ! ತನ್ನ ಅಹಂಗೆ ಆಗಿರುವ ಪೆಟ್ಟನ್ನು ಸರಿಪಡಿಸಿಕೊಳ್ಳಲು ಅಮಾಯಕರ ರಕ್ತದ ಮುಲಾಮೇ ಬೇಕು ಅಮೆರಿಕಾಕ್ಕೆ !

ಅಮೆರಿಕದ ಅಧ್ಯಕ್ಷ ಹೇಳಿಕೆ ನೀಡಲು ಮೈಕಿನ ಬಳಿ ಬಂದಾಗ ಮಾನವತಾವಾದಿಗೆ ಒಳಗೊಳಗೆ ಆತಂಕ. "ನೀವು ನಮ್ಮ ಪರ ಇಲ್ಲದಿದ್ದರೆ ಅವರ (ಉಗ್ರಗಾಮಿಗಳ) ಪರ" ಎಂದು ಅಹಂಕಾರ ಭಾವದಲ್ಲಿ ಘೋಷಿಸಿದಾಗ ಸಹೃದಯಿಯ ಮನಸ್ಸು ಕುದಿಯುತ್ತದೆ. ಇಬ್ಬರ ಪರವೂ ಅಲ್ಲದೆ ಮನುಕುಲದ ಪರ ಇರಲು ಸಾಧ್ಯವಿಲ್ಲವೆ ? ಎಂದು ತನ್ನನ್ನು ತಾನೇ ಪ್ರಶ್ನಿಸಿಕೊಳ್ಳುತ್ತಾನೆ.

ಒಂದು ಕಡೆ ತಾನೇ ಸೃಷ್ಟಿಸಿದ ಭಯೋತ್ಪಾದಕರ ದುಷ್ಕೃತ್ಯದಿಂದ ತನ್ನ 'ಅಹಂ'ಗೇ ಪೆಟ್ಟು ಬೀಳಿಸಿಕೊಂಡಿರುವ ಸೂಪರ್ ಟೆರರಿಸ್ಟ್ ದೇಶ, ಇನ್ನೊಂದು ಕಡೆ ಗಾಂಜಾ, ಹೆರಾಯಿನ್, ಅಫೀಮನ್ನು ಮಾರಿ ಅನೈತಿಕವಾಗಿ ಗಳಿಸಿದ ಹಣದಿಂದ ಅಲ್ಪಜ್ಞಾನಿಗಳಿಗೆ ಧರ್ಮಾಂಧತೆಯ ಅಫೀಮನ್ನು ತಿನ್ನಿಸಿ ಧರ್ಮದ ಅರ್ಥವನ್ನೇ ತಿರುಚುತ್ತಿರುವ ತಾಲಿಬಾನ್ ರಕ್ಕಸರು. ಈ ಇಬ್ಬರ ನಡುವೆ ಸಿಲುಕಿಕೊಂಡಿರುವ ಅಮಾಯಕರು. ಇದೆಲ್ಲಾ ನೋಡುವಾಗ ಮಾನವತಾವಾದಿಗೆ ಆಗುವ ಮಾನಸಿಕ ಹಿಂಸೆಗೆ ಮಿತಿ ಎಲ್ಲಿದೆ !

ಧರ್ಮದ ಹೆಸರಿನಲ್ಲಿ ಆಗುತ್ತಿರುವ ಅವಾಂತರಗಳನ್ನು ಕಂಡು ಕಂಡು ಬೇಸತ್ತು ಸ್ವತಃ ಅಲ್ಲಾಹನೇ ಅಫಘಾನಿ ರಕ್ಕಸರ ಮುಂದೆ ಪ್ರತ್ಯಕ್ಷನಾಗಿ 'ಧರ್ಮದ ಹೆಸರಿನಲ್ಲಿ ನೀವು ಮಾಡುತ್ತಿರುವುದು ಧರ್ಮಬಾಹಿರ ಕೃತ್ಯಗಳು' ಎಂದು ಉಪದೇಶಿಸಿದರೆ ಅವನ ಮೇಲೆಯೂ 'ಜಿಹಾದ್' ಘೋಷಿಸಲು ಹಿಂಜರಿಯುವುದಿಲ್ಲ ಈ ಧರ್ಮಾಂಧರು.

ಅಲ್ಲೆಲ್ಲೋ ಜೀಸಸ್ ಕ್ರೈಸ್ಟ್ 'ಪ್ರಭುವೇ, ಅವರೇನು ಮಾಡುತ್ತಿದ್ದಾರೆ ಎನ್ನುವುದು ಅವರಿಗೇ ಅರಿವಿಲ್ಲ. ಅವರನ್ನು ಕ್ಷಮಿಸು' ಎಂದು ಅದೆಷ್ಟು ಬಾರಿ ಬೇಡಿಕೊಳ್ಳುತ್ತಿದ್ದಾನೋ ! ಅದೇ ಜೀಸಸ್, 'ಅವರ ಅಹಂಕಾರದ ಮೆರವಣಿಗೆಯಲ್ಲಿ ಸಿಲುಕಿ ಸಾಯುತ್ತಿರುವವರನ್ನೂ ರಕ್ಷಿಸು' ಎಂದು ವಿನಂತಿಸಿಕೊಳ್ಳುವುದನ್ನು ಮರೆತಿಲ್ಲ ಎಂಬ ವಿಶ್ವಾಸವಿದೆ ಮಾನವತಾವಾದಿಗೆ. ಯುದ್ಧಕೋರ ಅಮೆರಿಕಕ್ಕೆ ಶ್ರೀಮಂತಿಕೆ ಬೊಜ್ಜನ್ನು ಕರಗಿಸಲು ಒಂದು ನೆಪ ಬೇಕು. ಹಳೆ ಶಸ್ತ್ರಾಸ್ತ್ರಗಳನ್ನು ಖಾಲಿ ಮಾಡಿ ಹೊಸ ಬಗೆಯ ಅಸ್ತ್ರಗಳನ್ನು ತಯಾರಿಸಿ ತನ್ನ ಖಜಾನೆ ತುಂಬಿಸಿಕೊಳ್ಳಲು ಕಾರಣ ಬೇಕು. ಈ ಉದ್ದೇಶಗಳನ್ನು ಸಾಧಿಸಲು ರಾಷ್ಟ್ರಗಳ ಮಧ್ಯೆ ಬಿಕ್ಕಟ್ಟನ್ನು ಉಂಟುಮಾಡಿ ತನ್ನ ಶಸ್ತ್ರಾಸ್ತ್ರಗಳ ಉದ್ದಿಮೆಗೆ ಮಾರುಕಟ್ಟೆ ಸೃಷ್ಟಿಸಿಕೊಳ್ಳಬೇಕು.

ಇಪ್ಪತ್ತೊಂದನೆ ಶತಮಾನದ ಪ್ರಥಮ ಸೂರ್ಯೋದಯದ ಸೌಂದರ್ಯವನ್ನು ತನ್ನ ಕಣ್ಣುಗಳಲ್ಲಿ ತುಂಬಿಸಿಕೊಳ್ಳುತ್ತಿದ್ದಾಗ ಮಾನವತಾವಾದಿ ಅದೆಷ್ಟು ಹರ್ಷೋಲ್ಲಾಸದಿಂದಿದ್ದ ! ಅನೇಕ ಸಂಘರ್ಷಗಳಿಂದ ಕೂಡಿದ್ದ ೨೦ನೇ ಶತಮಾನ ಕೊನೆಗೂ ಮುಗಿಯಿತಲ್ಲ, ಈ ಶತಮಾನ ವಿಶ್ವಶಾಂತಿಯ ಸ್ಥಾಪನೆಗೆ ನಾಂದಿಯಾಗಲಿದೆ ಎಂಬ ಕನಸು ಕಂಡಿದ್ದ. ಸೆಪ್ಟೆಂಬರ್ ಹನ್ನೊಂದರಂದು ಗಗನಚುಂಬಿಗಳು ಕುಸಿದು ಬಿದ್ದಾಗ ಆತನ ಆಶಾಸೌಧವೂ ನೆಲಕಚ್ಚಿತು. ನಿರ್ನಾಮವಾದ ಕಟ್ಟಡಗಳನ್ನು ಪುನರ್ನಿರ್ಮಿಸುವುದಾಗಿ ಆಶ್ವಾಸನೆಗಳೇನೋ ದೊರೆತಿವೆ. ಆದರೆ ಅವನ ಆಶಾಸೌಧದ ಪುನರ್‌ನಿರ್ಮಾಣವನ್ನು ಕುರಿತ ಮುನ್ನೋಟದ ಅಗತ್ಯದ ಬಗ್ಗೆ ಆತಂಕವಾದರೂ ಯಾರಿಗಿದೆ !

ಈಗ ಆತನೂ ಒಂದು ರೀತಿಯ 'ಜಿಹಾದ್' ಘೋಷಿಸಬೇಕಾಗಿದೆ. ಮೃಗಗಳು ಘೋಷಿಸಿರುವ 'ಜಿಹಾದ್'ನಲ್ಲಿ ಗೆದ್ದವ ಸೋಲುತ್ತಾನೆ, ಸೋತವ ಸಾಯುತ್ತಾನೆ. ಇದರಲ್ಲಿ ಗೆಲುವು ಎನ್ನುವುದು ಕೇವಲ ಭ್ರಮೆ. ಆದರೆ ಮಾನವತಾವಾದಿಯ 'ಜಿಹಾದ್' ಇದಕ್ಕಿಂತ ಭಿನ್ನ. ಇವನ ಜಿಹಾದ್ ಅನ್ಯಧರ್ಮಗಳ ವಿರುದ್ಧ ಅಲ್ಲ. ಏಕೆಂದರೆ ಎಲ್ಲಾ ಧರ್ಮಗಳು ಮಾನವಧರ್ಮದ ಕರುಳಿನ ಕುಡಿಗಳು. ಈ ಜಿಹಾದ್ ಅಜ್ಞಾನದ, ಅರೆಜ್ಞಾನದ ವಿರುದ್ಧ, ಬಡತನದ ವಿರುದ್ಧ, ಶೋಷಣೆಯ ವಿರುದ್ಧ, ಮಾನವ ಧರ್ಮಕ್ಕೆ ಒದಗಿರುವ ಆಪತ್ತಿನ ವಿರುದ್ಧ. ಇದರಲ್ಲಿ ಭಾಗವಹಿಸುವುದು ಪ್ರತಿಯೊಬ್ಬ ಮಾನವನ ಕರ್ತವ್ಯ.

**ಎ. ಜಿ. ಜಾವೀದ್**

ಕೆನರಾ ಬ್ಯಾಂಕ್, ನುಗ್ಗೇಹಳ್ಳಿ-೫೭೩ ೧೩೧, ಹಾಸನ ಜಿಲ್ಲೆ

**Statement about ownership and other particulars about newspaper**

**FORM IV**

| | | |
|---|---|---|
| 1. Place of publication | : | Bangalore |
| 2. Periodicity of its publication | : | Monthly |
| 3. Printer's Name | : | R. S. Rajaram |
| Nationality | : | Indian |
| Address | : | Navakarnataka Publications (P) Ltd. Embassy Centre Crescent Road, P. B. No. 5159 Bangalore - 560 001 |
| 4. Publisher's Name | : | R. S. Rajaram |
| Nationality | : | Indian |
| Address | : | Navakarnataka Publications (P) Ltd. Embassy Centre Crescent Road, P. B. No. 5159 Bangalore - 560 001 |
| 5. Editor's Name | : | G. Ramakrishna |
| Nationality | : | Indian |
| Address | : | Navakarnataka Publications (P) Ltd. Embassy Centre Crescent Road, P. B. No. 5159 Bangalore - 560 001 |
| 6. Name and address of individuals who own the newspaper and partners and shareholders holding more than one percent of the total capital | : | Navakarnataka Publications (P) Ltd., Embassy Centre Crescent Road P. B. No. 5159 Bangalore - 560 001 (Sole Proprietors) |

I, R. S. Rajaram, hereby declare that the particulars given above are true to the best of my knowledge and belief.

Sd/-
R. S. Rajaram
Publisher

Date : 28-2-2002

# ಆದರ್ಶ ಮತ್ತು ಶಿಕ್ಷೆ

ಡಾ|| ವಿರೂಪಾಕ್ಷಿ ಪೂಜಾರಹಳ್ಳಿ

**ನಮ್ಮ ಪರಿಸರದಲ್ಲಿ ಲೋಕರೂಢಿಯಾಗಿ ಆಗಾಗ 'ಆದರ್ಶ' ಎಂಬ ಪದವನ್ನು ಬಳಸುತ್ತಿರುತ್ತೇವೆ. ಇದರ ಆಳ, ಮರ್ಮ ಬಹು ವಿಶಾಲ. ಇಂಗ್ಲಿಷಿನ Ideal (Model)ಗೆ ಸಂವಾದಿಯಾಗಿ ಕನ್ನಡದಲ್ಲಿ ದರ್ಪಣ, ಕನ್ನಡಿ, ಮಾದರಿ ಎಂಬರ್ಥದ ಪದಗಳಿವೆ. ನಮಗೆ ತಿಳಿದಿರುವಂತೆ 'ಶಿಕ್ಷೆ' ಎನ್ನುವುದಕ್ಕೆ ದಂಡಿಸು, ಉಪದೇಶಿಸು, ಪಾಠ ಹೇಳು, ತಿದ್ದು, ದಾರಿ ತೋರಿಸು ಎಂಬ ಅರ್ಥಗಳುಂಟು. ಪ್ರಸ್ತುತ ಲೇಖನದಲ್ಲಿ ಈ ಎರಡೂ ಪದಗಳ ತಾತ್ವಿಕತೆ, ಸ್ವರೂಪ ಹಾಗೂ ಪರಿಣಾಮಗಳನ್ನು ಚಾರಿತ್ರಿಕ ಅವಲೋಕನ ಮಾಡಿ ಸೂಕ್ಷ್ಮವಾಗಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.**

ಆದರ್ಶ ಎಂದರೆ 'ಮಾದರಿ' ಎಂದರ್ಥ. ಮಾನವ ಸಮುದಾಯಗಳ ಚೌಕಟ್ಟಿನಲ್ಲಿ ಬಂಧಿಸಿರುವಂಥ, ಬಂದಿಯಾಗಿರುವವನ ಉದಾತ್ತ, ಸಾಮಾನ್ಯ ಗುಣಗಳೇ ಆದರ್ಶದ ಲಕ್ಷಣಗಳು. ನಾವು ಹೀಗೆ ಇರಬೇಕೆಂಬುದು ಆದರ್ಶವಾದರೆ ವಾಸ್ತವವೇ ಬೇರೆಯಾಗಿರುತ್ತದೆ. ಇತರರಿಗಿಂತ ಭಿನ್ನವಾಗಿರಬೇಕೆಂಬುದು ಒಂದು ಮಹತ್ವಾಕಾಂಕ್ಷೆ, ಗುರಿ-ಉದ್ದೇಶ, ಉತ್ಕಟ ಬಯಕೆಗಳ ಫಲಶ್ರುತಿಗಳ ರೂಪವೇ ಆದರ್ಶವಾಗಿರುತ್ತದೆ. ಬದುಕಿನ ಮೌಲ್ಯಗಳನ್ನು ಸಮಾಜದ ಕನ್ನಡಿಯಲ್ಲಿ ಪ್ರತಿಬಿಂಬಿಸಿ ತಾಳುವ ನಿಲುವುಗಳು ಇದನ್ನು ಸಾಕ್ಷೀಕರಿಸುತ್ತವೆ. ವ್ಯಕ್ತಿ (ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಇತ್ಯಾದಿ ಕ್ಷೇತ್ರಗಳಲ್ಲಿ) ಹೀಗೆಯೇ ಇರಬೇಕೆಂಬ ಆದರ್ಶವನ್ನು ಸೃಷ್ಟಿಸಿಕೊಂಡರೆ, ವಾಸ್ತವವೇ ಬೇರೆಯಾಗಿರುತ್ತದೆ. 'ಆದರ್ಶ' ಆಶಯವಾಗಿರಬಹುದೇ ವಿನಾ ವಾಸ್ತವವಲ್ಲ. ಅದನ್ನು ಮೀರುವುದು ಒಂದು ಸಾಹಸ. ಭಾರತೀಯ ಸಾಮಾಜಿಕ ಕ್ಷೇತ್ರವು ಆದರ್ಶಕ್ಕೆ ಮೌಲ್ಯಯುತ ಸ್ಥಾನವನ್ನು ತುಂಬಿದೆ. ದಾರ್ಶನಿಕ, ಆದರ್ಶ, ಮಹಾತ್ಮ, ಪೂಜ್ಯ ಎಂದೆಲ್ಲ ವ್ಯಕ್ತಿಗಳು ಮಹತ್ವ ಮತ್ತು ಖ್ಯಾತಿಗೊಂಡಿರುವುದನ್ನು ಭಾರತೀಯ ಚರಿತ್ರೆಯಲ್ಲಿ ಉಲ್ಲೇಖಿಸಿದ್ದು ಗಮನಾರ್ಹ.

ತಂದೆ-ತಾಯಿ ಮತ್ತು ಗುರುಗಳಿಗೆ ಆದರ್ಶ ಮಗ ಮತ್ತು ಶಿಷ್ಯನಾಗಿರುವುದು ವಿಶೇಷ. ಬಾಳಿನುದ್ದಕ್ಕೂ ನೋವು-ನಲಿವುಗಳ ನಡುವೆ ಸೌಹಾರ್ದ ಸಮಾನತೆಯ ಸೇತುವೆ ಕಟ್ಟುವ ಹಂಬಲ ಅಗೋಚರವಾದುದು. ಉದಾ: ಶ್ರವಣಕುಮಾರನ ಪಿತೃ ಭಕ್ತಿ, ಹರಿಶ್ಚಂದ್ರನ ಸತ್ಯ-ಪ್ರಾಮಾಣಿಕತೆ, ಏಕಲವ್ಯನ ಗುರುಭಕ್ತಿ, ವಿಶ್ವದ ಅಶಾಂತಿಗೆ ಕಾರಣ ಕಂಡುಹಿಡಿದ ತತ್ವಜ್ಞಾನಿ ಸಾಕ್ರೆಟೀಸ್ ಇವರನ್ನು ನೆನಪಿಸಿಕೊಳ್ಳಬಹುದು. ಅಧ್ಯಾತ್ಮವು ದೇವರ ಇರುವನ್ನು, ತತ್ವವನ್ನು ತಿಳಿಸಿಕೊಟ್ಟ ಮಹಾತ್ಮ ಸಾಕ್ರೆಟೀಸ್. ಇಂಥವನನ್ನು ಹೆಮ್ಲಾಕ್ ವಿಷ ಕೊಟ್ಟು ಸಾಯಿಸಿದ ಪ್ರಜೆಗಳೆಂಥ ಆದರ್ಶವಾದಿಗಳು ? ಸತ್ಯದ ಪ್ರತಿಪಾದಕನಾದ ಸಾಕ್ರೆಟೀಸ್, ಸತ್ಯದ ಸಿದ್ಧಾಂತಗಳನ್ನು ಮಂಡಿಸಿದ ಮಹಾಮೇಧಾವಿ. ಸಮಾಜದಲ್ಲಿ ಮೌಲ್ಯಗಳನ್ನು ಕುರಿತು ಹೇಳುವಾಗ 'ಸತ್ಯವನ್ನು ನುಡಿಯುವುದು ಕೊಟ್ಟ ಸಾಲವನ್ನು ತೀರಿಸಿದಂತೆ' ಎಂಬ ಇವನ ಮಾತು ಗಮನಾರ್ಹ. ಕ್ರಿ. ಪೂ. ೩೩೫ರಲ್ಲಿ ಅರಿಸ್ಟಾಟಲ್ ಭೂಮಿ ಬಗ್ಗೆ ಭ್ರಮೆಯಾಗಿ ತಿಳಿಸಿದರೆ ಜನರ ಪ್ರತಿರೋಧ ಭಿನ್ನವಾಗಿದ್ದಿತು. ಅದೇ ಕೊಪರ್ನಿಕಸ್ ವೈಜ್ಞಾನಿಕವಾಗಿ ಹೇಳಿದಾಗ ಜನಮನ್ನಣೆಗೆ ಪಾತ್ರವಾಯಿತು. ಗೆಲಿಲಿಯೋ ಮೊದಲಾದವರನ್ನು ಈ ಹಿನ್ನೆಲೆಯಲ್ಲಿ ಸ್ಮರಿಸಬಹುದು.

ಕ್ರೈಸ್ತಧರ್ಮವು ಜಗತ್ತಿನ ಶಾಂತಿಗೆ, ನೋವಿಗೆ ಜೀವನಾಡಿಯಾಗಿದೆ. ಇದು ಅನೇಕ ದ್ವಂದ್ವಗಳ ಸುಳಿಯಲ್ಲಿ ಅಡಗಿದ್ದಿತು. ಹೀಗೆ ನಾನಾ ಗಂಡಾಂತರಗಳಿಂದ ಈ ಧರ್ಮವನ್ನು ರಕ್ಷಿಸಿದವನೆಂದರೆ ಜೀಸಸ್ ಕ್ರೈಸ್ತ. ಏಸುಕ್ರಿಸ್ತ ಪೂರ್ವಾಶ್ರಮದಲ್ಲಿ ಒಬ್ಬ ಕುರಿಕಾಯುವವನಷ್ಟೇ ಆಗಿದ್ದ. ಅಧ್ಯಾತ್ಮದ ಬದುಕಿನ ಹಾದಿ ತುಳಿದು ಜನರಿಂದ ನೋವುಂಡ ಘಟನೆ ದಾಖಲಾರ್ಹವಾದುದು. ಜನರನ್ನು ಸದಾ ಬಡಿದೆಬ್ಬಿಸುವ, ಜಾಗೃತಿ ಸಂಕೇತವೆಂದು ಅವನನ್ನು ತಿಳಿಯಲಾಗದು. ಇಂಥಾ ಮಹಾನ್ ವ್ಯಕ್ತಿಯನ್ನು ಶಿಲುಬೆಗೇರಿಸಿದ್ದು ಅವನ ಅನುಯಾಯಿಗಳೇ. ಅವನ ಧರ್ಮ, ವಿಚಾರಗಳನ್ನು ಪ್ರಚಾರಗೊಳಿಸಿದವರು ಅವರೆ ಅಲ್ಲವೆ ? ಇವರಿಬ್ಬರಲ್ಲಿ ಆದರ್ಶಗಳ ಪತನ ಹೇಗಾಯಿತೆಂಬುದು ಗಮನಾರ್ಹ. ಕ್ರಿಸ್ತನ ಪುನರುತ್ಥಾನವು ಅವನ ಧರ್ಮದ ಸ್ಥಾಪನೆಗೆ, ಬೆಳವಣಿಗೆಗೆ ಮಾದರಿಯಾಯಿತು. ವಿಶ್ವದಲ್ಲಿ ಅತೀ ಹೆಚ್ಚು ಜನಸಂಖ್ಯೆ ಕ್ರೈಸ್ತರದು. ಧರ್ಮದ ಆದರ್ಶಗಳನ್ನು ಪಾಲಿಸುವಲ್ಲಿ ಉಂಟಾದ ಸಂಘರ್ಷ, ಒಡಂಬಡಿಕೆಗಳು ಹಲವಾರು. ಹೀಗೆಯೇ ಅರಬ್ ರಾಷ್ಟ್ರಗಳಲ್ಲಿ ಆಧ್ಯಾತ್ಮಿಕ ಬದುಕಿಗೆ ದಾರಿ ತೋರಿದ ಮಹಮ್ಮದ್ ಪೈಗಂಬರ್‌ಗೆ ವಿಶೇಷ ಸ್ಥಾನ-ಮಾನ ಕಲ್ಲೇಟು ಕೊಟ್ಟವರು ಮುಸ್ಲಿಮರು ತಾನೇ. ಮೆಕ್ಕಾದಿಂದ ಮದೀನಕ್ಕೆ ಪ್ರಯಾಣಿಸುವಾಗ ಇವನು ನೋಡಿದ ಮತ್ತು ಅನುಭವಿಸಿದ ನೋವಿನ ದೃಶ್ಯ ವರ್ಣನಾತೀತವಾದುದು.

ಪರ್ಶಿಯಾದಲ್ಲಿ ಜೋರಾಸ್ಟರ್ ಅವೆಸ್ತಾ ಮೂಲಕ ಧರ್ಮದ ಹುಟ್ಟಿಗೆ ಕಾರಣನಾದ. ಮುಂದೆ ಇದು ಗ್ರೀಕ್, ಪರ್ಶಿಯಾ ಸಂಸ್ಕೃತಿಗಳ ಮೇಲೆ ಪ್ರಭಾವ ಬೀರಿ 'ಜೋರಾಸ್ಟರ್' (ಜರತುಷ್ಟ) ಧರ್ಮವೆಂದು ಖ್ಯಾತಿ ಪಡೆಯಿತು. ಅಂದಿಗೆ ಆದರ್ಶಪ್ರಾಯವಾದ ಈ ಧರ್ಮ ಕಾಲಾನಂತರ ಅನ್ಯಧರ್ಮಗಳ ಆವಾಸ ಕೇಂದ್ರವಾಯಿತು. ಕ್ರಿ. ಪೂ. ೫೨೮ರಲ್ಲಿ ಸಿದ್ಧಾರ್ಥ ಗೌತಮ ಬುದ್ಧನ ಬೋಧನೆಯು ಕಾಲಾಂತರದಲ್ಲಿ ಆದರ್ಶನೀತಿಗಳೆಂದು ಜೀವನ ಸುಧಾರಣೆಗೆ ಸೋಪಾನವಾಗಿದ್ದವು. ಭಾರತದಲ್ಲಿ ಜನ್ಮತಾಳಿದ ಬೌದ್ಧಧರ್ಮ ಬಹುಬೇಗನೆ ಏಷ್ಯಾರಾಷ್ಟ್ರಗಳಲ್ಲಿ ಪ್ರಚಾರಗೊಳ್ಳಲು ಇದರಲ್ಲಿರುವ ಸತ್ವಗಳೇ ಕಾರಣವಾದುವು. ಕ್ರಿ. ಪೂ. ೧೪೬ರಲ್ಲಿ ಏಷ್ಯಾದ ಆಗ್ನೇಯ ರಾಷ್ಟ್ರಗಳಲ್ಲಿ, ಕ್ರಿ. ಪೂ. ೮೮ರಲ್ಲಿ ಚೀನಾದಲ್ಲಿ ಬೌದ್ಧಧರ್ಮ ಪ್ರವೇಶಿಸಿದ್ದು ಗಮನಾರ್ಹ. ಭಾರತದಲ್ಲಿ ಬೌದ್ಧ ಮತ್ತು ಜೈನ ಧರ್ಮಗಳು ಜೊತೆ ಜೊತೆಯಾಗಿ ಧರ್ಮ ಪ್ರಚಾರ (ಹರಡುವಿಕೆ) ನಡೆಸಿದವು.

ಪ್ರಾಚೀನ ಕಾಲದ ನಾಯಕನು (ಗುಣ-ಲಕ್ಷಣಗಳು) ಆಳ್ವಿಕೆಯ ದೃಷ್ಟಿಯಿಂದ ಜನಮನ್ನಣೆ ಪಡೆಯಬೇಕಾದರೆ ಆ ವ್ಯಕ್ತಿ ಆದರ್ಶನಾಗಿರಬೇಕಿತ್ತು. ಸು. ಕ್ರಿ. ಪೂ. ೬ನೇ ಶತಮಾನದ ಪೂರ್ವದಲ್ಲಿ (ಬ್ಯಾಬಿಲೋನಿಯಾದ ಹಮ್ಮುರಾಬಿ) ಮೆಸಪಟೋಮಿಯಾ ನಾಗರಿಕತೆಯಲ್ಲಿ 'ಗುಡಿಯಾ' ಎಂಬ ಅರಸ ತನ್ನ ರಾಜ್ಯದಲ್ಲಿ ಎಲ್ಲ ಪ್ರಜೆಗಳು ನನಗೆ ಸಮಾನರು ಎನ್ನುವ ಮೂಲಕ ರಾಜ ಮತ್ತು ಪ್ರಜೆಗಳ ನಡುವಿನ ಕಂದರವನ್ನು ಹೋಗಲಾಡಿಸಿದ್ದ. ಹೀಗೆ ರೋಂನಲ್ಲಿ (ಕ್ರಿ. ಪೂ. ೭೫೩) ಒಲಂಪಿಕ್ ಕ್ರೀಡೆಗಳು ನಡೆದಾಗ (೭೭೬) ಅದು ಇಡೀ ಜಗತ್ತಿಗೆ ಮಾದರಿಯಾಯಿತು. ಮುಂದೊಂದು ದಿನ ರೋಂ ಇತಿಹಾಸದಲ್ಲಿ ಶಾಶ್ವತ ಸ್ಥಾನ ಗಳಿಸುವಂತೆ ಮಾಡಿದ ವನು ಜೂಲಿಯಸ್ ಸೀಸರ್. ಇವನು ಕ್ರಿ. ಪೂ. ೫೫ರಲ್ಲಿ ಬ್ರಿಟನ್ ಮೇಲೆ ಕಾಳಗ ಮಾಡುವುದು, ಕ್ರಿ. ಪೂ. ೪೯ರಲ್ಲಿ ರೂಬಿಕಾನ್‌ನೊಂದಿಗೆ ಅಂತರ್ಯುದ್ಧದಲ್ಲಿ ಗೆಲವು ಕಾಣುವುದು, ಕ್ರಿ. ಪೂ. ೪೬ರಲ್ಲಿ ಜೂಲಿಯನ್ ಕ್ಯಾಲೆಂಡರನ್ನು ಜಾರಿಗೆ ತರುವುದು, ಪವಾಡ ಸಾದೃಶ್ಯ ಘಟನೆಗಳು. ಕ್ರಿ. ಪೂ. ೪೫ರಲ್ಲಿ ಸೀಸರ್ ರೋಮಿನ ಅಧಿಪತಿಯಾದುದು ಮಹಾನ್ ತಿರುವೊಂದನ್ನು ಸೃಷ್ಟಿಸಿದೆ. ಹೀಗೆ ಈ ನಾಯಕನ ಗುಣಗಳು ಮತ್ತು ಆದರ್ಶಗಳು ತೀರಾ ವಿಚಿತ್ರವಾಗಿವೆ.

ಭಾರತದಲ್ಲಿ ಇಂಥ ಮಹಾನ್ ವ್ಯಕ್ತಿಗಳ ಜೀವನ ಸಾಧನೆಗಳನ್ನು ಅವಲೋಕಿಸಬಹುದಾಗಿದೆ. ಅಲೆಗ್ಸಾಂಡರ್ ಭಾರತದ ಮೇಲೆ ದಂಡೆತ್ತಿ ಬಂದಾಗ ಅಂಬಿಯು ಶಾಮೀಲಾದರೆ, ಪುರೂರವ ಅವನ ವಿರುದ್ಧ ಹೋರಾಡಿ ದೇಶದ ಅಭಿಮಾನವನ್ನು ಮೆರೆಸುತ್ತಾನೆ. ಯುದ್ಧದಲ್ಲಿ ಗೆದ್ದ ಅಲೆಗ್ಸಾಂಡರ್ ಸಾಹಸಿಯೆಂದು ಆದರ್ಶವಾದರೆ, ಏಕಾಂಗಿ ವೀರನೊಬ್ಬ ಭಾರತಾಂಬೆಯ ನಾಡನ್ನು ಪರಕೀಯನು ಆಳಬಾರದೆಂದು ಕೆಚ್ಚಿನಿಂದ ಹೋರಾಡಿ ರಾಷ್ಟ್ರದ ಗೌರವ ಉಳಿಸಿರುವುದಕ್ಕೆ ಆದರ್ಶಪ್ರಾಯನಾಗಿದ್ದಾನೆ. ತನ್ನಂತೆ ಇತರರು ಅನುಸರಿಸಿದ ಕ್ರಮಗಳು ಆದರ್ಶಪ್ರಾಯ. ಇಂಥವರಿಗೆ ಮಾರ್ಗದರ್ಶನ, ನೀತಿ, ಹಿರಿತನದ ಮಾತುಗಳು ಮುನ್ನಡೆಸುವಲ್ಲಿ ಸಹಕಾರಿಯಾಗಿವೆ.

ಆತ್ಮಸಂಸ್ಕಾರ ಮತ್ತು ಅರಿವು ಆದರ್ಶಕ್ಕೆ ಬೇರು ಮತ್ತು ಚಿಗುರು ಇದ್ದಂತೆ. ಆದರ್ಶ ಎನ್ನುವುದು ಲೋಕಮಾನ್ಯವಾದುದು. ವ್ಯಕ್ತಿಯ ಗುಣಾತ್ಮಕ ಮೌಲ್ಯಗಳಿಗೆ ತೋರುವ ಗೌರವ ಅದು. ಬುದ್ಧನನ್ನು ಮಹಾಪರಿತ್ಯಾಗಿ ಎನ್ನುವುದಾದರೆ, ಜ್ಞಾನೋದಯವಾದ ಬಗೆಯನ್ನು ಹೇಗೆ ವಿಶ್ಲೇಷಿಸಬೇಕು ? ಗೌತಮ ಸಾಂಸಾರಿಕ ಬದುಕಿನಲ್ಲಿ ಸಾಧಿಸಲಾಗದ ಮಹಾ ಸಾಧನೆಯನ್ನು ವೈರಾಗ್ಯ, ಮೋಕ್ಷದಿಂದ ಮಾಡಿದ ಎನ್ನುವುದಾದರೆ ಅವನ ಆದರ್ಶಗಳ ಔಚಿತ್ಯವೇನು ?

ಬುದ್ಧ ತನ್ನ ಸಮುದಾಯದೊಂದಿಗೆ ಬಾಳಿದ್ದು, ತ್ಯಜಿಸಿದ್ದು ಮತ್ತು ಬೋಧಿಸಿದ್ದು, ಈ ಜನರಿಗಾಗಿ ತಾನೇ? ತಾನು ಕರಗಿ ಇನ್ನೊಬ್ಬರಿಗೆ ಬೆಳಕು ನೀಡುವ ಮೇಣದ ಬತ್ತಿಯಂತೆ ಬುದ್ಧನ ಜೀವನವು ಕೂಡ. ಇವನಂತೆ ಅನೇಕ ಪರಿತ್ಯಾಗಿಗಳನ್ನು ಈ ಹಿನ್ನೆಲೆಯಲ್ಲಿ ಗುರುತಿಸಬಹುದಾಗಿದೆ. ಜನರ ಕಲ್ಯಾಣಕ್ಕಿಂತ ಬುದ್ಧನಿಗೆ ತನ್ನ ಸುಖದ ರಾಜವೈಭೋಗ ಕೀಳೆನಿಸಿದ್ದುಂಟು. ಲೋಕದೃಷ್ಟಿಯಲ್ಲಿ ಬುದ್ಧ ಒಬ್ಬ ತತ್ವಜ್ಞಾನಿ – ಸಮಾಜ ಸುಧಾರಕನಾಗಿ

ಕಂಡುಬರುವನು. ಶಂಕರ, ರಾಮಾನುಜರನ್ನು ಬೇರೆ ಬಗೆಯಲ್ಲಿ ವಿಶ್ಲೇಷಿಸುವ ಅಗತ್ಯವಿದೆ. ಕ್ರಾಂತಿಯೋಗಿ ಬಸವಣ್ಣ ತುಂಬು ಕುಟುಂಬದಲ್ಲಿ ಸಂಸಾರಿಯಾಗಿ ಪವಿತ್ರ ಜೀವನ ನಡೆಸಿದ್ದು ಸ್ಮರಣೀಯ. ವಿಗ್ರಹಾರಾಧನೆ, ತೀರ್ಥಯಾತ್ರೆ ಮೊದಲಾದ ಮೂಢ ಹಾಗೂ ಕಂದಾಚಾರಗಳನ್ನು ಹತ್ತಿಕ್ಕಿದ ಶ್ರೇಯಸ್ಸು ಬಸವಣ್ಣನಿಗೆ ಸಲ್ಲುತ್ತದೆ. ಮಧ್ಯಕಾಲದಲ್ಲಿ ಬಸವಣ್ಣ ಒಬ್ಬ ಶ್ರೇಷ್ಠ ತತ್ವಜ್ಞಾನಿ, ವೈಚಾರಿಕ ಚಿಂತಕ - ಕ್ರಾಂತಿಪುರುಷ. ಅವನಿಗೆ ಎದುರಾಗುವ ಶಿಕ್ಷೆ-ಪರೀಕ್ಷೆಗಳು ಅಂದಿನ ಸಮಾಜದ ಸವಾಲುಗಳೇ ಆಗಿದ್ದವು. ಅವುಗಳಿಗೆ ನಾವು ಕ್ರಾಂತಿ, ವೈಚಾರಿಕತೆಯೆಂದು ಕರೆದರೂ ಮಾನವೀಯತೆ ನೆಲೆಯಲ್ಲಿ ಅವನು 'ಆದರ್ಶಪುರುಷ'ನಾದುದು ಗಮನಾರ್ಹ ಸಂಗತಿ. ಇತರ ವಚನಕಾರರನ್ನು ಈ ಬಗೆಯಲ್ಲಿ ನೋಡುವುದು ಸೂಕ್ತ (ಅಲ್ಲಮ, ದಾಸಿಮಯ್ಯ, ಅಕ್ಕ; ದಾಸರಲ್ಲಿ ಪುರಂದರ, ಕನಕದಾಸ).

'ಪರನಾರಿ ಸೋದರ'ನೆಂದು ಖ್ಯಾತನಾದ 'ಕುಮಾರರಾಮ'ನು ಒಬ್ಬ ಚಾರಿತ್ರಿಕ ವ್ಯಕ್ತಿ. ಇಂದು ಅನೇಕ ಸಮುದಾಯಗಳಿಗೆ ಇವನು ಆರಾಧ್ಯ ದೈವನಾಗಿದ್ದಾನೆ; ಅವನು ತ್ಯಾಗ, ಪ್ರತಿಜ್ಞೆಗಳಿಗೆ ಆದರ್ಶ ಪುರುಷನಾಗಿರುವುದು ಸ್ಪಷ್ಟ. ಚರಿತ್ರೆಯಲ್ಲಿ ಇಂಥ ವ್ಯಕ್ತಿಗಳು ಸಿಗುವುದು ತುಂಬಾ ವಿರಳ. ಪ್ರತಿಜ್ಞೆಗೈದ ವ್ಯಕ್ತಿ ರಾಮಾಯಣದಲ್ಲಿ ಬರುವ ಶ್ರೀರಾಮನನ್ನು ಹೊರತು ಪಡಿಸಿದರೆ ಶುದ್ಧ ಚಾರಿತ್ರ್ಯವುಳ್ಳ ಅರಸನೊಬ್ಬ ಬದುಕಿ-ಬಾಳುವುದೇ ನಮಗೆ ಸೋಜಿಗದ ಸಂಗತಿ. ಲಕ್ಷ್ಮೀಧರನು ವಿಜಯನಗರದ ಪ್ರೌಢ ಪ್ರತಾಪದೇವ ರಾಯನ ಪ್ರಸಿದ್ಧ ಮಂತ್ರಿ. ಮಾದರಸ-ಸಾಯಣರ ತಂಗಿ ಸಿಂಗಲೆಯ ಐವರು ಮಕ್ಕಳಲ್ಲಿ ಈತ ಹಿರಿಯ. ಇವನೊಬ್ಬ ಆದರ್ಶ ಮಂತ್ರಿ ಎನ್ನುವುದರಲ್ಲಿ ಅನುಮಾನವಿಲ್ಲ. ಹಂಪೆಯ ಮಾಲ್ಯವಂತ ಪರ್ವತದ ತೆಂಕಣಕ್ಕಿರುವ ಮಹಾಗುಹೆಯಲ್ಲಿ ಬೃಹತ್ ಗಣಪತಿ ವಿಗ್ರಹವನ್ನು ಸ್ಥಾಪಿಸಿ, ಅದಕ್ಕೆ ದತ್ತಿಬಿಟ್ಟವನು ಇವನೇ. ಇವನಿಗಿದ್ದ ಮತ್ತೊಂದು ಹೆಸರು 'ಕವಿರಾಜ'. ನೀತಿವಾಕ್ಯಾಮೃತ, ರಾಮಾಯಣ, ಕೃಷ್ಣಲೀಲೆ ಇತರ ಕಾವ್ಯಗಳನ್ನು ಈತ ರಚಿಸಿದ್ದಾನೆ. ಬಾಲಕನಾಗಿದ್ದಾಗ ಇವನ ತಾಯಿ ಹಾಲೆರೆಯುವ ಸಂದರ್ಭದಲ್ಲಿ 'ಕೆರೆಯನ್ನು ಕಟ್ಟಿಸು, ಬಾವಿಯನ್ನು ತೆಗೆಸು, ದಾಯಾದಿಗಳ ಕಲಹ ನಿವಾರಿಸು' – ಹೀಗೆ ಪ್ರಗತಿಯ ನೀತಿಮಾತುಗಳನ್ನು ಕಿವಿಯಲ್ಲಿ ಹೇಳಿದ ವಿವರಗಳು ಮನನೀಯ ಸಂಗತಿ. ಮುಂದೊಂದು ದಿನ ವಿಜಯನಗರದ ಮಂತ್ರಿಯಾದಾಗ ಹಿಂದಿನ ವಾಕ್ಯವನ್ನು ಪರಿಪಾಲಿಸಿದ್ದು 'ಮಾತೃವಾಕ್ಯ ಪರಿಪಾಲನೆ' ಎನ್ನಬಹುದು. ಅಂದಿನ ರಾಜಕೀಯ, ಸಾಂಸ್ಕೃತಿಕ, ಧಾರ್ಮಿಕ ಕ್ಷೇತ್ರಗಳಲ್ಲಿ ಉಜ್ವಲ ಸಾಧನೆಗೆ ಇವನೇ ಪ್ರೇರಣೆಯ ಸಂಕೇತ. ರಾಜಪ್ರಭುತ್ವದಲ್ಲಿ ಹೊಗಳಿಕೆಗಾಗಿ ಅರಸನನ್ನು ಹೊಗಳಿ ಅಟ್ಟಕ್ಕೇರಿಸಿದ್ದುಂಟು. ಕೃಷ್ಣದೇವರಾಯ (ಮಯೂರ ವರ್ಮ, ಇಮ್ಮಡಿ ಪುಲಿಕೇಶಿ) ಇತ್ಯಾದಿ ಅರಸರನ್ನು ಉದಾಹರಿಸಬಹುದು.

ಸ್ವಾತಂತ್ರ್ಯ ಸಂದರ್ಭದಲ್ಲಿ ಪರಕೀಯರಿಂದ ಭಾರತವನ್ನು ವಿಮೋಚನೆಗೊಳಿಸಲು ಸಹಸ್ರಾರು ದೇಶಭಕ್ತರು ಹುತಾತ್ಮರಾದರು. ಇವರ ಸಾಧನೆ, ಆದರ್ಶಗಳು ಮಣ್ಣುಪಾಲಲ್ಲ! ಹೋರಾಟದ ಕಿಡಿ ಮೂಲಕ ನಮ್ಮನ್ನು ನಾವು ಅರಳಿಸಿಕೊಂಡಿದ್ದು. ಅದುವೇ ಸ್ವಾತಂತ್ರ್ಯ. ನಾಯಕತ್ವ, ನೇತೃತ್ವ ವಹಿಸಿ ಕೊಂಡಿರುವವರಲ್ಲಿ ದೊಡ್ಡಪಟ್ಟಿಯನ್ನೇ ಕೊಡಬಹುದು. ಭಗತ್ ಸಿಂಗ್, ಚಂದ್ರಶೇಖರ್ ಆಜಾದ್, ಸುಭಾಷ್‌ಚಂದ್ರ ಬೋಸ್, ಮಹಾತ್ಮ ಗಾಂಧಿ, ಅಂಬೇಡ್ಕರ್ ಮೊದಲಾದವರಿಲ್ಲಿ ಸ್ಮರಣೀಯರು. ಗಾಂಧಿಗೆ ಪೂಜನೀಯ, ರಾಷ್ಟ್ರಪಿತ, ಮಹಾತ್ಮ, ಬಾಪೂ ಎಂದೆಲ್ಲ ಕರೆದು ಭಾರತದ ಮಹಾನ್‌ವ್ಯಕ್ತಿಯಾಗಿ ಚಿತ್ರಿಸಲಾಗಿದೆ. ಇವರ ಜೀವನ ಚರಿತ್ರೆಯೇ ಒಂದು ಶಾಸನ, ಸಂವಿಧಾನ ಕರಡು ಪ್ರತಿಯಿದ್ದಂತೆ. ಅಷ್ಟು ಶುದ್ಧ ಸತ್ಯ ಹಾಗೂ ಪ್ರಾಮಾಣಿಕತೆಗಳು ಮೇಳೈಸಿವೆ. ನಾಥು ರಾಮ ಗೋಡ್ಸೆ ಇಂಥ ನಾಯಕನನ್ನು ಹತ್ಯೆಗೈಯ್ದಿದ್ದು ಒಂದು ದುರಂತ. ಇದನ್ನು ನಾವು ಆದರ್ಶಕ್ಕೆ ಕೊಟ್ಟ ಶಿಕ್ಷೆ ಅಥವಾ ದೇಶದ ಪ್ರಜೆ ನೀಡಿದ ಮೃತ್ಯುವಿನ ಉಡುಗೊರೆ ಎಂದು ಕರೆದರೆ ತಪ್ಪಾಗಲಾರದು. ನೆಹರು ನವಭಾರತದ ನಿರ್ಮಾಪಕರಾಗಿ, ರಾಜಕೀಯ ಮಾಡಿದ ಸಂಗತಿಗಳು ಇಲ್ಲಿ ಅಪ್ರಸ್ತುತ. ಅಂಬೇಡ್ಕರ್ ಕೆಳವರ್ಗದಲ್ಲಿ ಹುಟ್ಟಿ ಅನಿಷ್ಟ ಪರಿಸ್ಥಿತಿಗಳಲ್ಲಿ ಬಸವಳಿದು-ಬೆಂದು ಮೇಲೆ ಬಂದವರು. ಬಡತನ- ದಾರಿದ್ರ್ಯದಿಂದ ಅಪಾರ ಪಾಂಡಿತ್ಯದೊಂದಿಗೆ, ಪ್ರಭುತ್ವದೆಡೆಗೆ (ಸೂಟು-ಬೂಟು) ಮೇಲ್ಮುಖ ಚಲನೆ ಇವರದು. ಶ್ರೀಮಂತಿಕೆಯ ಸುಪ್ಪತ್ತಿಗೆಯಿಂದ ಜನ ಸಾಮಾನ್ಯರೊಂದಿಗೆ ಗಾಂಧೀಜಿಯ ಹಂಬಲ (ಅರೆ ಬೆತ್ತಲೆ) ಇಮ್ಮುಖ ಚಲನೆಯಾಗಿದೆ. ಇವರಿಬ್ಬರಲ್ಲಿ ಪರಸ್ಪರ ವೈರುಧ್ಯಗಳಿರುವುದು ಸ್ಪಷ್ಟ. ಸಮಾಜ ಸುಧಾರಣೆಯಲ್ಲಿ ರಾಜಾರಾಮ ಮೋಹನರಾಯ, ದಯಾನಂದ ಸರಸ್ವತಿ, ಆತ್ಮಾರಾಮ ಪಾಂಡುರಂಗ ರಾಯರನ್ನು ನೋಡುವುದೇ ಬೇರೆ. ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ, ಅನಿ ಬೆಸೆಂಟ್‌ರನ್ನು ವಿಶ್ಲೇಷಿಸುವ ಪರಿಯೇ ಭಿನ್ನ. ಧಾರ್ಮಿಕ ನಾಯಕ, ಸುಧಾರಣ ನಾಯಕರಾಗಿ ಪರಿವರ್ತನೆಗಳ ಹರಿಕಾರರಾಗಿ ಪ್ರತಿನಿಧಿಸಿದ್ದು ಹೆಚ್ಚು. 'ಆದರ್ಶ' ಎನ್ನುವುದು ಲೌಕಿಕತೆಯನ್ನು ಮೀರಿದ್ದು; ಅಲೌಕಿಕ - ಅನುಭಾವ ಸಂಗತಿಗಳ ಸಂಗಮವೆಂದು ತಿಳಿದಿದ್ದು ಸ್ವಾತಂತ್ರ್ಯ ಪೂರ್ವದ ಬರವಣಿಗೆಗಳ ಮುಖ್ಯ ಧೋರಣೆ. ಇತ್ತೀಚೆಗೆ ಇಂಥಾ ಸಂಕೀರ್ಣ ಸಂಗತಿಗಳ ಪುನಾರಚನೆ ನಡೆಯುತ್ತಿರುವುದು ಸ್ವಾಗತಾರ್ಹ. ಸಚ್ಚಾರಿತ್ರ್ಯ, ಸದ್ಭಾವನೆ, ಸದಾಚಾರಗಳ ಸದ್ಭಕ್ತಿಯನ್ನು ಧಾರ್ಮಿಕ ನೆಲೆಯಲ್ಲಿಯೇ ನಂಬಲಾಗಿತ್ತು.

ಭಾರತೀಯ ವೈಚಾರಿಕ ಕ್ಷೇತ್ರದಲ್ಲಿ ಆದರ್ಶ ಗುಣಗಳನ್ನು ಪರಿಪಾಲಿಸುವಂತೆ, ಅದಕ್ಕೆ ವಿರುದ್ಧವಾಗಿರುವ ಗುಣಗಳನ್ನು ಪಾಲಿಸಲು ಆಸ್ಪದವಿದೆ. ಬಹುತೇಕ ಬುದ್ಧಿ ಜೀವಿಗಳು ಆಯಾ ಸಮಾಜದ ಒಬ್ಬ ಶ್ರೇಷ್ಠ ವ್ಯಕ್ತಿಯ ವಿಚಾರಧಾರೆಯನ್ನು ಅಳವಡಿಸಿಕೊಳ್ಳುವುದುಂಟು. ಉದಾ: ಕಾರ್ಲ್ ಮಾರ್ಕ್ಸ್, ಗಾಂಧಿ, ಅಂಬೇಡ್ಕರ್, ಲೋಹಿಯಾ, ಪೆರಿಯಾರ್ ಮೊದಲಾದವರು. ಯಾವುದೇ ಚಿಂತಕನಾಗಿ ರಲಿ ಅವನು ಬುದ್ಧಿಜೀವಿ ಎಂಬ ಪಟ್ಟ ಗಳಿಸಿದರೆ ಒಂದು ವಾದಶಾಹಿಗೆ ಬದ್ಧನಾಗಿರಬೇಕು! ಕೆಲವರಿಗಿದು ಫ್ಯಾಷನ್ ಆಗಿದೆ. ಉದಾತ್ತ ಮೌಲ್ಯಗಳಿರುವ ಎಷ್ಟೋ ವೀರರು ತಮ್ಮ ರಾಜನಿಗೆ ನಿಷ್ಠೆ ತೋರಿ ಬಲಿದಾನವಾದ 'ಗತಚರಿತ್ರೆ' ದುರಂತಗಳೆಷ್ಟೋ ಇಂದಿಗೂ ಪ್ರಚಲಿತ.

ವ್ಯಕ್ತಿ ತನ್ನನ್ನು ತಾನು ತಿದ್ದಿಕೊಂಡು ಸಮಾಜವನ್ನು

## ನಂಬಿಕೆ

ಅಲ್ಲೆಲ್ಲೋ ದೇವನಿದ್ದಾನೆಂದು
ಅಲೆವವನಿಗಾಯಾಸ.
ಆಸೆಯೂ ಕೈಗೂಡದು
ಇಲ್ಲಿಯೇ ಇಹನೆಂದು
ಅರಿತು ಅನುಭವಿಸಿದೊಡೆ
ದೊರೆಯುವುದು ಸುಖವು.



ಹಡಗು ನೆಲೆ ನಿಂತಿರಲು,
ಪಟಸ್ತಂಭವನ್ನೇರಿ
ಕುಳಿತಿತ್ತು ಒಂದು ಹಕ್ಕಿ.
ಹಡಗು ಪಯಣಿಸಿ, ಕಡೆಗೆ
ನಡುಗಡಲ ಸೇರಿರಲು,
ಹಕ್ಕಿ ಹಾರಿತ್ತು ತನ್ನ
ನೆಲೆಯ ಹುಡುಕಿ
ಸುತ್ತ ಗಾವುದ ಹಾರಿ,
ದಣಿದು ಬಲು ಬಾಯಾರಿ,
ನೆಲೆಯ ಕಾಣದೆ ಹೆದರಿ,
ಮತ್ತೆ ಮರಳಿತು ಹಕ್ಕಿ
ಹಾಯಿಪಟಕೆ.

'ಇದೆ ನನ್ನ ನೆಲೆ' ಯೆಂದು
ನಂಬಿ ಕಣ್ಮುಚ್ಚಿರಲು
ಇರುಳಳಿದು ಉಷೆ ಬರಲು
ಹಡಗು ದಡದೊಳಗಿತ್ತು
ಹಕ್ಕಿ ನಲಿದಿತ್ತು !

**'ಕಾವ್ಯಸುಧಾಪ್ರಿಯ' (ಕೆ. ಜಿ. ರಂಗಯ್ಯ)**
ನಿವೃತ್ತ ಶಿಕ್ಷಕರು, ಕೆಂಕೆರೆ ಪಾಳ್ಯ, ಸುಗ್ಗನಹಳ್ಳಿ ಅಂಚೆ-೫೬೧ ೧೦೧
ಮಾಗಡಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ

ತಿದ್ದುವ ಕೆಲಸವು ಆದರ್ಶವಾದುದು. ಇದಕ್ಕೆ ಪುರಸ್ಕಾರ-ಪ್ರಶಸ್ತಿ ಸಿಗಲಿಲ್ಲವೆಂಬ ಕೊರಗು ಕಾಡಬಾರದು. ಸಮಾಜದ ಅಂಕು-ಡೊಂಕುಗಳನ್ನು ಸರಿಪಡಿಸುವುದು ಹಿಂದಿನಿಂದಲೂ ಆಗಿಲ್ಲ, ಈಗಲೂ ಆಗಿಲ್ಲ. ಆದರೆ ಆದರ್ಶದ ಹೆಸರಿನಲ್ಲಿ ನಮ್ಮ ರಾಷ್ಟ್ರ, ರಾಷ್ಟ್ರಗೀತೆ, ರಾಷ್ಟ್ರಧ್ವಜ, ರಾಷ್ಟ್ರಲಾಂಛನ, ರಾಷ್ಟ್ರನಾಯಕ – ಹೀಗೆ ಭಾವನಾತ್ಮಕ ಬೆಸುಗೆಯೊಂದಿಗೆ ಒಂದಾಗುವ ತವಕ ಎಲ್ಲರ ಹೆಬ್ಬಯಕೆ. ಇದಕ್ಕೆ ನಮ್ಮನ್ನು ನಾವು ಗೌರವಿಸಿಕೊಳ್ಳುವ ಪರಿ ಎಂದರೂ ತಪ್ಪಲ್ಲ. ರಾಷ್ಟ್ರದ ಸಮಗ್ರತೆ, ಐಕ್ಯತೆ ಕಾಪಾಡುವಲ್ಲಿ ಮೇಲಿನ ಸಂಗತಿಗಳು ಪ್ರಸ್ತುತ.

'ಆದರ್ಶ' ಎಂಬುದು ಕನಸಿನ ರಾಜ್ಯದ ಕಲ್ಪನೆಗೆ ಒಳಪಟ್ಟಿತ್ತೆ ಅಥವಾ ಇಲ್ಲವೇ ಎಂಬುದು ಚರ್ಚಾಸಂಗತಿ. 'ಯುಟೋಪಿಯಾ'ವನ್ನು ಮೀರಿ ಲೋಕಾತೀತ ಮತ್ತು ವ್ಯಕ್ತಿ ಸೀಮಾತೀತ ರೇಖೆಯನ್ನು ದಾಟಬೇಕಾಗಿದೆ. ಆಧುನಿಕತೆ ಎನ್ನುವುದಾಗಲಿ, ಪರಿವರ್ತನೆ ಎಂದಾಗಲಿ ಭಾವಿಸಬಾರದು. ಔಚಿತ್ಯದ ಅರಿವು, ಹೋರಾಟ, ಚಳುವಳಿ, ಸಂಘಟನೆ-ಸಂಘರ್ಷಗಳ ಶ್ರಮವನ್ನು ಇದು ಪ್ರತಿನಿಧಿಸುತ್ತದೆ. ಆಯಾ ನೆಲೆಯಲ್ಲಿ ಖ್ಯಾತನಾದವನನ್ನು ಅನುಯಾಯಿಯೆಂದು, ಮಾದರಿ ವ್ಯಕ್ತಿಯೆಂದೂ ಗುರುತಿಸಿಕೊಳ್ಳುವುದು ಸಹಜ. ಸಾಮಾಜಿಕವಾಗಿ ಉದಾತ್ತ ಮೌಲ್ಯಗಳಿಂದಲೇ ಆದರ್ಶ ವ್ಯಕ್ತಿಯಾಗಿ ಈವರೆಗೆ ರೂಪಿಸಲಾಗಿದೆ. ಎಲ್ಲರೂ ಆದರ್ಶವ್ಯಕ್ತಿಗಳಾಗಲು ಬಯಸುತ್ತಾರೆ, ಆದರೆ ಉಳಿಯುವವರು ಕೆಲವರು ಮಾತ್ರ. ಅದು ಆದರ್ಶ ಪ್ರಜೆ, ಆದರ್ಶ ನಾಗರಿಕ ಎಂಬ ಹೆಸರಿನಲ್ಲಿ. ಕೊನೆಗೆ ಮಹಾತ್ಮನ ಸ್ಥಾನವನ್ನೂ ಹೀಗೆ ಕರೆಯಲಾಗುವುದು.

ದಕ್ಷಿಣ ಭಾರತದ ವಾಲ್ಟೈರ್, ದಕ್ಷಿಣ ಏಷ್ಯಾದ ಸಾಕ್ರೆಟೀಸ್‌ನೆಂದು ಖ್ಯಾತರಾದ ಪೆರಿಯಾರ್ ರಾಮಸ್ವಾಮಿ ನಾಯ್ಕರ್ ಒಬ್ಬ ತತ್ವಜ್ಞಾನಿ. ದ್ರಾವಿಡರ ತಂದೆ, ಮೌಢ್ಯತೆ-ಅಂಧಕಾರ ತೊಲಗಿಸಿದ ಹರಿಕಾರ. ತಮಿಳು ನಾಡಿನ ದ್ರಾವಿಡ ಕಳಗಂ ನಾಯಕ. ಬ್ರಾಹ್ಮಣರನ್ನು(ತ್ವ) ವಿರೋಧಿಸಿ ದ್ರಾವಿಡಸ್ಥಾನಕ್ಕಾಗಿ ಆಂದೋಲನ ಮಾಡಿದ ಮಹಾ ಸಾಹಸಿ. ಇಂದಿಗೂ ಆತ ದ್ರಾವಿಡರಿಗೆ ಸ್ಫೂರ್ತಿ, ಚೇತನ, ಆದರ್ಶವಾಗಿರುವುದು ಹೆಮ್ಮೆಯ ಸಂಗತಿ. ಅಜ್ಞಾನವನ್ನು ತೊಲಗಿಸಲು ಶ್ರಮಿಸಿದ್ದು ಪ್ರಥಮ ಕರ್ತವ್ಯಗಳಲ್ಲೊಂದು. ಹಾಗೆ ಹೋರಾಟ, ಭಾಷಣ, ಮೆರವಣಿಗೆಗಳ ಮೂಲಕ ಮೂಲಭೂತವಾದಕ್ಕೆ ಕೊಡಲಿ ಪೆಟ್ಟು ಹಾಕಿದರು. ಮೌಢ್ಯತೆಯನ್ನು ಬಿಟ್ಟು ಆದರ್ಶಗಳನ್ನು ಬೋಧಿಸಿದ ಪಿತಾಮಹನಾದ ಪೆರಿಯಾರ್ ದ್ರಾವಿಡ ಸಂಸ್ಕೃತಿಯ ನೇತಾರನಾಗಿ ದೇಶೀಯತೆಯ ಮೇಲೆ ಪರಕೀಯತೆ ಧಾಳಿಯನ್ನು ಮತ್ತು ಬ್ರಾಹ್ಮಣತ್ವ (ಶಾಹಿಯನ್ನು) ತಡೆಗಟ್ಟಿದ ಮಾನವತಾವಾದಿ. ಜೀವನದ ಹಂಗು ತೊರೆದು ಬ್ರಾಹ್ಮಣತ್ವವನ್ನು ಖಂಡಿಸಿ, ದೇವರು ಗಳಿಗೆ ಅಪಮಾನ ಮಾಡಿದ ಛಲಗಾರ. ಹಿಂದೂಧರ್ಮ, ವೈದಿಕಧರ್ಮ ಹೀಗೆ ಅವೈಜ್ಞಾನಿಕತೆಯನ್ನು ಅಲ್ಲಗೆಳೆದು ವಾಸ್ತವದ ಪರಿಧಿಗೆ ಜನರನ್ನು ಕರೆದೊಯ್ಯಲು ಅವಿರತ ಹೋರಾಟದಲ್ಲಿ ಕಂಡುಂಡ ನೋವುಗಳೇ ಹೆಚ್ಚು. ಸಂಸ್ಕೃತ ಭಾಷೆ, ಬ್ರಾಹ್ಮಣರ ಬಗ್ಗೆ, ದೇಶದ್ರೋಹ ಕೆಲಸ ಮಾಡಿದ್ದಾರೆಂದು ಅವಮಾನಗೊಳಿಸುವಲ್ಲಿ ನಿರತನಾಗಿರುವನೆಂದು ನೆಹರು ಈತನನ್ನು 'ಹುಚ್ಚ'ನೆಂದು ಬಂಧಿಸಿದ್ದರು. ಇವರ ಹೋರಾಟದ ಪುಟಗಳು ಕ್ರಾಂತಿಕಾರಿ, ರೋಮಾಂಚನ. ದೇಶ ಚುಕ್ಕಾಣಿ ಹಿಡಿದ ವ್ಯಕ್ತಿಗಳನ್ನು ಪ್ರಶ್ನಿಸುವಾಗ ಶಿಕ್ಷೆ ಅನುಭವಿಸಿದ್ದು ವಿಷಾದನೀಯ. ದೇಶದ ಜನತೆಗಾಗಿ ಹೋರಾಡುವಾಗಲೇ ಅಪಾರ ನೋವುಂಡ ಪೆರಿಯಾರ್ ಜೀವನ ಚರಿತ್ರೆ ಇಂಥ ಅನೇಕ ಘಟನೆಗಳಿಂದ ತುಂಬಿಹೋಗಿದೆ. ಇಂದಿನ ತಮಿಳುನಾಡಿನಲ್ಲಿರುವ ಡಿ.ಕೆ, ಡಿ.ಎಂ.ಕೆ, ಎ.ಐ.ಎ.ಡಿ.ಎಂ.ಕೆ. ಗಳ ಮೂಲ ಇವರ ಚಿಂತನೆಗಳೇ ಎನ್ನಬಹುದು. ಇಂಥ ಆದರ್ಶ ವ್ಯಕ್ತಿಯ ಮೌಲ್ಯಗಳನ್ನು ಗಾಳಿಗೆ ತೂರಿ ರಾಜಕೀಯ ಹೊಂದಾಣಿಕೆಗೆ ಹಾತೊರೆಯುವ ಈ ಪಕ್ಷಗಳು ತಮ್ಮ ಸಿದ್ಧಾಂತಗಳಿಗೆ ತಾವೇ ನಾಚಿ ತಲೆಬಾಗಬೇಕಾದ ಪರಿಸ್ಥಿತಿ ಇಂದು ನಿರ್ಮಾಣವಾಗಿದೆ. ಅಂದು ಸಹಸ್ರಾರು ಬಾರಿ ಪೆರಿಯಾರ್ ಜೈಲಿಗೆ ಹೋದರು; ಅಲ್ಲಿ ಶಿಕ್ಷೆ ಅನುಭವಿಸಿದರು. ಡಾ. ರಾಮಮನೋಹರ ಲೋಹಿಯಾ ಅನಾರೋಗ್ಯದ ವೇಳೆಯಲ್ಲಿ ಜೈಲಿನಲ್ಲಿರುವುದು ಬೇಡವೆಂದರೂ ಪೆರಿಯಾರ್ ಅಲ್ಲೇ ಸಂದರ್ಶನ ಕೊಡುತ್ತಿದ್ದರು.

'ಆದರ್ಶ' ಎನ್ನುವುದೇ ವ್ಯಕ್ತಿಯನ್ನು ಬಂಧಿಸುವ ವಿಶಿಷ್ಟ ಸಂಕೋಲೆ ! ಇದು ಆಯಾ ಕಾಲಘಟ್ಟ, ಸಂದರ್ಭ ಮತ್ತು ವ್ಯಕ್ತಿಗಳನ್ನು ಅವಲಂಬಿಸಿರುತ್ತದೆ. ಶಿಕ್ಷೆಯ ರೂಪದಲ್ಲಿ ವ್ಯಕ್ತಿ ತನಗೆ ತಾನೇ ಅರ್ಪಣೆ ಮಾಡಿಕೊಳ್ಳುವ ಸಾಂಕೇತಿಕ ರೂಪವುಂಟು. 'ಆದರ್ಶ'ವು ಪ್ರತಿಫಲವಾಗಿ ಸಮಕಾಲೀನ ದೌರ್ಬಲ್ಯಗಳ, ಮೌಢ್ಯಗಳನ್ನು ನಿವಾರಿಸುವ ಅಸ್ತ್ರವಾಗಿದೆ. ಇಂಥ ಅಸ್ತ್ರವನ್ನು ಮೈಗೂಡಿಸಿಕೊಂಡಿರುವವರಿಗೆ ಮತ್ತೊಂದು ನೆಲೆಯಲ್ಲಿ ಶಿಕ್ಷೆ(ಮಾನಸಿಕ)ಯ ಸಂಬಂಧವುಂಟು. ಇಷ್ಟೆಲ್ಲ ನೋವುಪಟ್ಟು ಸ್ವಚ್ಛವಾಗಿದ್ದರೂ ಶಿಕ್ಷೆ, ಬಂಧನದ ಭೀತಿ ಮಾತ್ರ ಮಾಸಿಲ್ಲ. ಸ್ವಾತಂತ್ರ್ಯ ಪೂರ್ವದಲ್ಲಿ ಜೈಲಿಗೆ ಹೋಗುವುದೆಂದರೆ ಖುಷಿ, ಆನಂದ. ಅಂಥ ಮಾನಸಿಕ ಸ್ಥಿತಿ ಇಂದು ಮರೆಯಾಗಿದೆ. ಇಂದು ಯಾವೊಬ್ಬ ವ್ಯಕ್ತಿ ಉದಾತ್ತ ಧ್ಯೇಯಗಳನ್ನಿಟ್ಟುಕೊಂಡು ದೇಶಸೇವೆಗೆ ಸಮರ್ಪಿಸಿಕೊಂಡರೂ ಜನ ಅನುಮಾನ ಪಡುವುದು ಸಹಜ. ಏಕೆಂದರೆ ಇಡೀ ಪರಿಸರವೇ ಕಲುಷಿತಗೊಂಡಿರುವುದರಿಂದ ಯಾರನ್ನು ನಂಬಬೇಕು, ಯಾರನ್ನು ನಂಬಬಾರದೆಂಬುದು ಜನರನ್ನು ಸಂಕಷ್ಟಕ್ಕೆ ಒಳಗುಮಾಡಿದೆ!!

ಅಸ್ಪೃಶ್ಯತೆಯ ನಿವಾರಣೆಗಾಗಿ ಹೋರಾಡಿದ ನಾಯಕರೇ ಇಂದು ದಿಗ್ಭ್ರಾಂತರಾಗಿದ್ದಾರೆ. ಪಿಡುಗು ನಿವಾರಿಸುವ ಕ್ರಮ ಅಗತ್ಯ. ಈ ಸಂಗತಿಗಳಿಂದ ಸಮಾಜವು ತತ್ತರಿಸಿತ್ತು. ಗುಲಾಮಗಿರಿಯನ್ನು ನಾಶಮಾಡಿ, ಕರಿಯ ಬಿಳಿಯ ಎನ್ನುವ ತಾರತಮ್ಯವನ್ನು ಪರಿಹರಿಸಿದ ಅಬ್ರಾಹಂ ಲಿಂಕನ್ನನ ಶ್ರಮ ಸಾರ್ಥಕ. ದೇಶ-ಮಾತೃಪ್ರೇಮಿಯಾದ ಈತನು ಒಮ್ಮೆ ನಾಟಕ ಮಂದಿರದಲ್ಲಿ ಆನಂದಿಸುತ್ತಿರುವಾಗ ಕೊಲೆಯಾದದ್ದು ಹಾಡುಹಗಲಿನಷ್ಟೆ ಸತ್ಯ. ಅಬ್ರಾಹಂ ಲಿಂಕನ್ ಜಗತ್ತಿಗೆ ಆದರ್ಶ ವ್ಯಕ್ತಿ. ಇದೇ ರೀತಿ ಒಂದು ಬಣದ ನಾಯಕ ಜಾನ್ ಎಫ್. ಕೆನಡಿಯ ಬದುಕು ದುರಂತದಲ್ಲಿ ಅಂತ್ಯವಾಯಿತು. ದಕ್ಷಿಣ ಆಫ್ರಿಕದ ಕರಿಯರ ವಿಮೋಚನೆಗಾಗಿ ಹೋರಾಡಿದ ನೆಲ್ಸನ್ ಮಂಡೇಲಾ ಸುಮಾರು ಇಪ್ಪತ್ತೊಂದು ವರ್ಷಗಳಷ್ಟು ಕಾಲ ಸೆರೆಮನೆಯಲ್ಲಿದ್ದದ್ದು ಈಗಲೂ ನಮಗೆ ನೆನಪು. ಆತ ಹೋರಾಡಿದ್ದು ಜನರಿಗಾಗಿ-ದೇಶಕ್ಕಾಗಿ. ಅಲ್ಲಿಯ ಸರ್ಕಾರ ಇವನನ್ನು ಬಂಧಿಸಿ ಜನಾಂಗದ್ವೇಷದ ಧೋರಣೆ ಮೆರೆಸಿತ್ತು. ತೊಂಬತ್ತರ ದಶಕದಲ್ಲಿ ಈತ ತನ್ನ ಆಕಾಂಕ್ಷೆಯ ದಕ್ಷಿಣ ಆಫ್ರಿಕಾದ ಕರಿಯರ ಮೊದಲ ಅಧ್ಯಕ್ಷನಾದದ್ದು ಸ್ಮರಣೀಯ. ಭಾರತವನ್ನು (ಪ್ರಧಾನಿಗಳಾಗಿ) ಪ್ರಗತಿ ಪಥದಲ್ಲಿ ಉನ್ನತ ಸ್ಥಾನಕ್ಕೆ ಕೊಂಡೊಯ್ದ ಶ್ರೀಮತಿ ಇಂದಿರಾ ಗಾಂಧಿ ಮತ್ತು ರಾಜೀವ ಗಾಂಧಿಯವರಿಗೆ ಆದ ಶಿಕ್ಷೆ ಎಂತಹದ್ದು, ದೇಶೀಯರಿಂದಲೇ ಗುಂಡೇಟಿಗೆ ಬಲಿಯಾಗಿ ತಮ್ಮ ಅದಮ್ಯವಾದ ಕನಸುಗಳಿಗೆ ವಿದಾಯ ಹೇಳಿದ್ದು ದುರದೃಷ್ಟಕರ. ಜೀವಂತವಿರುವ ವ್ಯಕ್ತಿಗಿಂತ ಸತ್ತ ವ್ಯಕ್ತಿಗೆ ನಾವು ಆದರ್ಶದ ಪಟ್ಟವನ್ನು ಕಟ್ಟುವುದುಂಟು. ಈ ಹಿನ್ನೆಲೆಯಲ್ಲಿ ನೆಹರು ಕುಟುಂಬವನ್ನು ಗತಾವಲೋಕಿಸಿದಾಗ, ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಒಂದೇ ವಂಶ, ಪ್ರಭುತ್ವ, ಶಾಶ್ವತ ಆಡಳಿತ ನಡೆಸಬಾರದೆಂದು ಜನರು ಕಲಿಸಿದ ಪಾಠವೆನ್ನಬೇಕೋ ತಿಳಿಯದು.

ಒಟ್ಟಾರೆ ಹೇಳುವುದಾದರೆ ಸಮಾಜ ಸೇವಾ ಮನೋಭಾವದ ವ್ಯಕ್ತಿಗೆ ಆದರ್ಶಗಳಿರುವುದು ಸಹಜ. ಇವು ಸತ್ಯ, ತ್ಯಾಗ, ಸತ್ಯಾಗ್ರಹ, ಚಳುವಳಿ ಹೋರಾಟಗಳ ಮೂಲಕ ವ್ಯಕ್ತಪಟ್ಟಿವೆ. ಪ್ರಾಚೀನ ಕಾಲದಲ್ಲಿ ಒಂದು ವ್ಯವಸ್ಥೆಯ ಪರ ವಿರುದ್ಧ ಹೋರಾಟಗಳು ನಡೆದಿದ್ದವು. ಭಾರತದ ಭೌಗೋಳಿಕ ಪರಿಸರ, ಚಾರಿತ್ರಿಕ ನೆಲೆಗಳ ಮೂಲಕ ನಾನಾ ಸಮುದಾಯಗಳು ವೈವಿಧ್ಯತೆಯಲ್ಲಿ ಏಕತೆ ಕಾಣುವುದು ಸ್ಪಷ್ಟ. ಪ್ರಾಚೀನ ಪರಂಪರೆಯನ್ನೇ ಅವಲೋಕಿಸುವುದು ಆದರ್ಶಕ್ಕೆ ಒಂದು ಸಾಕ್ಷಿ. ಅಲೆಕ್ಸಾಂಡರ್ ಭಾರತದ ಮೇಲೆ ದಂಡೆತ್ತಿ ಬಂದಾಗ ಪೋರಸ್‌ನೊಡನೆ ಕಾಳಗ (ಕ್ರಿ. ಪೂ. ೩೨೬), ಶಹಾಬುದ್ದೀನ್ ಘೋರಿ ಮತ್ತು ಪೃಥ್ವಿರಾಜರ ಕಾಳಗ (೧೧೯೨), ಬಾಬರ್ ಮತ್ತು ಹೇಮುವಿಗೆ ನಡೆದ ೧೫೫೬ರ ಪಾಣಿಪತ್ ಕದನ ಮತ್ತು ದಖನ್ ಸುಲ್ತಾನರು (ಬಹಮನಿ) ವಿಜಯನಗರದರಸ ರಾಮರಾಯನನ್ನು (೧೫೬೫ ಜನವರಿ ೨೩) ರಕ್ಕಸಗಿ-ತಂಗಡಗಿ ಯುದ್ಧದಲ್ಲಿ ಮಣ್ಣುಮುಕ್ಕಿಸಿ, ಧೂಳಿಪಟ ಮಾಡಿದ್ದನ್ನು ಇತರ ಕ್ಷತ್ರಿಯರಿಗೆ ಪಾಠ ಕಲಿಸಿದಂತಾಯಿತು. ಇಲ್ಲಿ ನಾಲ್ಕು ಜನರು ಅಸಾಮಾನ್ಯ ವ್ಯಕ್ತಿಗಳು, ದೇಶ, ಧರ್ಮ, ಸಂಸ್ಕೃತಿ, ಅಭಿಮಾನಿಗಳು ಮತ್ತು ರಕ್ಷಕರು. ಪ್ರಾಚೀನ ಮತ್ತು ಆಧುನಿಕತೆಗೆ ಕಳಚಲಾರದ ಕೊಂಡಿಯಿದೆ. ಉದಾಹರಣೆಗೆ ನೋಡುವುದಾದರೆ ವಾಲ್ಮೀಕಿ ಮತ್ತು ಗಾಂಧಿ ಶ್ರೀರಾಮನನ್ನು ಆದರ್ಶವಾಗಿ ಕಂಡಿದ್ದರು. ಶ್ರೀರಮಣ ಮಹರ್ಷಿ ''ನೀ ಅರಿತರೆ ನಿನಗೆ ಇಡೀ ವಿಶ್ವವೇ ಅರ್ಥವಾಗುವುದೆಂಬ'' ಮಾತು ಆದರ್ಶ ವ್ಯಕ್ತಿಗಳ ದೃಷ್ಟಿಯಿಂದ ಮಹತ್ವವಾದುದು. 'ಅರಿವು' ಎಂಬುದು ವ್ಯಕ್ತಿ (ಬಸವಣ್ಣ) ತನಗೆ ತಾನೇ ಅನ್ವೇಷಣೆಗೊಳಪಡುವ, ಜಾಗೃತನಾಗುವ, ಜ್ಞಾನದ ಸಂಕೇತವಾದ ಕರುಹಾಗಿ ಬೆಳೆಯುತ್ತಾನೆ.

ಇಂದಿನ ವಿದ್ಯಾರ್ಥಿಗಳೇ ಮುಂದಿನ ನಾಗರಿಕರು. ಹೀಗಾಗಿ ವಿದ್ಯಾರ್ಥಿ ದೆಸೆಯಲ್ಲಿಯೇ ಮಾನವೀಯ ಮೌಲ್ಯಗಳನ್ನು, ಆದರ್ಶಗಳನ್ನು ಬಿತ್ತಿ ಬೆಳೆಸಬೇಕಾಗಿರುವುದು ಅನಿವಾರ್ಯ. ಇದು ಪ್ರತಿಯೊಬ್ಬ ಪ್ರಜ್ಞಾವಂತನ ಕರ್ತವ್ಯವೆಂಬುದನ್ನು ಸಮಾಜ ನಿರೀಕ್ಷಿಸುತ್ತದೆ.

**ಡಾ|| ವಿರೂಪಾಕ್ಷಿ ಪೂಜಾರಹಳ್ಳಿ**
ದಲಿತ ಅಧ್ಯಯನ ಪೀಠ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ವಿದ್ಯಾರಣ್ಯ-೫೮೩೨೭೬
ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ

# ಜಾಗತೀಕರಣವೆಂಬ ಮಾಯೆ
# ಬಡರೈತ - ಕಾರ್ಮಿಕನ ಉರುಳು

ಎಂ. ಜಿ. ಚಂದ್ರಶೇಖರಯ್ಯ

'ಜಾಗತೀಕರಣ'ವೆಂಬ ಮಾತು ಕಳೆದ ಒಂದು ದಶಕದಿಂದ ವ್ಯಾಪಕವಾಗಿ ಕೇಳುಬರುತ್ತಿದ್ದರೂ, ಅದರ ಕೆಟ್ಟ ಪರಿಣಾಮಗಳು ಒಂದೆರಡು ವರ್ಷಗಳಿಂದ ನಮ್ಮ ನಾಡಿನ ಜನತೆಯನ್ನು ತೀರಾ ಕಂಗಾಲಾಗಿಸಿವೆ. ಇದಕ್ಕೆ ಇತ್ತೀಚಿನ ಕೇಂದ್ರಸರ್ಕಾರದ ನೇತೃತ್ವ ವಹಿಸಿದ ಕೆಲವರನ್ನು ಹೊಣೆಗಾರರನ್ನಾಗಿಸಿ ಅವರ ವಿರುದ್ಧ ಕಟುವಾದ ಆಪಾದನೆಗಳೂ ಕೇಳಿಬರುತ್ತಿವೆ. ನಿಜವಾದ ಸಂಗತಿ ಯೆಂದರೆ ಜಾಗತೀಕರಣವೆಂಬುದು ಸುದೀರ್ಘ ಹಾದಿ ಸವೆಸಿ ಬಂದ ಬಂಡವಾಳಶಾಹಿ ನೇತೃತ್ವದ ಕೈಗಾರೀಕೀಕೃತ ಪ್ರಕ್ರಿಯೆಯ ಪರಿಣಾಮ. ಅದರಿಂದಾಗಿ ಆಧುನಿಕ ಸಮಾಜವು ಎದುರಿಸಲೇಬೇಕಾಗಿರುವುದು ಬಿಕ್ಕಟ್ಟು ಮಾತ್ರ. ಇದರ ಬಗ್ಗೆ ಪರ/ವಿರೋಧ ನಿಲುವು ತಳೆದು ಒಂದು ಪಕ್ಷ ವಹಿಸಿ ಮಾತನಾಡುವುದು ಜಟಿಲ ವಿಷಯದ ಸರಳೀಕರಣ ಮತ್ತು ಅವಸರದ ತೀರ್ಮಾನಗಳಿಗೂ ಕಾರಣವಾಗುತ್ತದೆ.

ಹದಿನಾರನೇ ಶತಮಾನದಿಂದ ಆರಂಭವಾದ ಯೂರೋಪಿನ ಸಾಹಸಗಾಥೆಯ ಫಲ ಜಾಗತೀಕರಣ ವಾಗಿರುವಂತೆ, ಅದು ಅಭಿವೃದ್ಧಿಶೀಲ ದೇಶಗಳ ಕಣ್ಣೀರಿನ ಕಥೆಯೂ ಆಗಿದೆ. ಕೃಷಿ ಪ್ರಧಾನ ಸಮಾಜವಾಗಿದ್ದ ಪಶ್ಚಿಮ ಯಾವಾಗ ಹಡಗು ಕಟ್ಟಿ ಕಾಣದ ದೇಶಗಳನ್ನು ಹುಡುಕಿ ಹೊರಟಿತೋ ಮತ್ತು ಅಲ್ಲಿಂದ ಅಪಾರ ಸಂಪತ್ತನ್ನು ಕೊಳ್ಳೆ ಹೊಡೆದು ತನ್ನ ಬೊಕ್ಕಸ ತುಂಬಿಕೊಳ್ಳಲಾರಂಭಿಸಿತೋ ಹಾಗೂ ಮಾನವ ಶಕ್ತಿಯನ್ನು ತೊರೆದು ಯಂತ್ರ ಶಕ್ತಿಯನ್ನು ಶೋಧಿಸಿ, ಕೈಗಾರಿಕೆಗಳನ್ನು ನಿರ್ಮಿಸಿ ರಾಶ್ಯುತ್ಪನ್ನ (mass production) ಮತ್ತು ವ್ಯವಸ್ಥಿತ ಬೃಹತ್ ಮಾರುಕಟ್ಟೆ ಜಾಲವನ್ನು ತನ್ನ ಸರಕಿನ ವಿಲೇವಾರಿಗೆ ರೂಪಿಸಿಕೊಂಡಿತೋ, ಅಂದಿನಿಂದ ಜಗತ್ತಿನ ಚಿತ್ರವೇ ಒಟ್ಟಾರೆ ಬದಲಾಯಿತು. ಜ್ಞಾನಶಕ್ತಿ ನೀಡಿದ ಈ ಸಂಪತ್ತು ಮನುಷ್ಯ ಸಂಬಂಧಗಳ ಸ್ವರೂಪವನ್ನೇ ಬದಲಾಯಿಸಿತು. ಜೊತೆಗೆ ಈ ಹೊಸ ಆರ್ಥಿಕ-ರಾಜಕೀಯ ವ್ಯವಸ್ಥೆಯು ಸಾಂಸ್ಕೃತಿಕ ಪಲ್ಲಟಗಳಿಗೆ ಕಾರಣವಾಯಿತು.

ಕೇವಲ, ಶಕ್ತ ರಾಷ್ಟ್ರವೊಂದು ಪಕ್ಕದ ದುರ್ಬಲ ರಾಷ್ಟ್ರವೊಂದರ ಮೇಲೆ ಯುದ್ಧ ಅಥವಾ ಅಂತಃಕಲಹಗಳಲ್ಲಿ ತೊಡಗಿ ಜನಾಂಗೀಯ ಕಲಹಗಳಲ್ಲಿ ಹೊಡೆದಾಡಿಕೊಂಡಿದ್ದ ಅಂತರರಾಷ್ಟ್ರೀಯ ಸಮಾಜ, ೧೬ನೇ ಶತಮಾನದ ನಂತರ ಜಗತ್ತಿನ ಬಹುತೇಕ ರಾಷ್ಟ್ರಗಳು ಪಶ್ಚಿಮದ ಕೆಲವೇ ರಾಷ್ಟ್ರಗಳ ಕೈಯಲ್ಲಿ ವಸಾಹತುಗಳಾಗಿ ಹೋದವು. ಇದು ಸಾಧ್ಯವಾದದ್ದು ಯಂತ್ರನಾಗರೀಕತೆ ಸೃಷ್ಟಿಸಿದ ಆಧುನಿಕ ಶಸ್ತ್ರಾಸ್ತ್ರಗಳು ಹಾಗೂ ಜ್ಞಾನವುಳ್ಳವರು ಮಾತ್ರ ಆಳಲು ಅರ್ಹರೆಂಬ ಹಿಂಸಾ ಪ್ರವೃತ್ತಿ ಮೂಲದ ಅಹಂನಿಂದ.

ಹೀಗೆ ಸಾಗಿದ ಪಶ್ಚಿಮದ ಅಟ್ಟಹಾಸ ಶತಮಾನಗಳ ಕಾಲ ಬಹುತೇಕ ರಾಷ್ಟ್ರಗಳ ಸಾಂಸ್ಕೃತಿಕ ಸತ್ವವನ್ನೇ ನಾಶಮಾಡಿತು. ಈ ವಸಾಹತು ರಾಷ್ಟ್ರಗಳ ಜನತೆ ಬೌದ್ಧಿಕವಾಗಿ ಎಂಥಾ ದಿವಾಳಿ ಸ್ಥಿತಿ ತಲುಪಿದವು ಎಂದರೆ ಅಭಿವೃದ್ಧಿ ಹೊಂದುವುದು ಎಂದರೆ ಪಶ್ಚಿಮ ರಾಷ್ಟ್ರಗಳಂತಾಗುವುದು ಎಂದು ಭ್ರಮಿಸಿದವು. ತಮ್ಮ ಶತಮಾನಗಳ ಚಿಂತನೆ, ಸಾಮಾಜಿಕ ನಿಲುವು, ಸಾಂಸ್ಕೃತಿಕ ವ್ಯಕ್ತಿತ್ವ, ಆತ್ಮವಿಶ್ವಾಸ ಎಲ್ಲವನ್ನೂ ಕಳೆದುಕೊಂಡು ಯೂರೋಪಿನ ನೆರಳಚ್ಚುಗಳಾಗಲು ತೊಡಗಿದುವು. ಯೂರೋಪಿನಂತಾಗುವುದು ಎಂದರೆ, ಮುಖ್ಯವಾಗಿ ಕೊಳ್ಳುಬಾಕ ಸಂಸ್ಕೃತಿಯ ಮಾನ್ಯ ಗ್ರಾಹಕನಾಗುವುದು ಹಾಗೂ ಗ್ರಾಮೀಣ ಸಂಸ್ಕೃತಿ ತನ್ನ ವ್ಯಕ್ತಿತ್ವ ಕಳೆದುಕೊಂಡು ಥಳುಕಿನ ನಾಗರಿಕ ಸಮಾಜವಾಗುವುದು ಎಂದಾಯಿತು. ಕೈಗಾರಿಕೀಕರಣ, ನಗರೀಕರಣ, ಆಧುನಿಕೀಕರಣ, ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣ ಹೀಗೆ ಇದರ ಬೆಳವಣಿಗೆ. ಈ ನಡುವೆ ಸ್ವಾತಂತ್ರ್ಯ, ಸಮಾನತೆ, ಧರ್ಮ ನಿರಪೇಕ್ಷತೆ ಮುಂತಾದ ಆಧುನಿಕ ಮೌಲ್ಯಗಳಿಗಾಗಿ ಜಗತ್ತಿನ ಅನೇಕ ರಾಷ್ಟ್ರಗಳು ಬಡಿದಾಡಿದ್ದುವು. ಅಂಥ ಘನ ಉದ್ದೇಶಗಳಿಗೆ ಇವತ್ತು ಜಾಗತೀಕರಣದ ಮಾಯೆಯಲ್ಲಿ ಯಾವ ಬೆಲೆಯೂ ಇಲ್ಲದಾಗಿದೆ. ಪಶ್ಚಿಮದ ಬಲಿಷ್ಠ ರಾಷ್ಟ್ರಗಳು ಅಭಿವೃದ್ಧಿ ಮಾದರಿಗಳಂತೆ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಮಾರ್ಗದರ್ಶಿಯಾದವು. ಇದು ನಿಸರ್ಗ ಸಂಪತ್ತಿನ ವಿವೇಚನೆ ರಹಿತವಾದ ಲೂಟಿಗೆ ಎಡೆಮಾಡಿತು. ಹಾಗೂ ಸ್ಥಳೀಯರು ನಿರಂತರವಾಗಿ ಬಲಿಯಾಗುತ್ತಾ ಹೋದರೂ ಅಭಿವೃದ್ಧಿ ಕುದುರೆಯ ಓಟದ ಉಬ್ಬರದಲ್ಲಿ ಈ ಜನರ ಮೂಕವೇದನೆ ಯಾರಿಗೂ ಕೇಳಲಿಲ್ಲ ಅಥವಾ ಯಾರೂ ಅದನ್ನು ಕೇಳಿಸಿಕೊಳ್ಳುವ ವ್ಯವಧಾನ ತೋರಲಿಲ್ಲ. ಹಾಗೂ ಇದು ಅಭಿವೃದ್ಧಿಗೆ ತೆರಬೇಕಾದ ಬೆಲೆ ಎಂದೇ ಭಾವಿಸುವಂತಾದುದು ಮನುಕುಲದ ದುರಂತ. ಅಣುಸ್ಥಾವರ, ಅಣುಬಾಂಬು ತಯಾರಿಕೆ ಹಾಗೂ ಸ್ಫೋಟ, ದೊಡ್ಡ ಅಣೆಕಟ್ಟುಗಳನ್ನು ಕಟ್ಟುವಾಗ ವಸತಿಹೀನರಾದವರ ಬಗ್ಗೆ ತೋರುವ ಅನಾದರ ಇದರ ಹಿಂದೆ ಅಂತರರಾಷ್ಟ್ರೀಯ ಜಾಲವೇ ಇದೆ.




ಜಾಗತೀಕರಣವನ್ನು ಕೈಬಿಟ್ಟು ನಾನು ಎಲ್ಲಿಗೋ ಬಂದುಬಿಟ್ಟೆ ಎಂದು ನಿಮಗನಿಸಿರಲಾರದು. ಇದೇ ಜಾಗತೀಕರಣ ನಿಜವಾಗಿ ಸಾಗಿಬಂದ ಮಾರ್ಗ. ಇದೊಂದು ನವ ಬಂಡವಾಳಶಾಹಿ ಆರ್ಥಿಕ-ಸಾಮಾಜಿಕ ವ್ಯವಸ್ಥೆ. ವಸಾಹತುಶಾಹಿ - ಬಂಡವಾಳಶಾಹಿಯಂತಹ ವ್ಯವಸ್ಥೆಗಳು ಆಯಾದೇಶಗಳ ಸರ್ಕಾರಗಳ ಅಧೀನವಿದ್ದು ಕೆಲಸ ಮಾಡುತ್ತಿದ್ದರೆ, ಇಂದಿನ ನವ ಬಂಡವಾಳಶಾಹಿ ವ್ಯವಸ್ಥೆಯು ತನ್ನ ಕೈಗೊಂಬೆ ಸಂಸ್ಥೆಗಳಾದ ವಿಶ್ವಬ್ಯಾಂಕ್, ವಿಶ್ವ ವ್ಯಾಪಾರ ಒಕ್ಕೂಟಗಳ ಮೂಲಕ ಅಭಿವೃದ್ಧಿಶೀಲ ದೇಶಗಳನ್ನು ನಿಯಂತ್ರಿಸುತ್ತಾ ಆ ದೇಶಗಳ ಸಾರ್ವಭೌಮತ್ವಕ್ಕೆ ಸವಾಲಾಗಿಬಿಟ್ಟಿದೆ. ಸಾಲದ ಬಲೆಯಲ್ಲಿ ಸಿಲುಕಿರುವ ಈ ರಾಷ್ಟ್ರಗಳು ಜಾಗತೀಕರಣದ ಹೆಸರಿನಲ್ಲಿ ಬಲಿಷ್ಠ ರಾಷ್ಟ್ರಗಳ ಆರ್ಥಿಕ ದಬ್ಬಾಳಿಕೆಯನ್ನು ಎದುರಿಸುವ ಶಕ್ತಿ, ಸ್ವಾಭಿಮಾನವನ್ನೇ ಕಳೆದುಕೊಂಡು ಶರಣಾಗಿವೆ.

ಜಾಗತೀಕರಣ ಪ್ರಕ್ರಿಯೆಯು ಮುಖ್ಯವಾಗಿ ಕೊಳ್ಳುಬಾಕ ಸಂಸ್ಕೃತಿಯ ಮುಂದುವರಿದ ಭಾಗವೇ ಆಗಿದೆ. ಮನುಷ್ಯನ ಸುಖಲೋಲುಪತೆಯನ್ನೇ ನೆಚ್ಚಿಕೊಂಡು ಬಂಡವಾಳಶಾಹಿ ವ್ಯವಸ್ಥೆ ಉತ್ಪಾದಿಸಿದ ವಸ್ತುಗಳಿಗೆ ಅಂತರರಾಷ್ಟ್ರೀಯ ಮಾರುಕಟ್ಟೆ ಜಾಲವನ್ನು ಕಟ್ಟಿಕೊಂಡದ್ದು ಜಾಗತೀಕರಣದ ಮೊದಲ ಯಶಸ್ಸು. ಈ ಕೊಳ್ಳುಬಾಕ ಸಂಸ್ಕೃತಿಗೆ ವಿಚಿತ್ರ ಮಾಂತ್ರಿಕ ಶಕ್ತಿ ಇದೆ. ಇದು ಕಂಡಕಂಡವರನ್ನೆಲ್ಲಾ ತನ್ನ ತೆಕ್ಕೆಗೆ ಸೆಳೆದುಕೊಂಡು ಅವರಲ್ಲಿ ನಿರಂತರ ಹಸಿವು ಮತ್ತು ನಿರಾಸೆಯನ್ನು ಸೃಷ್ಟಿಸುತ್ತಿದೆ. ಈ ತಣಿಯದ ಹಸಿವನ್ನು ನೀಗಿಕೊಳ್ಳಲು ಗ್ರಾಹಕನು ಕಂಡದ್ದನ್ನೆಲ್ಲಾ ಕೊಂಡು ತೃಪ್ತಿ ಹೊಂದಲು ಹೆಣಗುತ್ತಾ ಎಲ್ಲವನ್ನೂ ಕೊಳ್ಳಲಾರದೆ ನಿರಾಸೆಗೊಳ್ಳುತ್ತಲೇ ಇರುತ್ತಾನೆ. ಈ ಚಕ್ರದಲ್ಲಿ ಒಮ್ಮೆ ಬಿದ್ದವನಿಗೆ ಮುಕ್ತಿ ಎಂಬುದೇ ಇಲ್ಲ.

ಜಾಹಿರಾತಿನ ಮಾಯಾಲೋಕಕ್ಕೆ ಮರುಳಾದ ಮನಸ್ಸು ಇಂದ್ರಿಯ ಲೋಲುಪತೆಯನ್ನು ತಣಿಸುವುದರಲ್ಲಿ ಆತ್ಮನಾಶಗೊಂಡರೂ ಎಚ್ಚರಗೊಳ್ಳದು.

ಇನ್ನೊಂದು ಮುಖ್ಯ ವಿಷಯವೆಂದರೆ ಜಾಗತೀಕರಣ ವ್ಯವಸ್ಥೆಯಲ್ಲಿ ಎಲ್ಲವೂ ಸರಕೆ – ಮಾರಬೇಕಾದ ವಸ್ತುವೆ ! ಇಲ್ಲಿ ಸೇವೆ, ಮಾನವೀಯತೆ, ಸಾಮಾಜಿಕ ನ್ಯಾಯ ಮುಂತಾದ ಮಾತುಗಳಿಗೆ ಅರ್ಥವಿಲ್ಲ. ವ್ಯಾಪಾರವೇ ಮುಖ್ಯವಾದ್ದರಿಂದ ಇಲ್ಲಿ ಎಲ್ಲಕ್ಕೂ ಬೆಲೆ. Time is money – ಒಬ್ಬ ತನ್ನ ಸ್ವಲ್ಪ ಸಮಯವನ್ನು ಇನ್ನೊಬ್ಬನಿಗಾಗಿ ಬಳಸುವುದು ನೆರವು, ಅನುಕಂಪಕ್ಕಾಗಿ ಅಲ್ಲ – ಹಣಕ್ಕಾಗಿ. ಈ ಹೃದಯಹೀನ ವ್ಯವಸ್ಥೆಯಲ್ಲಿ ಎಲ್ಲ ಕಡೆ ಸ್ಪರ್ಧೆಯಿದೆ. ಆದರೆ ಸ್ಪರ್ಧೆ ಯಾವತ್ತೂ ಸಮಸ್ಪರ್ಧಿಗಳ ಮಧ್ಯೆ ನಡೆಯಬೇಕೇ ವಿನಃ ಅಸಮ ಸ್ಪರ್ಧಿಗಳ ಮಧ್ಯೆಯಲ್ಲ. ಆದರೆ ಈಗ ಜಾಗತೀಕರಣ ವ್ಯವಸ್ಥೆಯಲ್ಲಿ ನಡೆಯುತ್ತಿರುವ ಅಸಮ ಸ್ಪರ್ಧಿಗಳ ನಡುವಿನ ಸ್ಪರ್ಧೆಯು ಉಳ್ಳವರನ್ನು ಮತ್ತಷ್ಟು ಉಳ್ಳವರನ್ನಾಗಿಸುತ್ತದೆ. ಸಂಪತ್ತು ಕೆಲವೇ ಶಕ್ತ ರಾಷ್ಟ್ರಗಳ ಶಕ್ತ ಜನರಲ್ಲಿ ಸಂಗ್ರಹಗೊಂಡು ಅಸಮಾನತೆ ಮತ್ತಷ್ಟು ಹೆಚ್ಚುತ್ತದೆ.

ಜಾಗತೀಕರಣವು ಎಂಥ ನೈತಿಕ ಬಿಕ್ಕಟ್ಟನ್ನು ಸೃಷ್ಟಿಸಿದೆ ನೋಡಿ : ಇಂದು sex ಕೇವಲ trade (ವಾಣಿಜ್ಯ) ಮಾತ್ರ. ಮಾದಕ ವಸ್ತು ಸಾಗಣೆ, ಸೇವನೆ ಅಪರಾಧವೇ ವಿನಃ ಅನೈತಿಕವಲ್ಲ. ಅಂದರೆ ಮನುಷ್ಯನ ನೈತಿಕ ಪ್ರಜ್ಞೆಯನ್ನೇ ಇದು ನಾಶಮಾಡಿಬಿಟ್ಟಿದೆ. ಜಗತ್ತಿನ ತುಂಬಾ ಹೆಚ್ಚುತ್ತಿರುವ ಹಿಂಸೆ ಮತ್ತು ಕ್ರಿಮಿನಲ್ ಚಟುವಟಿಕೆಗಳಿಗೆ ನೈತಿಕ ಪ್ರಜ್ಞೆಯ ದಿವಾಳಿತನವೇ ಕಾರಣವಾಗಿಬಿಟ್ಟಿದೆ.

ಜಾಗತೀಕರಣದ ಜಾಲ ವಿಸ್ತರಿಸಿದಂತೆ ವಿಶಾಲ ಜಗತ್ತಿನ ವೈವಿಧ್ಯಮಯ ಜನಾಂಗ, ಸಮಾಜಗಳೆಲ್ಲಾ ತಮ್ಮ ಅನನ್ಯವಾದ ಸಂಸ್ಕೃತಿಯನ್ನು ರಕ್ಷಿಸಿಕೊಂಡು ಭೋಗವಾದಿ-ಸರಕು ಸಂಸ್ಕೃತಿಯನ್ನು ಎದುರಿಸಲಾರದೆ ತಾವೂ ಪಶ್ಚಿಮದಂತಾಗಲು ಹಪಹಪಿಸುವಂತಾಗಿದೆ. ಇದು ಎಂಥಾ ಸಾಂಸ್ಕೃತಿಕ ದುರಂತವಾಗಬಹುದೆಂದರೆ, ಇತ್ತೀಚಿನ ಸಮೀಕ್ಷೆಯೊಂದು ಹೇಳುವಂತೆ ಮುಂದಿನ ೧೦೦ ವರ್ಷಗಳಲ್ಲಿ ಜಗತ್ತಿನ ೯೦% ದೇಸಿ ಭಾಷೆಗಳು ನಾಶವಾಗುತ್ತವೆ. ಭಾಷೆ ನಾಶವಾಗುವ ಮೊದಲು ಆ ಭಾಷೆ ಹುಟ್ಟಿ ವಿಕಾಸಗೊಂಡ ಅನನ್ಯ ಸಂಸ್ಕೃತಿಯೊಂದು ಪಶ್ಚಿಮದ ಏಕರೂಪೀ ಸಂಸ್ಕೃತಿಯ ಬುಲ್ಡೋಜರ್‌ಗೆ ಸಿಕ್ಕಿ ನಿರ್ನಾಮಗೊಂಡಿರುತ್ತದೆ. ಮನುಷ್ಯ ತನ್ನ ಕನಸು-ಕಲ್ಪನೆ-ಸೃಜನಶೀಲತೆಯಿಂದ ನೂರಾರು ವರ್ಷಾವಧಿಯಲ್ಲಿ ಕಂಡುಕೊಂಡಿದ್ದ ಕಸುಬುಗಳೆಲ್ಲಾ ಯಂತ್ರ ನಾಗರಿಕತೆಯ ಎದುರು ಒಂದೊಂದೇ ಮಣ್ಣಾಗುತ್ತಿರುವುದು ಈಗ ನಮ್ಮ ಕಣ್ಣ ಮುಂದಿದೆ. ಈ ದುರಂತ ಯಾತ್ರೆ ಎಲ್ಲಿಗೆ ನಮ್ಮನ್ನೆಲ್ಲ ಮುಟ್ಟಿಸುವುದೋ ಹೇಳಲಾಗುತ್ತಿಲ್ಲ.

ಆದರೆ, ಒಂದು ಮಾತು ನಿಜ: ಜಾಗತೀಕರಣದ ಬಗ್ಗೆ ಎಷ್ಟೋ ಪರ-ವಿರೋಧವಾದ ಸಮರ್ಥನೆಗಳು ಬಂದಿವೆ. ಆದರೆ ಕೃಷಿ, ಕೈಗಾರಿಕೆ, ಸಣ್ಣ ರಾಷ್ಟ್ರಗಳ ಆರ್ಥಿಕ ವ್ಯವಸ್ಥೆ, ಪರಿಸರ ಮುಂತಾದ ಕ್ಷೇತ್ರಗಳ ಮೇಲೆ ಇದು ಉಂಟು ಮಾಡಿರುವ ಪರಿಣಾಮ ಎಂತಹುದು ಎಂಬ ಬಗ್ಗೆ ಖಚಿತವಾಗಿ ಹೇಳಲಾಗುತ್ತಿಲ್ಲ, ನಿಜ. ಕರ್ನಾಟಕ, ಆಂಧ್ರ, ಮಹಾರಾಷ್ಟ್ರ ಮುಂತಾದ ರಾಜ್ಯಗಳ ರೈತರ ಆತ್ಮಹತ್ಯೆಗಳ ಹಿಂದೆ ಜಾಗತೀಕರಣದ ಕಾಣದ ಕೈವಾಡವಿಲ್ಲ ಎನ್ನಲಾಗದು. ಸಣ್ಣ ರೈತ ಆತ್ಮಹತ್ಯೆಯ ಮಾರ್ಗ ಹಿಡಿದಿದ್ದರೆ ದೊಡ್ಡ ರೈತ ದಿವಾಳಿಯಾಗುತ್ತಿದ್ದಾನೆ. ಯಾವುದೇ ಕೃಷಿ ಉತ್ಪನ್ನಕ್ಕೆ ನ್ಯಾಯವಾದ ಬೆಲೆ ಸಿಕ್ಕುತ್ತಿಲ್ಲ. ಅದೇ ವೇಳೆ ಎಲ್ಲಾ ಕೈಗಾರಿಕೋತ್ಪನ್ನಗಳ ಬೆಲೆ ಏರುಮುಖವಾಗಿರುವ ವಿಪರ್ಯಾಸ ನಮ್ಮ ಮುಂದಿದೆ. ಸಾವಿರಾರು ಸಣ್ಣ ಕೈಗಾರಿಕೆಗಳು ಬಾಗಿಲು ಮುಚ್ಚಿಕೊಂಡು ಕಾರ್ಮಿಕರು ಬೀದಿಪಾಲಾಗಿದ್ದಾರೆ. ಖಾಸಗೀಕರಣದ ಕಬಂಧ ಬಾಹುಗಳು ಶಿಕ್ಷಣ, ಸಾರಿಗೆ, ಆರೋಗ್ಯ, ಕಲ್ಯಾಣ ಯೋಜನೆಗಳನ್ನೆಲ್ಲಾ ದಬ್ಬಿ ಸಾಮಾನ್ಯರ ಬದುಕು ದುರ್ಭರವಾಗಿರುವುದು ಕಣ್ಣಿಗೆ ರಾಚುತ್ತದೆ. ಕಲ್ಪವೃಕ್ಷ ಇಂದು ಫಲ ನೀಡದೆ 'ನೀರಾ' ಆಗುತ್ತಿರುವುದು ನಮ್ಮ ಸೋತ ವ್ಯವಸ್ಥೆ ವಿಕೃತಗೊಳ್ಳುತ್ತಿರುವುದರ ಸಂಕೇತ ಮಾತ್ರವಾಗಿದೆ - ಜಾಗತೀಕರಣವೆಂಬ ಮಾಯೆಯಲ್ಲಿ. 'Globalise or perish' ಎಂದರು ಎಷ್ಟೋ ಮಹಾನುಭಾವರು ! ಜಾಗತೀಕರಣಗೊಂಡು ವಿನಾಶಕ್ಕೆ ಆಹ್ವಾನ ಕೊಟ್ಟ ದುರಂತ ನಮ್ಮದು. ಬಹುಶಃ ಇದನ್ನು ಸೋಲಿಸಬಹುದಾದ ಏಕಮಾತ್ರ ಉಪಾಯವೆಂದರೆ, ಮನುಷ್ಯ ತನ್ನ ನಾಲಿಗೆ ಮೇಲೆ ಹತೋಟಿ ಸಾಧಿಸುವುದಾಗಿರಬಹುದು !


ಎಂ. ಜಿ. ಚಂದ್ರಶೇಖರಯ್ಯ
ಅಧ್ಯಾಪಕರು, ಶ್ರೀ ಕೊಂಗಾಡಿಯಪ್ಪ ಕಾಲೇಜು
ದೊಡ್ಡಬಳ್ಳಾಪುರ - ೫೬೧ ೨೦೩

# ಯುದ್ಧ ಭೀತಿ - ರಾಜಕೀಯ ಚದುರಂಗ

ನಾ. ದಿವಾಕರ್

ಡಿಸೆಂಬರ್ ೧೩ರಿಂದು ಉಗ್ರಗಾಮಿಗಳು, ಈಗ ಇವರನ್ನು ಭಯೋತ್ಪಾದಕರೆನ್ನಲಾಗುತ್ತಿದೆ, ಸಂಸತ್ ಭವನದ ಮೇಲೆ ದಾಳಿ ನಡೆಸಿದ ನಂತರ, ಭಾರತ ಸರ್ಕಾರ ಭಯೋತ್ಪಾದನೆಯನ್ನು ನಿಗ್ರಹಿಸುವಲ್ಲಿ ಕಾರ್ಯನಿರತವಾಗಿದ್ದು, ಪಾಕಿಸ್ತಾನದ ಮೇಲೆ ಯಾವುದೇ ಕ್ಷಣದಲ್ಲಿ ಯುದ್ಧ ಸಾರುವ ಸಾಧ್ಯತೆಗಳಿವೆ. ಈ ಒಂದು ತಿಂಗಳ ಅವಧಿಯಲ್ಲಿ ಭಾರತ-ಪಾಕಿಸ್ತಾನದ ನಡುವೆ ರಾಜತಾಂತ್ರಿಕ ಸಂಬಂಧಗಳು ಸಂಪೂರ್ಣವಾಗಿ ಹದಗೆಟ್ಟಿದ್ದು ಎರಡು ದೇಶಗಳ ನಾಯಕರುಗಳು ತಮ್ಮ ಸ್ವಾರ್ಥ ರಾಜಕಾರಣದ ಸಲುವಾಗಿ, ಯುದ್ಧದ ತಯಾರಿಯಲ್ಲಿ ತೊಡಗಿದ್ದಾರೆ. ಕಳೆದ ೩೦ ವರ್ಷಗಳಲ್ಲಿ ಭಾರತ-ಪಾಕ್ ಸಂಬಂಧಗಳು ಈ ರೀತಿ ಹದಗೆಟ್ಟಿರಲಿಲ್ಲ. ಎರಡೂ ದೇಶಗಳ ರಿಮೋಟ್ ಕಂಟ್ರೋಲ್ ಅಂಕಲ್ ಬುಷ್‌ರವರ ಕೈಯಲ್ಲಿರುವುದರಿಂದ ಯುದ್ಧದ ಕಾರ್ಮೋಡಗಳು ಇನ್ನೂ ಬಾಂಬುಗಳ ಮಳೆ ಸುರಿಸದೆ ಹಾಗೆಯೇ ಕವಿದಿವೆ. ಗಡಿಯಲ್ಲಿ ನೆಲೆಸಿರುವ ಎರಡೂ ದೇಶಗಳ ಜನತೆ ಭಯ ಭೀತಿಯಿಂದ ದಿನ ಕಳೆಯುತ್ತಿದ್ದಾರೆ. ಇದಾವುದರ ಪರಿಜ್ಞಾನವೂ ಇಲ್ಲದ ರಾಜಕೀಯ ನಾಯಕರುಗಳು ಯುದ್ಧಭೀತಿಯನ್ನು ಇನ್ನೂ ಉದ್ವಿಗ್ನಗೊಳಿಸುವುದರಲ್ಲಿ ತೊಡಗಿದ್ದಾರೆ.

ಪ್ರಸಾರ-ಸುದ್ದಿ ಮಾಧ್ಯಮಗಳಲ್ಲಿ ಬಹುತೇಕವಾಗಿ ಪ್ರಚೋದನಕಾರಿ ಸುದ್ದಿಗಳು ಬಿತ್ತರವಾಗುತ್ತಿದ್ದು, ಸಾಮ್ರಾಜ್ಯಶಾಹಿಗಳ ಹಿಡಿತದಲ್ಲಿರುವ ಮಾಧ್ಯಮಗಳು ವಾಸ್ತವವನ್ನು ಮರೆಮಾಚಿ ಜನತೆಯನ್ನು ಮರುಳು ಮಾಡುತ್ತಿವೆ. ಭಾರತ-ಪಾಕ್ ಸಂಬಂಧ ಎಂದರೆ ಕೇವಲ ಸರ್ಕಾರಗಳ ನಡುವಿನ ಸಂಬಂಧಗಳೆಂದು ಮಾತ್ರ ಪರಿಗಣಿಸಲಾಗುತ್ತದೆ. ಎರಡೂ ದೇಶಗಳ ಜನತೆಯ ನಡುವೆ ಇರುವ ಭಾವನಾತ್ಮಕ ಸಂಬಂಧಗಳು, ಚಾರಿತ್ರಿಕ ಕೊಂಡಿಗಳನ್ನು ಅಲಕ್ಷಿಸಲಾಗುತ್ತಿದೆ. ೧೯೪೭ರಲ್ಲಿ ದೇಶದ ವಿಭಜನೆಯ ನಂತರದಲ್ಲಿ ಇದ್ದ ಈ ಪರಿಸ್ಥಿತಿ ಇಂದಿಗೂ ಕಂಡುಬರುತ್ತಿರುವುದು ಕಟು ಸತ್ಯವಾದರೂ, ಜನರು ಆ ಕಹಿ ಘಟನೆಯನ್ನು ಮರೆತು ಸೌಹಾರ್ದತೆಯಿಂದ ಬಾಳಲು ಸತತ ಯತ್ನಿಸುತ್ತಿದ್ದಾರೆ. ಇನ್ನೊಂದೆಡೆ ನಮ್ಮ ರಾಜಕೀಯ ನಾಯಕರುಗಳು ಅದೇ ಘಟನೆಗಳ ಪುನಾರಾವರ್ತನೆಗೆ ಸಂಚು ನಡೆಸುತ್ತಿದ್ದಾರೆ. ಸಾಮಾನ್ಯ ಜನತೆಯ ಭಾವನೆಗಳನ್ನು ಅರ್ಥಮಾಡಿಕೊಳ್ಳುವ ಸೌಜನ್ಯವಿಲ್ಲದ ಜನನಾಯಕರು ಸೌಹಾರ್ದಯುತ ಭಾವನೆಗಳನ್ನು ಕೆರಳಿಸಿ, ಅದಕ್ಕೆ ಧಾರ್ಮಿಕ ಹಾಗೂ ಮತೀಯ ಲೇಪನ ನೀಡಿ, ಪ್ರೀತಿ ವಾತ್ಸಲ್ಯಗಳ ಕಡಲಲ್ಲಿ ಪಾಷಾಣ ಬೆರೆಸಲೆತ್ನಿಸುತ್ತಿದ್ದಾರೆ. ದೇಶ ಭಕ್ತಿ, ರಾಷ್ಟ್ರೀಯವಾದ, ಧರ್ಮ ಹಾಗೂ ಭಾಷೆಗಳ ಹೆಸರಿನಲ್ಲಿ ಜನರ ಮನವನ್ನು ಕಲುಷಿತಗೊಳಿಸಿ ತಮ್ಮ ಸ್ವಾರ್ಥ ಸಾಧನೆಗೆ ಯತ್ನಿಸುತ್ತಿರುವುದು ವಿಷಾದನೀಯ.

ಈ ನಿಟ್ಟಿನಲ್ಲಿ ನೋಡಿದಾಗ ಕೇಂದ್ರ ಸರ್ಕಾರದ ಹಲವಾರು ನೀತಿಗಳು ಪ್ರಶ್ನಾರ್ಹವಾಗಿವೆ. ಇತಿಹಾಸವನ್ನು ಅವಲೋಕಿಸಿ, ಅದರಲ್ಲಿನ ನ್ಯೂನತೆಗಳನ್ನು ಸರಿಪಡಿಸಿ, ಭವಿಷ್ಯದೆಡೆಗೆ ನಡೆಯುವುದು ನಾಗರಿಕತೆ ಎನಿಸಿಕೊಳ್ಳುತ್ತದೆ. ಒಂದು ಆಂಗ್ಲ ನಾಣ್ಣುಡಿಯಂತೆ "ಇತಿಹಾಸದಿಂದ ಪಾಠ ಕಲಿಯದಿದ್ದವರು ಅದನ್ನೆ ಪುನಃ ಮರುಕಳಿಸುತ್ತಾರೆ". ಇಂದು ನಮ್ಮ ದೇಶದಲ್ಲಿ ನಡೆಯುತ್ತಿರುವುದು ಅದೇ ಆಗಿದೆ. ೧೯೯೮ರಲ್ಲಿ ಭಾ. ಜ. ಪ. ಅಧಿಕಾರ ಗ್ರಹಣ ಮಾಡಿದ ಕ್ಷಣದಲ್ಲಿ ದೇಶಕ್ಕೆ ಹಿಡಿದ ಗ್ರಹಣ ಇಂದಿಗೂ ಮುಂದುವರಿದಿದೆ. ಭಾ. ಜ. ಪ. ದ ಆಳ್ವಿಕೆಯಲ್ಲಿ ಇತಿಹಾಸವು ಭವಿಷ್ಯದ ಬುನಾದಿಯಾಗುವ ಬದಲು ದ್ವೇಷ, ಅಸೂಯೆ, ಧರ್ಮಾಂಧತೆ, ಹಿಂಸೆಗಳನ್ನು ಹರಡುವ ಅಸ್ತ್ರವಾಗಿದೆ. ಪರಿಣಾಮವಾಗಿ ಸಾಂಸ್ಕೃತಿಕ ಐಕ್ಯತೆಯ ಬದಲು ವಿಘಟನೆ ಕಂಡುಬರುತ್ತಿದೆ. ಪುರಾಣಗಳಿಗೆ ಐತಿಹಾಸಿಕ ಲೇಪನ ನೀಡುವುದರ ಮೂಲಕ, ನೈಜ ಇತಿಹಾಸವನ್ನು ರಾಜಕೀಯ ಅನುಕೂಲಗಳಿಗೆ ತಕ್ಕಂತೆ ತಿರುಚಲಾಗುತ್ತಿದೆ. ಪ್ರಜ್ಞಾಪೂರ್ವಕವಾಗಿ ಈ ನೀತಿ ಅನುಸರಿಸುತ್ತಿರುವ, ಸಂಘಪರಿವಾರದ ಕೈಗೊಂಬೆಯಾಗಿರುವ, ಭಾ. ಜ. ಪ. ಜನರನ್ನು ಹಿಂದೂ ರಾಷ್ಟ್ರದ ಕಲ್ಪನೆಯ ಭ್ರಾಂತಿಗೊಳಪಡಿಸುತ್ತಿದೆ. ಈ ಪರಿಕಲ್ಪನೆಯ ಹಿಂದೆ ಅಡಗಿರುವ ಸಂಚು ಮುಂದೆ ದೇಶದ ಉಳಿವಿಗೇ ಸಂಚಕಾರ ತರುವ ಸೂಚನೆಗಳು ಸ್ಪಷ್ಟವಾಗಿ ಕಂಡುಬರುತ್ತಿವೆ.

ಭಾರತದಲ್ಲಿ ಈ ಪರಿಸ್ಥಿತಿಯಾದರೆ, ಪಾಕಿಸ್ತಾನದಲ್ಲಿ ಭಿನ್ನವಾದ ಸನ್ನಿವೇಶವೇನೂ ಕಂಡುಬರುವುದಿಲ್ಲ. ಕಾಶ್ಮೀರದಲ್ಲಿ ಉಗ್ರಗಾಮಿಗಳಿಗೆ ಪಾಕಿಸ್ತಾನ ಸರ್ಕಾರವು ಪ್ರತ್ಯಕ್ಷವಾಗಿಯೇ ಬೆಂಬಲ ನೀಡುತ್ತಿರುವುದು ಈಗ ರಹಸ್ಯವಾಗೇನೂ ಉಳಿದಿಲ್ಲ. ಜೈಷ್-ಎ-ಮಹಮ್ಮದ್, ಲಷ್ಕರ್-ಎ-ತೊಯಿಬಾ ಮುಂತಾದ ಸಂಘಟನೆಗಳಿಗೆ ಆಶ್ರಯ ನೀಡಿರುವುದೇ ಅಲ್ಲದೆ, ಅವುಗಳ ಬೆಳವಣಿಗೆಗೆ ಪ್ರೋತ್ಸಾಹ ನೀಡಿದ ಪಾಕ್ ಸರ್ಕಾರ ಇಂದು ಅದೇ ಸಂಘಟನೆಗಳನ್ನು ನಿಷೇಧಿಸುವ ನಾಟಕವಾಡುತ್ತಿದೆ. ಬಹುಶಃ ಭಾರತದ ಸಂಸತ್ ಭವನದ ಮೇಲೆ ಆಕ್ರಮಣ ನಡೆದಂತೆ ಪಾಕಿಸ್ತಾನದಲ್ಲೂ ನಡೆಯಬಹುದೆಂಬ ಭೀತಿ ಮುಶ್ರಫ್ ಅವರನ್ನು ಕಾಡಿರಬಹುದು. ಇನ್ನೊಂದೆಡೆ ಅಮೆರಿಕ ಹಾಗೂ ಬ್ರಿಟನ್‌ಗಳ ಒತ್ತಡವು ಈ ಕ್ರಮಕ್ಕೆ ಕಾರಣವಿರಬಹುದು. ಯಾವುದೇ ಪಾಕಿಸ್ತಾನದ ಸರ್ಕಾರಕ್ಕೆ ಭಾರತ ವಿರೋಧಿ ಭಾವನೆಗಳಿಲ್ಲದೆ, ಕಾಶ್ಮೀರ ಸಮಸ್ಯೆ ಇಲ್ಲದೆ ಉಳಿಗಾಲವಿರುವುದಿಲ್ಲ. ಪ್ರಜಾತಾಂತ್ರಿಕ ಸರ್ಕಾರವಾಗಲಿ ಅಥವಾ ಮಿಲಿಟರಿ ಸರ್ಕಾರವಾಗಲಿ ಪಾಕಿಸ್ತಾನದ ಆಳುವ ವರ್ಗಗಳು ಒಂದು ರೀತಿಯಲ್ಲಿ ಭಾರತದೊಂದಿಗಿನ ಸಂಬಂಧವನ್ನೇ ಅವಲಂಬಿಸಿರುತ್ತವೆ. ಕಾಶ್ಮೀರದ ಜನತೆಯ ಬಗ್ಗೆ ಯಾವುದೇ ಸಹಾನುಭೂತಿ ಇಲ್ಲದಿದ್ದರೂ, ಕಾಶ್ಮೀರದ ಹೆಸರಿನಲ್ಲಿ ಜನರ ಧಾರ್ಮಿಕ ಭಾವನೆಗಳನ್ನು ಕೆರಳಿಸಿ ಪಾಕ್ ಸರ್ಕಾರಗಳು ಉಳಿದುಕೊಳ್ಳುತ್ತವೆ. ಶೇಕಡಾ ೫೦ಕ್ಕಿಂತಲೂ ಹೆಚ್ಚು ರಕ್ಷಣಾ ವೆಚ್ಚಗಳಿಗೆ ಖರ್ಚುಮಾಡುವ ಪಾಕಿಸ್ತಾನ ಭಾರಿ ಸಾಲಗಾರ ದೇಶವಾಗಿದ್ದು ಜನರಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸುವಲ್ಲಿ ವಿಫಲಗೊಂಡಿದೆ. ಈ ವೈಫಲ್ಯಗಳನ್ನು ಮುಚ್ಚಿಡಲು, ಜನರ ಆಕ್ರೋಶದಿಂದ ತಪ್ಪಿಸಿಕೊಳ್ಳಲು, ಅಲ್ಲಿನ ಆಳುವ ವರ್ಗಗಳಿಗೆ ಕಾಶ್ಮೀರ ಒಂದು ರಕ್ಷಣಾ ಗೋಡೆಯಂತಾಗಿದೆ.

ಇತ್ತ ನಮ್ಮ ದೇಶದಲ್ಲಿಯೂ ಸಹ ಕಾಶ್ಮೀರ ಸಮಸ್ಯೆ ಗಂಭೀರ ಸ್ವರೂಪ ಪಡೆಯುತ್ತಿದ್ದು, ಒಂದು ಕಾಲದಲ್ಲಿ ಕಾಶ್ಮೀರ ಜನತೆಯ ಅನನ್ಯತೆಗಾಗಿ ಆರಂಭಗೊಂಡಿದ್ದ ಹೋರಾಟವು ಇಂದು ಉಗ್ರಗಾಮಿಗಳ ಕೈಸೇರಿ, ಹಿಂಸಾತ್ಮಕ ರೂಪ ತಾಳಿ ತನ್ನ ಮುಖ್ಯ ಧ್ಯೇಯವನ್ನೇ ಕಳೆದುಕೊಂಡಿದೆ. ಪಾಕ್ ಬೆಂಬಲಿತ ಉಗ್ರಗಾಮಿಗಳು ಇಂದು ಕಾಶ್ಮೀರದಲ್ಲಿ ರಕ್ತದೋಕುಳಿ ಆಡುತ್ತಿದ್ದರೆ, ಇವರನ್ನು ನಿಯಂತ್ರಿಸುವ ನೆಪದಲ್ಲಿ ಸರ್ಕಾರಿ ಪಡೆಗಳು ಮುಗ್ಧ ಜನತೆಯನ್ನು ಹಿಂಸಿಸುತ್ತಿವೆ. ಅಂದು ಅನನ್ಯತೆಯ ಸಮಸ್ಯೆಯಾಗಿದ್ದ ಕಾಶ್ಮೀರ ಇಂದು ಮುಸ್ಲಿಂ ಸಮಸ್ಯೆಯಾಗಿ ಪರಿವರ್ತಿತಗೊಂಡಿದೆ. ಈ ಬೆಳವಣಿಗೆಗೆ ಸಂಘಪರಿವಾರದವರ ಪ್ರಚಾರವೂ ಕಾರಣವೆಂದು ಹೇಳಬಹುದು. ರಾಜಕಾರಣಿಗಳ, ಮತಾಂಧರ ಹುನ್ನಾರಗಳಿಂದ ಕಾಶ್ಮೀರದ ಲಕ್ಷಾಂತರ ಹಿಂದೂಗಳು ಕಳೆದ ಒಂದು ದಶಕದಿಂದ ತಮ್ಮ ತಾಯ್ನಾಡನ್ನು ತೊರೆದು ನಿರಾಶ್ರಿತರಂತೆ ಬಾಳುತ್ತಿರುವುದು ಒಪ್ಪಲೇಬೇಕಾದ ಕಟು ಸತ್ಯ. ಅಯೋಧ್ಯೆ ಗಲಭೆಗಳ ಸಮಯದಲ್ಲಿಯೂ ಕೋಮು ಸೌಹಾರ್ದತೆ ಕಾಪಾಡಿಕೊಂಡು ಬಂದಿದ್ದ ಕಾಶ್ಮೀರ ಜನತೆ ಇಂದು ವಿಭಿನ್ನ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಹಿಂಸೆಯ ಮೂಲಕವೇ ತಮ್ಮ ಧ್ಯೇಯ ಸಾಧಿಸಲೆತ್ನಿಸುವ ಉಗ್ರಗಾಮಿಗಳಿಗೆ ಯಾವುದೇ ಧರ್ಮ ಅಡ್ಡಿಯಾಗುವುದಿಲ್ಲ. ಕಾಶ್ಮೀರದಲ್ಲಿ ೧೯೮೯ರಿಂದೀಚೆಗೆ ಉಗ್ರಗಾಮಿಗಳ ಗುಂಡೇಟಿಗೆ ಬಲಿಯಾಗಿರುವ ೪೦,೦೦೦ (ನಲವತ್ತು ಸಾವಿರ) ಕ್ಕೂ ಹೆಚ್ಚು ಜನರಲ್ಲಿ ಬಹು ಪಾಲು ಮುಸ್ಲಿಮರೇ ಇರುವುದು ಇದಕ್ಕೆ ನಿದರ್ಶನ. ವಲಸೆ ಬಂದಿರುವ ಹಿಂದೂ ಜನಾಂಗವು ನಿರಾಶ್ರಿತರಂತಿದ್ದರೂ ಸುರಕ್ಷಿತವಾಗಿದ್ದಾರೆ. ಆದರೆ ಅಲ್ಲಿಯೇ ನೆಲೆಸಿರುವ ಹಿಂದೂಗಳು ಉಗ್ರಗಾಮಿಗಳ ಗುಂಡಿಗೆ ಬಲಿಯಾಗುತ್ತಿದ್ದಾರೆ.



ಕಾಶ್ಮೀರ ಸಮಸ್ಯೆ ಗಂಭೀರವಾಗುತ್ತಿದ್ದಂತೆಲ್ಲಾ ಕ್ರಮೇಣ ವಾಗಿ ಚಳುವಳಿಯು ಉದಾರವಾದಿಗಳ ಹಿಡಿತ ತಪ್ಪಿ ಮೂಲಭೂತವಾದಿಗಳ ಕೈಸೇರಿದ್ದು ಕಾಶ್ಮೀರದ ಅತಿ ದೊಡ್ಡ ದುರಂತವೆಂದು ಹೇಳಬಹುದು. ಅದೇ ವೇಳೆಯಲ್ಲಿ ದೇಶದೆಲ್ಲೆಡೆ ಸಂಘಪರಿವಾರದ ಅಲ್ಪಸಂಖ್ಯಾತ ವಿರೋಧಿ ಮತಾಂಧತೆಯು ಉಲ್ಬಣಿಸಿದ್ದರಿಂದ ಕಾಶ್ಮೀರದಲ್ಲಿ ಮೂಲ ಭೂತವಾದಿಗಳು ಭದ್ರವಾಗಿ ನೆಲೆಯೂರಲು ಸಾಧ್ಯ ವಾಯಿತು. ಅಯೋಧ್ಯೆ ಗಲಭೆಗಳ ನಂತರ ದೇಶದ ಅಲ್ಪಸಂಖ್ಯಾತರಲ್ಲಿ ಹೆಚ್ಚಾದ ಅತಂತ್ರ ಹಾಗೂ ಅಭದ್ರತೆಯ ಭಾವನೆಗಳು ಕಾಶ್ಮೀರದಲ್ಲಿನ ಪರಿಸ್ಥಿತಿಯನ್ನೇ ಬದಲಾಯಿ ಸಿದ್ದು ಈ ಬದಲಾದ ಸನ್ನಿವೇಶದಲ್ಲಿ ಕಾಶ್ಮೀರದಲ್ಲಿ ನೇರವಾಗಿ ತಲೆಹಾಕಲಾರಂಭಿಸಿದ ಪಾಕಿಸ್ತಾನ ಇಂದಿಗೂ ಅದೇ ನೀತಿಯನ್ನು ಅನುಸರಿಸುತ್ತಿದೆ. ಈ ಸನ್ನಿವೇಶವನ್ನು ತನ್ನ ಮತಾಂಧ ಯೋಜನೆಗಳಿಗೆ ಉಪಯೋಗಿಸಿಕೊಂಡ ಸಂಘಪರಿವಾರವು ಜಮ್ಮು ಮತ್ತು ಲಡಾಕ್ ಪ್ರದೇಶವನ್ನು ಕಾಶ್ಮೀರದಿಂದ ಬೇರ್ಪಡಿಸಲು ಆಗ್ರಹಿಸಿ ಕಾಶ್ಮೀರದಲ್ಲೂ ಹಿಂದೂ-ಮುಸ್ಲಿಮರ ನಡುವೆ ಕಂದಕಗಳನ್ನು ನಿರ್ಮಿಸುವಲ್ಲಿ ಯಶಸ್ವಿಯಾಯಿತು. ಭಾರತ-ಪಾಕಿಸ್ತಾನಗಳಿಗೆ ಕಾಶ್ಮೀರ ಕೇವಲ ಒಂದು ಸ್ಥಿರಾಸ್ತಿಯಾಗಿದೆ (Real Estate). ಹಾಗಾಗಿಯೇ ಇಂದು ಕೇಂದ್ರಸರ್ಕಾರ ಭಯೋತ್ಪಾದನೆ ಯನ್ನು ಕಾಶ್ಮೀರದೊಡನೆ ಮತ್ತು ಮೂಲಭೂತವಾದವನ್ನು ಅಲ್ಪಸಂಖ್ಯಾತರೊಡನೆ ಮಾತ್ರ ಸಮೀಕರಿಸುತ್ತಿದೆ. S I M I ಯನ್ನು ನಿಷೇಧಿಸುವ ತೀರ್ಮಾನ ಕೈಗೊಂಡ ಕೇಂದ್ರ ಸರ್ಕಾರ ಸಂಘಪರಿವಾರದ ಕಾರ್ಯಗಳನ್ನು ನಿಯಂತ್ರಿಸ ದಿರುವುದು ಈ ಮನೋಭಾವದ ಪ್ರತೀಕವಾಗಿದೆ. ಸಂಘಪರಿವಾರದ ಹಿಂದೂ ರಾಷ್ಟ್ರ ನಿರ್ಮಾಣದ ಫ್ಯಾಸಿಸ್ಟ್ ಯೋಜನೆಗಳಿಗೆ ಭದ್ರ ಬುನಾದಿ ಹಾಕುತ್ತಿರುವ ಸರ್ಕಾರವು ಭಯೋತ್ಪಾದನೆಯನ್ನು ನಿಯಂತ್ರಿಸುವ ನೆಪದಲ್ಲಿ ಕರಾಳ ಶಾಸನಗಳನ್ನು ಜಾರಿಗೆ ತಂದು ಅಲ್ಪಸಂಖ್ಯಾತರಲ್ಲಿ ಹಾಗೂ ಸರ್ಕಾರ ವಿರೋಧಿ ಹೋರಾಟಗಳ ಸಂಘಟನೆಗಳಲ್ಲಿ ಇನ್ನೂ ಹೆಚ್ಚು ಭೀತಿ ಮೂಡಿಸಿದೆ. ಈ ಹಿನ್ನೆಲೆಯಲ್ಲಿ ಸಂಸತ್ ಭವನದ ಮೇಲೆ ಉಗ್ರರು ದಾಳಿ ನಡೆಸಿರುವುದು ವಾಜಪೇಯಿ ಸರ್ಕಾರಕ್ಕೆ ವರದಾನದಂತಿದೆ. ಪಾಕಿಸ್ತಾನ ನೆಲೆಯ ಉಗ್ರಗಾಮಿಗಳ ಈ ಆಕ್ರಮಣದಿಂದ ಎರಡೂ ದೇಶಗಳ ನಡುವೆ ಯುದ್ಧ ನಡೆಯುವ ಸಂಭವವೂ ದಿನೇದಿನೇ ಹೆಚ್ಚಾಗುತ್ತಿದೆ. ಗಡಿಯ ಇಕ್ಕೆಲಗಳಲ್ಲಿ ಈಗಾಗಲೇ ಸೇನೆಗಳು ಜಮಾಯಿಸಿದ್ದು ಗುಂಡಿನ ಕಾಳಗವೂ ಆರಂಭಗೊಂಡಿದೆ. ಆ ಪ್ರದೇಶದ ಜನ ಈಗಾಗಲೇ ವಲಸೆ ಹೋಗಲಾರಂಭಿಸಿ ದ್ದಾರೆ. ಇತ್ತ ಕೇಂದ್ರ ಸರ್ಕಾರವು ''ಭಯೋತ್ಪಾದನೆ ನಿಗ್ರಹ ಕಾಯಿದೆ''ಯನ್ನು (ಪೋಟೊ) ಸಂಸತ್ತಿನಲ್ಲಿ ಮಂಡಿಸುವ ಪ್ರಜಾತಾಂತ್ರಿಕ ಪ್ರಜ್ಞೆಯನ್ನು ತೋರದೆ ಸುಗ್ರೀವಾಜ್ಞೆಯ ಮೂಲಕ ಜಾರಿಗೊಳಿಸಿ ಅನೇಕ ರಾಜ್ಯಗಳಲ್ಲಿ ಶಂಕಿತ ವ್ಯಕ್ತಿಗಳನ್ನು ಬಂಧಿಸಲಾರಂಭಿಸಿದೆ. ನಂತರದ ಮೂರು ರಾಜ್ಯಗಳ ಚುನಾವಣೆಗಳಲ್ಲಿ ಭಾ. ಜ. ಪ. ತನ್ನ ಈ ಸಾಧನೆಯನ್ನೇ ಪ್ರಚಾರಕ್ಕಾಗಿ ಉಪಯೋಗಿಸಿಕೊಂಡಿತು.

ಇದಲ್ಲದೆ ಕೇಂದ್ರ ಸರ್ಕಾರಕ್ಕೆ ಹೇಳಿಕೊಳ್ಳುವಂತಹ ಸಾಧನೆಗಳೇನೂ ಇಲ್ಲ. ಜಾಗತೀಕರಣದ ದಾಳಿಯಿಂದ ಆರ್ಥಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಅರಾಜಕತೆ ತಾಂಡವವಾಡುತ್ತಿದೆ. ಕೇವಲ ಕಾರ್ಮಿಕರು ಹಾಗೂ ದುಡಿಯುವ ವರ್ಗಗಳು ಮಾತ್ರವಲ್ಲದೆ ಸಣ್ಣಪುಟ್ಟ ಉದ್ಯಮಿಗಳು, ವ್ಯಾಪಾರಿಗಳು ಕೇಂದ್ರದ ನೀತಿಗಳ ವಿರುದ್ಧ ಹೋರಾಡುತ್ತಿದ್ದಾರೆ. ಮುಂದಿನ ಬಜೆಟ್‌ನಲ್ಲಿ ಸರ್ಕಾರ ವಿಧಿಸಲಿರುವ ತೆರಿಗೆಗಳಿಂದ ಸಾಮಾನ್ಯ ಜನತೆ ಇನ್ನೂ ಹೆಚ್ಚು ಪರಿತಪಿಸಬೇಕಾಗುತ್ತದೆ. ಈಗಾಗಲೇ ಹಣದುಬ್ಬರ ಕಡಿಮೆಯಾಗಿ, ಹಣದುಬ್ಬರ ಇಳಿತ(ಡಿಫ್‌ಲೇಷನ್) ಪ್ರಕ್ರಿಯೆ ಆರಂಭವಾಗಿದ್ದು ಮುಂಬರುವ ದಿನಗಳಲ್ಲಿ ಲಕ್ಷಾಂತರ ಕಾರ್ಮಿಕರು ಹಾಗೂ ರೈತರು ಬೀದಿ ಪಾಲಾಗಿರುತ್ತಾರೆ. ಜನರ ಆಕ್ರೋಶದಿಂದ ತಪ್ಪಿಸಿಕೊಳ್ಳಲು ಈಗಿರುವ ಯುದ್ಧದ ವಾತಾವರಣ ಸಹಾಯ ಮಾಡುತ್ತದೆ. ರಾಜಕೀಯ ನಾಯಕರು ತಮ್ಮ ಸ್ವಾರ್ಥಸಾಧನೆಗೆ ಯುದ್ಧ ಸನ್ನಿವೇಶಗಳನ್ನು ವೈಭವೀಕರಿಸಿ ಜನರನ್ನು ಮರುಳು ಮಾಡಲೆತ್ನಿಸುತ್ತಾರೆ. ಯುದ್ಧ ನಡೆದ ಪಕ್ಷದಲ್ಲಿ ಮುಂದಿನ ದಿನಗಳು ಹೇಗಿರಬಹುದೆಂದು ಊಹಿಸಲೂ ಅಸಾಧ್ಯ. ಆದರೆ ದೇಶಭಕ್ತಿಯ ಗುಂಗಿನಲ್ಲಿ ಜನತೆ ಈ ಕಟುಸತ್ಯವನ್ನು ಒಪ್ಪಿಕೊಳ್ಳಲೂ ಹಿಂಜರಿಯುತ್ತಾರೆ. ಏಕೆಂದರೆ ಮಾಧ್ಯಮಗಳೂ ಸಹ ನಿಷ್ಠಾವಂತ ಯುದ್ಧವಿರೋಧಿಗಳನ್ನು ದೇಶದ್ರೋಹಿಗಳಂತೆ ಚಿತ್ರಿಸುತ್ತವೆ.

ಆದರೆ ಸಾಮಾನ್ಯ ಜನತೆ ಅರಿತಿರಬೇಕಾದ ವಾಸ್ತವತೆ ಎಂದರೆ, ಯುದ್ಧ ಕೇವಲ ಎರಡು ದೇಶಗಳ ನಡುವೆ ನಡೆಯುವ ಯಾದವೀಕಲಹವಲ್ಲ. ನಮ್ಮ ದೇಶದಲ್ಲಿಯೂ ಸಹ ಬಹುಪಾಲು ಜನತೆ ಯುದ್ಧ ವಿರೋಧಿಗಳಾಗಿದ್ದಾರೆ. ಕತ್ತಿ ಝಳಪಿಸುವುದು ದೇಶಭಕ್ತಿಯ ಕುರುಹಾಗುವುದಿಲ್ಲ. ಅದು ಕೇವಲ ಮೂರ್ಖರ ಮೊಂಡು ಧೈರ್ಯವಾಗಿರುತ್ತದೆ. ಆಧುನಿಕ ಯುಗದ ಯುದ್ಧಗಳಿಂದ ಉಂಟಾಗುವ ಸಾವು, ನೋವು, ನಷ್ಟ, ವ್ಯಸನ, ಹಾನಿ, ಅಪಾಯಗಳು ಊಹಿಸಲಸಾಧ್ಯ. ಹಿರೋಷಿಮಾ, ನಾಗಸಾಕಿ, ವಿಯೆಟ್ನಾಂ, ಇರಾಕ್, ಪ್ಯಾಲೆಸ್ಟೈನ್ ಹಾಗೂ ಆಫ್ಘಾನಿಸ್ತಾನಗಳೇ ಇದಕ್ಕೆ ಜೀವಂತ ನಿದರ್ಶನ. ಇಂದಿನ ಒಂದು ಯುದ್ಧದ ಪರಿಣಾಮಗಳನ್ನು ಮುಂದಿನ ಹತ್ತು ಪೀಳಿಗೆಯವರು ಅನುಭವಿಸಬೇಕಾಗುತ್ತದೆ. ದಂತದರಮನೆಗಳಲ್ಲಿ ಕುಳಿತು ಯುದ್ಧಗಳ ಸಂಚು ಹೂಡುವ ರಾಜಕೀಯ ನಾಯಕರು ಗಳಿಗೆ ತಮ್ಮ ಅಧಿಕಾರ ಉಳಿಸಿಕೊಳ್ಳಲು ಯುದ್ಧಗಳು ಒಂದು ಅಸ್ತ್ರವಾಗಬಹುದು. ಆದರೆ, ಇದರಿಂದ ಇಡೀ ದೇಶವನ್ನು, ಜನಾಂಗಗಳನ್ನು ಬಲಿನೀಡುವುದು ಮಾನವ ವಿರೋಧೀ ಕೃತ್ಯವಾಗುತ್ತದೆ. ಈ ರೀತಿಯ ಯುದ್ಧ ಪಿಪಾಸಿ ಸರ್ಕಾರಗಳೇ ಅತಿ ಹೆಚ್ಚು ಅಪಾಯಕಾರಿ ಭಯೋತ್ಪಾದಕ

## ಸುಮ್ಮನಽ ಬಿಟ್ಟಾರೇನ ?



ಮ್ಯಾಲಿನವರು ನೀವು
ಕೆಳಗಿನವರು ನಾವು
ಕೆಳಗಿನ ಕೆಲಸ ಮಾಡೂದಽ ನಮ್ಮ ಸ್ಥಿತಿ.
ನೀನಽ ಹೇಳವ್ವಾ:
ಅದ್ಯಾಂಗ ಹೊಂದತಽದ
ನಮಗೂ - ನಿಮಗೂ ಒಗೆತನ !

ಗೌಡ್ರು ಹೇಳಿದಾಗ
ಆಯ್‌ತ್ರೀಯೆಪ್ಪಾಯೆಂದಾಂವ
ಗೌಡತಿ ಕರೆದಾಗ
ಹ್ಞೂಂರ್ರೀ- ಯೆವ್ವಾ ಎಂದು
ಮನಿ ಮಗ ಅಂತ ಕರೆಸಿಕೊಂಡಾಂವ.

ಇಂತಾದರಾಗ...
ನನ್ನ್ಯಾತಕವ್ವಾ ಮೆಚ್ಚಿಕೊಂಡಿ ?
ಬ್ಯಾಡ, ಬ್ಯಾಡಂದ್ರೂ
ಗ್ವಾಜಲ್ಲ್ಯಾಗ ಗುದಮುರಗಿ ಹಾಕ್ಕೊಂಡು ಬಿದ್ದಿ.
ಮೆತ್ತನ್ನ ಮೈಗೆ ಚಿಪ್ಪಾಡಿ ಚುಚ್ಚಿ
ಮೈತುಂಬ ಬ್ಯಾನಿ ತಡಕೊಂಡಿ.

ಆಗಬಾರದು ಏನಾಯ್ತು ?
ಎಡವಿದ ಕಲ್ಲ ಉಡಿಯ್ಯಾಗ ಕಟಗೋತಿಯೇನ ?
ಹೀಂಗ ಹಠ ಮಾಡಿ
ನನ್ನ ಕಟಗೊಂಡು ಏನಽ ಮಾಡ್ತಿ ?
ನಿಮ್ಮ ಮನಿ ಸೆಗಣಿ ಬಳದ
ಹೊಟ್ಟೆ ತುಂಬಿಕೊಳ್ಳೋದು ಕಷ್ಟಾಗೈತಿ
ನಿನ್ನ ನೋವು ನನಗೂ ಗೊತ್ತಾಗತೈತಿ
ಖರೇ ಏನ ಮಾಡಾಂಗೈತಿ.
ನನ್ನ ಮರೆತು ಬಿಟ್ಟುಬಿಡವ್ವಾ.
ಮನಿಮಾರು ಬಿಟ್ಟು ಓಡಿ ಹೋಗೂನಂತಿ.

ತಗಿಯವ್ವಾ ಎಂತಹ ಮಾತು !
ಹೀಂಗಽ ಅಂತ ಗೊತ್ತಾದ್ರ ಸಾಕು
ಗೌಡ್ರು ಸುಮ್ಮನಽ ಬಿಟ್ಟಾರೇನ ?
ನನ್ನ ಕೇರಿಗೆ ಬೆಂಕಿ ಹತ್ತೈತಿ.
ರಕ್ತದ ಕಾಲುವೆ ಹರಿದಾಡತೈತಿ
ನನ್ನ ಜನಗಳ ಬಾಳ ಮೂರಾಬಟ್ಟೆಯಾಗತೈತಿ.
ನೀ ಹೀಂಗಂದ್ರ ಹ್ಯಾಂಗಯೆವ್ವಾ
ಪ್ಯಾಟ್ಯಾಗ ಕಲಿತು ಬಂದಾಕಿ.

**ಎಸ್ಸಾರ್. ರಾಮರಥ**
ಜಾನಪದ ಅಧ್ಯಯನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ - ೫೮೦ ೦೦೩

ರೆನ್ನುವುದರಲ್ಲಿ ಸಂಶಯವೇ ಇಲ್ಲ. ಈ ಆಪಾದನೆಗೆ ಭಾರತ ಪಾಕಿಸ್ತಾನ ಸರ್ಕಾರಗಳು ಹೊರತಲ್ಲ.

ಇನ್ನು ಜನಸಾಮಾನ್ಯರಲ್ಲಿ ವಿಶ್ವಾಸ ಕಳೆದುಕೊಂಡಿರುವ ನಮ್ಮ ಕೇಂದ್ರ ಸರ್ಕಾರಕ್ಕೆ ಯುದ್ಧ ಮಾಡುವುದಕ್ಕಿಂತಲೂ, ಯುದ್ಧ ಸನ್ನಿಯನ್ನು ಅಥವಾ ಯುದ್ಧೋನ್ಮಾದವನ್ನು ಸೃಷ್ಟಿಸುವುದು ರಾಜಕೀಯವಾಗಿ ಲಾಭದಾಯಕವಾಗಿದೆ. ಪಾಕಿಸ್ತಾನದ ಮೇಲೆ ಯುದ್ಧ ಸಾರಿ ಗೆಲವು ಸಾಧಿಸಿದಲ್ಲಿ, ಕಾಶ್ಮೀರದಲ್ಲಿ ಶಾಂತಿ ನೆಲೆಸುತ್ತದೆ, ಭಯೋತ್ಪಾದನೆ ಕೊನೆಗೊಳ್ಳುತ್ತದೆ ಎಂಬ ಭ್ರಮೆಯನ್ನು ಜನರಲ್ಲಿ ಸೃಷ್ಟಿಸಲಾಗುತ್ತಿದೆ. ದೇಶದ ಜನತೆ ಯುದ್ಧೋನ್ಮಾದದಿಂದ ಭಾವುಕರಾಗಿರುವ ಸಮಯದಲ್ಲಿ ರಾಮಮಂದಿರ ನಿರ್ಮಾಣಕಾರ್ಯ ಆರಂಭಿಸಿ, ದೇಶಭಕ್ತಿ-ಧರ್ಮ-ಧಾರ್ಮಿಕ ಕರ್ತವ್ಯಗಳನ್ನು ಭಯೋತ್ಪಾದನೆಯ ವಿರುದ್ಧದ ಸಮರಕ್ಕೆ ಸಮೀಕರಿಸುವುದು ಸಂಘಪರಿವಾರದ ಹಾಗೂ ಭಾ. ಜ. ಪ.ದ ಹುನ್ನಾರವಾಗಿದೆ. ಹಾಗಾಗಿಯೇ ಇಂದು ಪ್ರಧಾನ ಮಂತ್ರಿಗಳಿಗಿಂತಲೂ ಹೆಚ್ಚಾಗಿ, ಭಾ. ಜ. ಪ. - ಸಂಘಪರಿವಾರದ ನಾಯಕರುಗಳು ಯುದ್ಧದ ಬಗ್ಗೆ ಮಾತನಾಡಲಾರಂಭಿಸಿದ್ದಾರೆ. ಈ ಹಿನ್ನೆಲೆಯಲ್ಲಿ 'ಪೋಟೊ' ವನ್ನು ಜಾರಿಗೊಳಿಸುವ ಮೂಲಕ ಸರ್ಕಾರವು ಸಂಘಪರಿವಾರದ ರಾಮಮಂದಿರ ನಿರ್ಮಾಣ ಕಾರ್ಯಗಳಿಗೆ ಎಲ್ಲಾ ರೀತಿಯ ಸಿದ್ಧತೆಗಳನ್ನು ಮಾಡಿಕೊಟ್ಟಿದೆ. ಅಣ್ವಸ್ತ್ರಗಳನ್ನು ಕೈಲಿರಿಸಿಕೊಂಡು ಯುದ್ಧದ ಸಿದ್ಧತೆ ನಡೆಸಿರುವ ಕೇಂದ್ರ ಸರ್ಕಾರ, ನಾವು ಅಣ್ವಸ್ತ್ರವನ್ನು ಮೊದಲು ಉಪಯೋಗಿಸುವುದಿಲ್ಲ ಎಂದು ಹೇಳುವುದು ಹಾಸ್ಯಾಸ್ಪದವಾಗಿ ಕಾಣತ್ತದೆ. ಅಣು ಯುದ್ಧದಲ್ಲಿ ಮೊದಲು ಉಪಯೋಗಿಸುವುದು, ಪ್ರತಿಕ್ರಿಯೆಯ ರೂಪದಲ್ಲಿ ನಂತರ ಉಪಯೋಗಿಸುವುದು ಅಸಂಬದ್ಧವಾಗುತ್ತದೆ. ಏಕೆಂದರೆ ಅಣು ಯುದ್ಧ ಒಂದು ಯುದ್ಧವಲ್ಲ, ಮನುಕುಲ ನಾಶದ ಒಂದು ಅಮಾನವೀಯ ಪ್ರಕ್ರಿಯೆ. ಅಣುಬಾಂಬ್ ಉಪಯೋಗಿಸಿದಾಗ ಗೆಲುವು ಸೋಲುಗಳ ಪ್ರಶ್ನೆ ಬರುವುದಿಲ್ಲ. ಅಲ್ಲಿ ಎಲ್ಲವೂ ನಾಶವಾಗುತ್ತದೆ. ಒಂದು ಅಣು ಬಾಂಬ್ ಸ್ಫೋಟಗೊಂಡರೆ, ಸುತ್ತಲಿನ ೫೦ ಕಿ. ಮೀ.ನಷ್ಟು ಪ್ರದೇಶದಲ್ಲಿನ ಜನರು ಕ್ಷಣಾರ್ಧದಲ್ಲಿ ಸುಟ್ಟು ಬೂದಿಯಾಗುತ್ತಾರೆ. ೨೫೦ ಕಿ. ಮೀ.ನ ಸುತ್ತಲಿನ ಪ್ರದೇಶದ ಜನ ಅನೇಕ ಕಾಯಿಲೆಗಳಿಂದ ನರಳಬೇಕಾಗುತ್ತದೆ. ಕೇವಲ ಮನುಕುಲವನ್ನು ಮಾತ್ರವಲ್ಲದೆ, ಸಕಲ ಜೀವರಾಶಿಗಳನ್ನೂ ಈ ಅಸ್ತ್ರಗಳು ನಾಶಗೊಳಿಸುತ್ತವೆ. ಮುಂದಿನ ಹಲವಾರು ತಲೆಮಾರಿನ ಜನತೆ ಅಣ್ವಸ್ತ್ರಗಳ ವಿಕಿರಣಗಳ ಪ್ರಭಾವದಿಂದ ನಾನಾ ರೀತಿಯ ರೋಗ-ರುಜಿನಗಳನ್ನು, ವೈಕಲ್ಯಗಳನ್ನು ಎದುರಿಸಬೇಕಾಗುತ್ತದೆ. ಹಿರೋಷಿಮ- ನಾಗಸಾಕಿಯಲ್ಲಿ ಇಂದಿಗೂ ನವಜಾತ ಶಿಶುಗಳು ಅಂಗವಿಕಲತೆಯಿಂದ ನರಳುತ್ತಿರುವುದು ಇದಕ್ಕೆ ಜೀವಂತ ಸಾಕ್ಷಿ.

ಇವೆಲ್ಲವೂ ನಮ್ಮ ಆಳುವ ವರ್ಗಗಳಿಗೆ ತಿಳಿದಿಲ್ಲವೆಂದೇನಲ್ಲ. ಭಾವೋದ್ವೇಗಗಳಿಗೊಳಗಾಗಿ ದೇಶವನ್ನು ಶತ್ರುಗಳಿಂದ ರಕ್ಷಿಸುವ ನೆಪದಲ್ಲಿ ಇಡೀ ಜನಾಂಗವನ್ನೇ ನಾಶಮಾಡುವುದು ಈ ಯುದ್ಧಪಿಪಾಸಿಗಳ ಉದ್ದೇಶವಾಗಿದೆ. ಇಸ್ಲಾಂನ ಹೆಸರಿನಲ್ಲಿ ಜೆಹಾದ್ ಘೋಷಿಸಿ, ಸಾವಿರಾರು ಮುಸ್ಲಿಂ ಬಾಂಧವರ ಸಾವಿಗೆ ಕಾರಣರಾದವರಿಗೂ ನಮ್ಮ ಆಳುವ ವರ್ಗಗಳಿಗೂ ಸಮನ್ವಯ ಇಲ್ಲಿ ಕಂಡುಬರುತ್ತದೆ. ಯುದ್ಧ ಬಯಸುವ ಮನಸ್ಸುಗಳೇ ವಿಚ್ಛಿದ್ರಕಾರಿಯಾಗಿರುತ್ತವೆ, ಹಿಂಸೆಯನ್ನು ವೈಭವೀಕರಿಸುವ ಕ್ಷುದ್ರ ಭಾವನೆಗಳನ್ನು ಸೃಷ್ಟಿಸುತ್ತವೆ. ಜನರಲ್ಲಿ ಹಿಂಸಾತ್ಮಕ ಮನೋಭಾವನೆಗಳನ್ನು ಉಂಟು ಮಾಡಿ ಶಾಂತಿ-ಸಹಬಾಳ್ವೆ-ಮಾನವತೆಯ ಜೀವಂತ ಸಮಾಧಿ ಮಾಡುತ್ತವೆ.

ಈ ಯುದ್ಧ ಸನ್ನಿಯನ್ನು ಹೋಗಲಾಡಿಸಬೇಕಾದರೆ ಜನತೆಯಲ್ಲಿ ಶಾಂತಿ ಸೌಹಾರ್ದತೆಯ ಸಂದೇಶ ಹರಡುವುದು ಅವಶ್ಯವಾಗಿದೆ. ಧರ್ಮ-ಜಾತಿ-ಭಾಷೆ-ದೇಶ ಯಾವುದೇ ಲೇಪನ ನೀಡಿದರೂ ಯುದ್ಧ ಮೂಲತಃ ಮಾನವ ವಿರೋಧಿಯಾಗಿದೆ. ಬಂಕರುಗಳಲ್ಲಿ ಅವಿತು ಕುಳಿತು, ಬಿಗಿಭದ್ರತೆಯ ಕೊಠಡಿಗಳಲ್ಲಿ ಅವಿತು ಕುಳಿತು, ಸೈನಿಕರಿಗೆ ಯುದ್ಧದ ಆದೇಶ ನೀಡುವ ನಾಯಕರುಗಳು, ಯುದ್ಧದಲ್ಲಿ ಮಡಿದ ಸೈನಿಕರಿಗೆ, ಸಾಮಾನ್ಯ ಜನತೆಗೆ, ಕಂಬನಿ ಮಿಡಿಯಬಹುದೇ ಹೊರತು ಇನ್ನೇನೂ ಮಾಡಲಾರರು. ಭಾರತ-ಪಾಕಿಸ್ತಾನಗಳ ನಡುವೆ ನಾಲ್ಕು ಯುದ್ಧಗಳು ನಡೆದಿದ್ದು ಇದರಿಂದ ಎರಡು ದೇಶಗಳಿಗೂ ಯಾವುದೇ ಉಪಯೋಗವಾಗಿಲ್ಲ. ಯಾವ ಸಮಸ್ಯೆಯೂ ಬಗೆಹರಿದಿಲ್ಲ. ಇನ್ನೂ ಹೊಸ ಸಮಸ್ಯೆಗಳು ಸೃಷ್ಟಿಯಾಗುತ್ತಿವೆ. ಯುದ್ಧದ ವೆಚ್ಚಗಳನ್ನು ಸಾಮಾನ್ಯ ದುಡಿಯುವ ಜನತೆ ಭರಿಸುತ್ತಿದ್ದಾರೆ. ಆಳುವ ವರ್ಗಗಳು ಇದರ ಲಾಭ ಪಡೆಯುತ್ತಿದ್ದಾರೆ.

ದೇಶದ ಆಯವ್ಯಯ ಪತ್ರದಲ್ಲಿ ಶೇ. ೫೦ಕ್ಕಿಂತಲೂ ಹೆಚ್ಚಾಗಿ ರಕ್ಷಣಾ ವೆಚ್ಚ ಕಂಡುಬರುತ್ತಿದೆ. ಶಿಕ್ಷಣ, ಆರೋಗ್ಯ, ಜನಕಲ್ಯಾಣ, ಜೀವನಾವಶ್ಯಕಗಳಿಗೆ ಮೀಸಲಾದ ಹಣವನ್ನು ಶಸ್ತ್ರಾಸ್ತ್ರ ಪೂರೈಕೆಗೆ, ಖರೀದಿಗೆ ಬಳಸಲಾಗುತ್ತಿದೆ. ಬ್ರಿಟನ್ ಪ್ರಧಾನಿ ಭಾರತದ ಭೇಟಿ ಮುಗಿಸಿ ಹೋದ ನಂತರವೇ ಭಾರತಕ್ಕೆ ಶಸ್ತ್ರಾಸ್ತ್ರ ಪೂರೈಕೆಯ ಬಗ್ಗೆ ಹೇಳಿಕೆ ನೀಡಿರುವುದು ಸಾಮ್ರಾಜ್ಯಶಾಹಿಗಳ ಪಿತೂರಿಗೆ ಪ್ರತ್ಯಕ್ಷ ನಿದರ್ಶನ. ಆರ್ಥಿಕ ಹಿನ್ನಡೆ ಅನುಭವಿಸುತ್ತಿರುವ ಸಾಮ್ರಾಜ್ಯಶಾಹಿ ರಾಷ್ಟ್ರಗಳಿಗೆ ಈಗ ಶಸ್ತ್ರಾಸ್ತ್ರ ವ್ಯಾಪಾರವೊಂದೇ ಅಭಿವೃದ್ಧಿ ಸಾಧಿಸುವ ಮಾರ್ಗವಾಗಿದೆ. ಈ ಭೀಕರ ಹುನ್ನಾರಗಳಿಗೆ ಭಾರತ-ಪಾಕಿಸ್ತಾನದಂತಹ ಬಡರಾಷ್ಟ್ರಗಳು ಬಲಿಯಾಗಬಾರದು, ಹಾಗಾದಲ್ಲಿ ಇಲ್ಲಿನ ಜನತೆಗೆ ಉಳಿಗಾಲವಿರುವುದಿಲ್ಲ.




ಯುದ್ಧ ಎನ್ನುವುದು ಹಿಂಸಾತ್ಮಕ ಮನೋವೃತ್ತಿಯ ಅಭಿವ್ಯಕ್ತಿಯಾಗಿ ಹೊರಹೊಮ್ಮುತ್ತದೆ. ಮನದಲ್ಲಿನ ಹಿಂಸೆಯ ಪ್ರವೃತ್ತಿಯನ್ನು ಹೊಡೆದೋಡಿಸಿ ಶಾಂತಿ - ಸೌಹಾರ್ದತೆಗಳೆಡೆಗೆ ನಡೆಯುವುದು ಒಂದು ಪ್ರಜ್ಞಾವಂತ ಜನತೆಯ ಕರ್ತವ್ಯವಾಗಬೇಕಾಗಿದೆ. ಇಂದು ಯುದ್ಧ ನಡೆಯಬೇಕಾಗಿರುವುದು ದೇಶಗಳ ನಡುವೆ ಅಲ್ಲ, ನಮ್ಮ ಮನಸ್ಸು-ಪ್ರವೃತ್ತಿಗಳ ನಡುವೆ. ವಿನಾಶಕಾರಿ ಅಸ್ತ್ರಗಳಿಂದ ಯಾವುದನ್ನೂ ಗೆಲ್ಲಲಾಗುವುದಿಲ್ಲ. ಆದರೆ ಸ್ನೇಹ ಔದಾರ್ಯಗಳಿಂದ ಇಡೀ ವಿಶ್ವವನ್ನೇ ಗೆಲ್ಲಬಹುದು. ಧರ್ಮ ಮತ್ತು ಧಾರ್ಮಿಕ ಸಂದೇಶಗಳನ್ನು ಮಾನವತೆಯ ಏಳಿಗೆಗಾಗಿ ಬಳಸಬೇಕೇ ಹೊರತು ವಿನಾಶಕ್ಕಾಗಿ ಅಲ್ಲ. ಯಾವುದೇ ಧರ್ಮವೂ ಮನುಕುಲದ ನಾಶ ಬಯಸುವುದಿಲ್ಲ. ಅಶೋಕನಂತಹ ಮಹಾನ್ ಚಕ್ರವರ್ತಿಯೇ ಈ ಸತ್ಯವನ್ನು ಅರಿತು ಶಾಂತಿಯ ಮಾರ್ಗ ಅನುಸರಿಸಿರುವುದು ಇತಿಹಾಸದಲ್ಲಿದೆ. ಅಶೋಕ ಚಕ್ರವರ್ತಿಯಲ್ಲಿ ಉಂಟಾದ ಪರಿವರ್ತನೆ ನಮ್ಮ ದೇಶಕ್ಕೆ ದಾರಿದೀಪವಾದರೆ, ತ್ರಿವರ್ಣಧ್ವಜದ ಮಧ್ಯದಲ್ಲಿ ಅಶೋಕ ಚಕ್ರ ಇರುವುದಕ್ಕೂ ಸಾರ್ಥಕವಾಗುತ್ತದೆ. ದೇಶಭಕ್ತಿಯ ಪ್ರತೀಕವಾದ ಧ್ವಜಕ್ಕೆ ಪ್ರತಿ ನಿತ್ಯ ವಂದಿಸುವ ನಾಯಕರುಗಳು ನಿಜವಾಗಿಯೂ ತಮ್ಮ ದೇಶ ಹಾಗೂ ಜನತೆಯ ರಕ್ಷಕರೇ ಆದರೆ ಹಿಂಸೆಯ ಮಾರ್ಗವನ್ನು ತೊರೆದು ಶಾಂತಿ ಮಾರ್ಗವನ್ನು ಅನುಸರಿಸಬೇಕಾಗುತ್ತದೆ.

ಆದರೆ ತಮ್ಮ ಸ್ವಾರ್ಥ ರಾಜಕಾರಣಕ್ಕಾಗಿ ಧರ್ಮದ ಹೆಸರಿನಲ್ಲಿ ಅಮಾಯಕರ ಮಾರಣಹೋಮ ಮಾಡುವ ಭಾ. ಜ. ಪ. ದಂತಹ ಫ್ಯಾಸಿಸ್ಟ್ ಪಕ್ಷಗಳಿಗೆ ಈ ರೀತಿಯ ಜ್ಞಾನೋದಯವಾಗಲಾರದು. ತಮ್ಮ ಕವನಗಳಲ್ಲಿ ಯುದ್ಧವನ್ನು ವಿರೋಧಿಸುವ ಪ್ರಧಾನಮಂತ್ರಿಗಳೇ ಇಂದು ಯುದ್ಧದ ಪ್ರತಿಪಾದಕರಾಗಿರುವುದು ಆಳುವ ವರ್ಗಗಳ ದ್ವಿಮುಖ ನೀತಿಗೆ ಸಾಕ್ಷಿ. ಕಾಂಗ್ರೆಸ್ ಹಾಗೂ ಇತರ ಅವಕಾಶವಾದಿ ಸಂಸದೀಯ ಪಕ್ಷಗಳೂ ಸಹ ಈ ನಿಟ್ಟಿನಲ್ಲಿ ವಿಭಿನ್ನವಾಗಿ ಯೋಚಿಸಲಾರವು. ಆದರೆ ಸಾಮಾನ್ಯ ಜನತೆಯಲ್ಲಿ, ದುಡಿಯುವ ವರ್ಗಗಳಲ್ಲಿ, ಪ್ರಜ್ಞಾವಂತ ಯುವಕರಲ್ಲಿ, ದೇಶದ ನಿರ್ಮಾಣದಲ್ಲಿ ತೊಡಗಿರುವ ರೈತರು, ಕೃಷಿ ಕಾರ್ಮಿಕರು ಹಾಗೂ ಇತರ ವರ್ಗಗಳಲ್ಲಿ ಶಾಂತಿಯ ಭಾವನೆ ಮೂಡಿದರೆ ನಮ್ಮ ದೇಶ ಉತ್ತಮ ಭವಿಷ್ಯವನ್ನು ಎದುರು ನೋಡಬಹುದು. ಇದರಿಂದ ನಾಗರಿಕತೆ ಬೆಳೆಯುತ್ತದೆ. ಮನುಕುಲ ಉಳಿಯುತ್ತದೆ. ದೇಶವನ್ನು, ಮನುಕುಲವನ್ನು ವಿನಾಶದಂಚಿಗೆ ಒಯ್ಯುತ್ತಿರುವ ಯುದ್ಧಪಿಪಾಸಿಗಳನ್ನು ಅಧಿಕಾರದಿಂದ ಕೆಳಗಿಳಿಸಿ, ಪ್ರಜಾತಾಂತ್ರಿಕ, ಸಮಾನತೆಯ, ಸೌಹಾರ್ದಯುತ ಸಮಾಜದ ನಿರ್ಮಾಣಕ್ಕಾಗಿ ಜನತೆ ಇಂದು ಕಾರ್ಯಪ್ರವೃತ್ತರಾಗಬೇಕಾಗಿದೆ.

ನಾ. ದಿವಾಕರ್
ಕೆನರಾ ಬ್ಯಾಂಕ್, ಬೆಳ್ಳೂರು

# ಕನ್ನಡ - ಕರ್ನಾಟಕ : ಇಂದಿನ ಸವಾಲುಗಳು

**ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ**



**ಯಾ**ವುದೇ ಜೀವಂತ ಸಂಸ್ಕೃತಿಗೆ ಎಲ್ಲಾ ಕಾಲದಲ್ಲಿಯೂ ಸವಾಲುಗಳು ಇದ್ದದ್ದೇ. ಅದು ಸಹಜ ಮತ್ತು ಸ್ವಾಭಾವಿಕ. ಈ ಹಿನ್ನೆಲೆಯಲ್ಲಿ ಕರ್ನಾಟಕ ಮತ್ತು ಕನ್ನಡಕ್ಕೂ ತನ್ನ ಎಲ್ಲಾ ಕಾಲಗಳಲ್ಲಿಯೂ ಸವಾಲುಗಳು ಇದ್ದವು ಮತ್ತು ಅವು ಇಂದಿಗೂ ಇವೆ. ಇಂತಹ ಸವಾಲುಗಳನ್ನು ಜೀರ್ಣಿಸಿಕೊಳ್ಳುವ ಶಕ್ತಿಯನ್ನು ಪ್ರಾಚೀನ ಕಾಲದಿಂದಲೂ ಇವು ಪ್ರಕಟಿಸುತ್ತಾ ಬಂದಿವೆ. ಉದಾಹರಣೆಗೆ, ವಸಾಹತುಪೂರ್ವ ಸಂದರ್ಭದಲ್ಲಿ ಸಂಸ್ಕೃತ ವಸಾಹತುಶಾಹಿಯ ಎದುರಿನಲ್ಲಿ ಕನ್ನಡವು ತನ್ನ ಜೀರ್ಣಶಕ್ತಿಯನ್ನು ಪ್ರಕಟಗೊಳಿಸಿದೆ. ಅಂತೆಯೇ ಬ್ರಿಟಿಷ್ ವಸಾಹತು ಸಂದರ್ಭದಲ್ಲಿ ಇಂಗ್ಲಿಷ್ ಸಾಮ್ರಾಜ್ಯಶಾಹಿಗೆ ಮುಖಾಮುಖಿಯಾಗುತ್ತಲೇ ತನ್ನ ಸಾಧ್ಯತೆಗಳನ್ನು ವಿವರಿಸಿಕೊಳ್ಳುತ್ತಾ ಬಂದಿದೆ.

ಹೀಗೆ ವಿವಿಧ ಕಾಲಮಾನಗಳಲ್ಲಿ ವಿಭಿನ್ನ ಮಾದರಿಯ ಸವಾಲುಗಳನ್ನು ಎದುರಿಸುತ್ತಾ ಬಂದ ಕರ್ನಾಟಕ-ಕನ್ನಡಗಳು ಇಂದು ಅನೇಕ ವಿಧವಾದ ಸವಾಲುಗಳನ್ನು ಎದುರಿಸುತ್ತಿವೆ. ಅವುಗಳನ್ನು ಮೊದಲಿಗೆ ಹೀಗೆ ಸ್ಥೂಲವಾಗಿ ಚರ್ಚಿಸುತ್ತಾ ಹೋಗಬಹುದು:

**೧. ಇಂಗ್ಲಿಷ್ ಸಾಮ್ರಾಜ್ಯಶಾಹಿ - ಜಾಗತೀಕರಣ, ಉದಾರೀಕರಣ, ಖಾಸಗೀಕರಣ**

ಇದರ ಮೂಲಕವಾಗಿ ಕರ್ನಾಟಕದಲ್ಲಿ ಕನ್ನಡ ಭಾಷೆಯ ಪ್ರಜಾಸತ್ತೆಗೆ ಆತಂಕ ಒದಗುತ್ತಿದೆ. ಸಂವಿಧಾನದ ಆಶಯದ ಮೇರೆಗೆ ಕರ್ನಾಟಕದಲ್ಲಿ ಕನ್ನಡಕ್ಕೆ ವಿಶೇಷ ಸ್ಥಾನವಿದೆ. ಆದರೆ ಇದರ ಅಸ್ತಿತ್ವಕ್ಕೇ ಆತಂಕಕಾರಿಯಾಗಿ ಇಂಗ್ಲಿಷ್ ಮಾರ್ಪಡುತ್ತಿದೆ. ಕಾರಣ, ಕರ್ನಾಟಕದ ಸಾರ್ವಜನಿಕ ವಲಯದಲ್ಲಿ ಜಾಗತೀಕರಣದ ಪರಿಣಾಮವಾಗಿ ಅನೇಕ ಉದ್ದಿಮೆಗಳು ಖಾಸಗಿಯವರ ಪಾಲಾಗುತ್ತಿವೆ. ಇನ್ನೂ ಅನೇಕ ಸಂಸ್ಥೆಗಳು, ಕಂಪೆನಿಗಳು ವಿದೇಶಗಳಿಂದ ನೇರವಾಗಿ ಇಲ್ಲಿಗೆ ಆಗಮಿಸಿ ನೆಲೆಯೂರುತ್ತಿವೆ. ಇಂತಹ ಎಡೆಗಳಲ್ಲಿ ಇಂಗ್ಲಿಷಿಗೆ ಮೊದಲ ಸ್ಥಾನ ದಕ್ಕುತ್ತಿದೆ. ಇಂಗ್ಲಿಷ್ ಬಲ್ಲವರಿಗೆ ಆದ್ಯತೆಯನುಸಾರ ಇಲ್ಲಿ ಉದ್ಯೋಗಾವಕಾಶಗಳು ಲಭ್ಯವಾಗುತ್ತಿವೆ. ಹೀಗೆ ಈ ನೆಲೆಯಲ್ಲಿ ಇಂಗ್ಲಿಷಿಗೆ ಮಾರುಕಟ್ಟೆ ಮೌಲ್ಯ ಪ್ರಾಪ್ತವಾಗುತ್ತಿರುವುದರಿಂದ ಸಹಜವಾಗಿಯೇ ಅನೇಕರು ಇಂಗ್ಲಿಷಿನ ದಾಸರಾಗುತ್ತಿದ್ದಾರೆ. ಅಲ್ಲದೆ ಕನ್ನಡದ ಮೂಲಕ ಸಾಧಿಸುವಷ್ಟು ಬೌದ್ಧಿಕ ಸಾಧನೆ ಮಾಡದ ಸ್ಥಿತಿಯನ್ನು ಇವರು ಮುಟ್ಟುತ್ತಿದ್ದಾರೆ.

ಖಾಸಗಿ ನೆಲೆಯಲ್ಲಿ ಶ್ರಮದ ಮಾನವೀಕರಣ ಇಲ್ಲ. ಇಲ್ಲಿ ಮನುಷ್ಯರೆಲ್ಲರೂ ಮೂಲತಃ ಯಂತ್ರಗಳೇ. ಆದ್ದರಿಂದ ಯಾವುದೇ ಬಗೆಯ ಮನುಷ್ಯ ಸಂವೇದನೆಗಳಿಗೆ ಇಲ್ಲಿ ಜಾಗವಿಲ್ಲ. ಜೊತೆಗೆ ಉದ್ಯೋಗದ ಭದ್ರತೆ ಇಲ್ಲಿ ಇಲ್ಲವಾದ್ದರಿಂದ ಭವಿಷ್ಯದ ಬಗೆಗೂ ಕಳವಳಕಾರಿಯಾದ ನೋಟವೇ ಮೂಡುತ್ತದೆ. ಈ ಹಿನ್ನೆಲೆಯಲ್ಲಿ ಸಾರ್ವಜನಿಕ ವಲಯದ ಉದ್ದಿಮೆಗಳಾದ ಎನ್.ಜಿ.ಇ.ಎಫ್., ಕಾಗದದ ಕಾರ್ಖಾನೆ, ಬಿನ್ನಿ ಮಿಲ್ ಮೊದಲಾದವು ಮುಚ್ಚುತ್ತಿದ್ದರೆ, ಕೆಪಿಟಿಸಿಎಲ್ ಮೊದಲಾದ ಸರ್ಕಾರಿ ಸ್ವಾಮ್ಯದ ಸಂಸ್ಥೆಗಳು ಖಾಸಗಿಯವರ ಪಾಲಾಗುತ್ತಿವೆ. ಹೀಗೆ ಕರ್ನಾಟಕದ ಬದುಕು ಪ್ರಜಾಸತ್ತೆಗೆ ವಿರುದ್ಧವಾದ ಬಂಡವಾಳಶಾಹಿ ಅಡಿಯಲ್ಲಿ ಬಾಳಬೇಕಾದ ಅವಸ್ಥೆ ಬಂದೊದಗುತ್ತಿದೆ. ಇದು ೭೦ರ ದಶಕದಲ್ಲಿ ಅನೇಕ ಸಂಸ್ಥೆಗಳು ರಾಷ್ಟ್ರೀಕರಣಕ್ಕೆ ಒಳಗಾದ ಅನೇಕ ಕ್ರಿಯೆಯ ವಿರುದ್ಧ ದಿಕ್ಕಿನಲ್ಲಿ ಇರುವಂಥದ್ದು. ಆದ್ದರಿಂದ ಇಂಗ್ಲಿಷ್ ಸಾಮ್ರಾಜ್ಯಶಾಹಿ ಇಂದು ಹಿಂದೆಂದಿಗಿಂತಲೂ ತನ್ನ ಕರಾಳ ಛಾಯೆಯನ್ನು ಮೂರು ನಾಲ್ಕು 'ಕರಣ'ಗಳ (ಜಾಗತೀಕರಣ-ಉದಾರೀಕರಣ-ಖಾಸಗೀಕರಣ-ವ್ಯಾಪಾರೀಕರಣ) ಮೂಲಕ ಕರ್ನಾಟಕದ ಮೇಲೆ ಚಾಚುತ್ತಿದೆ.

**೨. ಜ್ಞಾನಮುಖಿ ಶಿಕ್ಷಣ ಅವಸಾನದತ್ತ**

ಕರ್ನಾಟಕದಲ್ಲಿ ಇತ್ತೀಚಿನ ವರ್ಷಗಳಲ್ಲಿ ಜ್ಞಾನಮುಖಿಯಾದ ಶಿಕ್ಷಣವು ಅವಸಾನದತ್ತ ಚಲಿಸುತ್ತಿದೆ. ಇದಕ್ಕೆ ವ್ಯತಿರಿಕ್ತವಾಗಿ ಕಂಪ್ಯೂಟರ್ ಮೊದಲಾದ ವೃತ್ತಿ ಶಿಕ್ಷಣವು ಪ್ರಧಾನ ಧಾರೆಗೆ ಏರುತ್ತಿದೆ. ಇದರ ಪರಿಣಾಮವಾಗಿ ಬಿ.ಎ., ಬಿ.ಎಸ್‌ಸಿ., ಬಿ.ಕಾಂ. ಮೊದಲಾದ ತರಗತಿಗಳು ಮುಚ್ಚುವ ಹಂತವನ್ನು ತಲುಪುತ್ತಿವೆ. ಇವು ಸಾಮಾನ್ಯ ಶಿಕ್ಷಣದ ಪರಿಧಿಗೆ ಸೇರುತ್ತವೆ. ಇವು ಮೂಲ ಭೂತವಾಗಿ ಉದ್ಯೋಗಮುಖಿಯಾದ ಶಿಕ್ಷಣಕ್ಕೆ ಸೂಕ್ತವಾದ ಪೂರ್ವಭಾವಿ ವೇದಿಕೆಯನ್ನು ನಿರ್ಮಿಸಿ ಕೊಡುವ ಕೋರ್ಸುಗಳಾಗಿವೆ. ಆದರೆ ಇವುಗಳಿಗೆ ಇಂದಿನ ಖಾಸಗಿ ವಲಯದಲ್ಲಿ ಮಾರುಕಟ್ಟೆಯ ಮೌಲ್ಯ ಇಲ್ಲವಾದ್ದ ರಿಂದ ಮತ್ತು ಇದನ್ನು ಬಂಡವಾಳಪತಿಗಳು ನಿರ್ಧರಿಸುತ್ತಿರುವು ದರಿಂದ ಜ್ಞಾನದ ಸಂವೇದನೆಗಳಿಗೆ ಬೆನ್ನು ತೋರಿದ ಯುವಜನತೆ ತಮ್ಮ ಕೌಶಲವನ್ನು ವೃತ್ತಿ ಶಿಕ್ಷಣದಲ್ಲಿ ಪ್ರಕಟಪಡಿಸುತ್ತಿದೆ. ಇಂತಹ ವಾತಾವರಣ ಎಲ್ಲೆಡೆಯೂ ಮೂಡುತ್ತಿರುವುದರಿಂದ ಶಿಕ್ಷಣ ಕ್ಷೇತ್ರದಲ್ಲಿ ಖಾಸಗಿ ರಂಗ, ಅದು ಎಲ್‌ಕೆಜಿ, ಯುಕೆಜಿಯಿಂದ ಉನ್ನತ ಶಿಕ್ಷಣದವರೆಗೂ, ಮುಖ್ಯ ಪಾತ್ರವನ್ನು ನಿರ್ವಹಿಸ ತೊಡಗಿದೆ. ಇದರಿಂದ ಒಂದು ಬಗೆಯ ಬೌದ್ಧಿಕ ದಾರಿದ್ರ್ಯ ತಾಂಡವವಾಡಲು ಸಾಧ್ಯವಾಗುತ್ತಿದೆ. ಕಾರಣ ಈ ಕೋರ್ಸುಗಳಲ್ಲಿ ಯಾವುದೇ ವಿಧವಾದ ಮನುಷ್ಯ ಸಂವೇದನೆಗಳಿಗೆ ಜಾಗವಿಲ್ಲ ಮತ್ತು ಇಲ್ಲಿಯ ಶಿಕ್ಷಣದ ಭಾಷೆ ನಮಗೆ ದೂರ ಮತ್ತು ಕಷ್ಟ ಸಾಧ್ಯವಾದ ಇಂಗ್ಲಿಷ್ ಭಾಷೆ. ಇದರ ಯಜಮಾನರು ಖಾಸಗಿಯವರಾದ್ದರಿಂದ ಶಿಕ್ಷಣದ ಶುಲ್ಕವೂ ಅಧಿಕ. ಆದ್ದರಿಂದ ಬಡವರು ಬಡವರಾಗಿಯೇ ಉಳಿವ ದಿನಗಳಿವು. ಅಥವಾ ಅವರು ಸರ್ಕಾರಿ ಶಾಲೆಗಳಲ್ಲಿ ಶಿಕ್ಷಣವನ್ನು ಪಡೆಯುತ್ತಾ, ಅಲ್ಲಿ ತಮ್ಮ ಭಾಷಾ ಶಿಕ್ಷಣ ಮತ್ತು ಶಾಲೆಯ ಬಗೆಗೆ ಕೀಳರಿಮೆಯನ್ನು ಬೆಳೆಸಿಕೊಳ್ಳುತ್ತಾ, ಕೊನೆಗೆ ವೃತ್ತಿ ಶಿಕ್ಷಣ ಪ್ರವೇಶದ ಹೊತ್ತಿಗೆ ಡೊನೇಷನ್ ಕೊಡಲು ಸಾಧ್ಯವಾಗದೆ ಹಿಂದುಳಿವ ಸ್ಥಿತಿ.

ಹೀಗೆ ಭಾಷಿಕವಾಗಿ, ಆರ್ಥಿಕವಾಗಿ ಶ್ರೇಣೀಕರಣ ವನ್ನು ಪೋಷಿಸಿಕೊಂಡು ಹೋಗುವ ಮತ್ತು ನಮ್ಮ ಪ್ರಜಾಸತ್ತೆಯ ಮೌಲ್ಯಗಳನ್ನು ಅಪ್ರಸ್ತುತಗೊಳಿಸುವ ಯತ್ನವನ್ನು ನಮ್ಮ ಆಳುವ ವರ್ಗ ಮತ್ತು ಉದ್ಯಮ ಪತಿಗಳು ಬಹಳ ನಾಜೂಕಾಗಿಯೇ ಮಾಡಿಕೊಂಡು ಬರುತ್ತಿದ್ದಾರೆ.

**೩. ನಗರ ಕೇಂದ್ರಿತ ಅಭಿವೃದ್ಧಿ ಚಿಂತನೆಗಳು**

ನಗರ ಕೇಂದ್ರಿತ ಅಭಿವೃದ್ಧಿ ಚಿಂತನೆಗಳಿಗೂ ಸ್ವಾತಂತ್ರ್ಯೋತ್ತರ ಭಾರತದ ರಾಜಕಾರಣಕ್ಕೂ ನಿಕಟ ಸಂಬಂಧವಿದೆ. ಪ್ರಗತಿಯೆಂಬುದು ನಗರ, ಬೃಹತ್ ಕೈಗಾರಿಕೆಗಳ ರೂಪದಲ್ಲಿ ಪ್ರಕಟವಾಗುತ್ತಾ ಬಂದಿದೆ. ಇದೇ ಸಂದರ್ಭದಲ್ಲಿ ಹೆಚ್ಚಿನ ಪ್ರಮಾಣದ ಜನತೆ ಬದುಕುತ್ತಿರುವ ಗ್ರಾಮೀಣ ಪ್ರದೇಶ ಅವಜ್ಞೆಗೆ ಈಡಾಗಿದೆ. ಆದ್ದರಿಂದ ಗ್ರಾಮ ಸ್ವರಾಜ್ಯ ಕಲ್ಪನೆ ಗಾಂಧೀಜಿಯ ಕನಸಿನ ಬುಟ್ಟಿಯಲ್ಲಿಯೇ ಉಳಿದುಬಿಟ್ಟಿರುವಂತಿದೆ. ಹೀಗಾಗಿ ಸರ್ಕಾರಗಳು ಗ್ರಾಮ ಮತ್ತು ರೈತ ಹಾಗೂ ಅವರ ಭಾಷೆಯ ಪರವಾದ ನೀತಿಯನ್ನು ಪ್ರಕಟಗೊಳಿಸದೆ ನಡೆದುಬಂದಿವೆ. ಈ ನಿಟ್ಟಿನಲ್ಲಿ ಹಳ್ಳಿಗಳು ಮತ್ತು ಅಲ್ಲಿಯ ಜನತೆ ತಮ್ಮ ಪ್ರಗತಿಗಾಗಿ ನಗರಗಳನ್ನು ಎದುರು ನೋಡುವಂತಾಗುತ್ತಿದೆ. ಉದಾಹರಣೆಗೆ (ಬರಗೂರರ ಹೇಳಿಕೆಯ ಮೇರೆಗೆ) ಕರ್ನಾಟಕ- ಮಹಾರಾಷ್ಟ್ರದ ಗಡಿ ಭಾಗದಲ್ಲಿರುವ ಅಥಣಿ ತಾಲ್ಲೂಕಿನ ಕೆಲವು ಹಳ್ಳಿಯ ಮಂದಿ ತಮ್ಮನ್ನು ಮಹಾರಾಷ್ಟ್ರಕ್ಕೆ ಸೇರಿಸಬೇಕೆನ್ನುವ ಮನವಿ

ಪತ್ರವನ್ನು ಕರ್ನಾಟಕ ಸರ್ಕಾರಕ್ಕೆ ನೀಡಿದ್ದಾರೆ. ಕಾರಣ ಈ ಹಳ್ಳಿಗಳಿಗೆ ಕನಿಷ್ಠ ಮೂಲಭೂತ ಸೌಕರ್ಯಗಳಾದ ರಸ್ತೆ, ನೀರು, ಶಾಲೆ, ಆಸ್ಪತ್ರೆ ಮೊದಲಾದವನ್ನು ಕರ್ನಾಟಕ ಸರ್ಕಾರವು ಇಂದಿಗೂ ಒದಗಿಸಿಲ್ಲ. ಪರಿಣಾಮವಾಗಿ ಇವರು ಭಾಷೆ ಮತ್ತು ಬದುಕುಗಳ ಆಯ್ಕೆಯ ವಿಚಾರದಲ್ಲಿ ಸಹಜವಾಗಿಯೇ ಬದುಕನ್ನು ಮೊದಲ ಆಯ್ಕೆಯನ್ನಾಗಿ ಮಾಡಿಕೊಳ್ಳುವುದರಿಂದ ಅಲ್ಲಿ ಕನ್ನಡ ಭಾಷೆ ಹಿಂದಕ್ಕೆ ಸರಿಯುತ್ತದೆ. ಇದು ಅವರ ಕನ್ನಡ ಪರವಾದ ನಿರಭಿಮಾನದ ದ್ಯೋತಕ ಎಂದರೆ ಅದು ಉಡಾಫೆಯ ಮಾತಾಗುತ್ತದೆ, ಅಷ್ಟೆ.

ಹೀಗೆ ಕಳೆದ ಐವತ್ತು ವರ್ಷಗಳಿಂದ ನಮ್ಮ ಸರ್ಕಾರಗಳು ಪ್ರಕಟಿಸುತ್ತಾ ಬಂದ ನಗರ ಕೇಂದ್ರಿತ ಅಭಿವೃದ್ಧಿ ಚಿಂತನೆಗಳು ಇಂದಿನ ಜಾಗತೀಕರಣದ ಸನ್ನಿವೇಶದಲ್ಲಿ ಮತ್ತಷ್ಟು ಗರಿಗೆದರಿಕೊಂಡು ಕಂಪ್ಯೂಟರ್, ಐಟಿ, ಇಂಗ್ಲಿಷ್ ಮೊದಲಾದ ಕಲ್ಪನೆಗಳ ಮೂಲಕ ಅಮೆರಿಕೀಕರಣಕ್ಕೆ ಈಡಾಗುತ್ತಾ ರೈತರ ಆತ್ಮಹತ್ಯೆಗೂ ಕಾರಣವಾಗುತ್ತಿದೆ.

**೪. ಕನ್ನಡಿಗರಿಂದಲೇ ಕನ್ನಡ ಮಾಧ್ಯಮ ಯಾಕೆ ಅನುಷ್ಠಾನವಾಗುತ್ತಿಲ್ಲ**

ಕನ್ನಡಿಗರು, ಭಾರತೀಯರು ಬ್ರಿಟಿಷರ ಗುಲಾಮಗಿರಿಯಲ್ಲಿ ಇನ್ನೂರು ವರ್ಷಗಳ ಕಾಲ ಬದುಕು ನಡೆಸಿದ್ದಾರೆ. ಅದರ ಪ್ರಭಾವ ೧೯೪೭ ಆಗಸ್ಟ್ ೧೫ಕ್ಕೆ ಕೊನೆಗೊಳ್ಳಬೇಕು ಎಂದರೆ ಅದು ಸಾಧ್ಯವೂ ಅಲ್ಲ. ಆದ್ದರಿಂದಲೇ ಭಾರತ ತನ್ನ ಸ್ವಾತಂತ್ರ್ಯೋತ್ತರ ಬದುಕಿನಲ್ಲಿಯೂ ಮತ್ತೊಂದು ವಿಧವಾದ (ನವ) ವಸಾಹತು ಶಾಹಿಗೆ ಒಳಗಾಗಿರುವುದು. ಹೀಗಿರುವಾಗ ಇಂಗ್ಲಿಷ್ ವ್ಯಾಮೋಹ ಕನ್ನಡಿಗರಿಂದ ಬಿಡಿಸಲಾರದ ಅಂಟಾಗಿದೆ.

ಭಾರತವು ಸಾವಿರಾರು ವರ್ಷಗಳಿಂದ ಭಾಷಿಕವಾಗಿ, ಧಾರ್ಮಿಕವಾಗಿ, ಸಾಮಾಜಿಕವಾಗಿ ಶ್ರೇಣೀಕೃತ ವ್ಯವಸ್ಥೆಯನ್ನು ಪೋಷಿಸಿಕೊಂಡು ಬಂದಿದೆ. ಇದರ ಭಾಗವಾದ ಸಂಸ್ಕೃತಕ್ಕೆ ಅಲ್ಲಿ ಆರ್ಥಿಕ ಮೌಲ್ಯವೂ ದಕ್ಕಿದೆ. ಇದರೊಂದಿಗೆ ಸಾಮಾಜಿಕ, ಸಾಂಸ್ಕೃತಿಕ ಪ್ರತಿಷ್ಠೆಗಳೂ ಸೇರಿ ಅದರ ಎತ್ತರವೇ ಬೇರೆಯಾಗಿದೆ. ಇದರಿಂದ ವಂಚಿತರಾದ ಶ್ರಮ ಸಂಸ್ಕೃತಿಯ ಜನ ಸಹಜವಾಗಿಯೇ ಅದನ್ನು ಹಿಂಬಾಲಿಸಿ ಸೋತಿದ್ದಾರೆ. ಇದರ ಬಗ್ಗೆ ಇನ್ನೂ ಹೆಚ್ಚಿನ ಪ್ರಸ್ತಾಪವನ್ನು ಇಲ್ಲಿ ಮಾಡುವುದಿಲ್ಲ.

ಒಟ್ಟಾರೆ ಅಂದಿನ ಸಂಸ್ಕೃತದ ಸ್ಥಾನವನ್ನು ಇಂದು ಇಂಗ್ಲಿಷ್ ಅಲಂಕರಿಸಿದೆ. ಆದರೆ ಇದರ ಕಲಿಕೆಗೆ ಸಾಮಾಜಿಕ ಹಾಗೂ ಧಾರ್ಮಿಕವಾದ ನಿರ್ಬಂಧಗಳು ಇಲ್ಲ. ಆದರೆ ಆರ್ಥಿಕವಾದ ಬಲ ಬೇಕು ಅಷ್ಟೆ. ಇದನ್ನು ಕಲಿತವರಿಗೂ ನಮ್ಮ ಸಮಾಜದಲ್ಲಿ ಹುಸಿ ಪ್ರತಿಷ್ಠೆ ದಕ್ಕುತ್ತಿದೆ. ಖಾಸಗೀಕರಣ ಮತ್ತು ವ್ಯಾಪಾರೀಕರಣಗಳಿಗೆ ತೀವ್ರವಾಗಿ ಒಳಗಾಗುತ್ತಿರುವ ನಮ್ಮ ಉದ್ಯಮಗಳ ಕ್ಷೇತ್ರದಲ್ಲಿಯೂ ಇಂಗ್ಲಿಷಿಗೆ ಮೊದಲ ದರ್ಜೆ ಸ್ಥಾನ ಗಿಟ್ಟುತ್ತಿದೆ. ಆದ್ದರಿಂದ ಸಾಮಾಜಿಕವಾಗಿ ತುಳಿತಕ್ಕೊಳಗಾದ ಜನರು ಸಹ ಆರ್ಥಿಕ ಸಂಕಷ್ಟಗಳಿಗಾಗಿಯಾದರೂ ಇಂಗ್ಲಿಷನ್ನು ಅಪ್ಪಿಕೊಳ್ಳುವತ್ತ ಹೆಜ್ಜೆಗಳನ್ನು ಹಾಕುತ್ತಿದ್ದಾರೆ. ಇಲ್ಲಿ ಕನ್ನಡಾಭಿಮಾನವೆಂಬ ಮಾತುಗಳು ಕಿವಿಗೆ ಕೇಳಿಸಿದರೂ ಅದು ಮನಸ್ಸಿಗೆ ತಟ್ಟುತ್ತಿಲ್ಲವಾಗಿದೆ.

ಹೀಗೆ ಸಾಮಾಜಿಕವಾಗಿ, ಪಾರಂಪರಿಕವಾಗಿ ಚಲನೆಯನ್ನು ಕಾಣದ ಜನವರ್ಗವೇ ಇಲ್ಲಿ ದೊಡ್ಡ ಸಂಖ್ಯೆಯಲ್ಲಿರುವಾಗ ವೈಜ್ಞಾನಿಕ ಆವಿಷ್ಕಾರವಾದ ಕನ್ನಡ ಮಾಧ್ಯಮದ ಅನುಷ್ಠಾನದ ಪ್ರಶ್ನೆ ಕಷ್ಟಸಾಧ್ಯವಾಗುತ್ತಿದೆ.

**೫. ಕನ್ನಡ ಭಾಷೆಯು ಸಾಹಿತ್ಯದ ವಲಯ ದಿಂದಾಚೆಗೆ ಬೆಳೆಯುತ್ತಿಲ್ಲ :**

ಕನ್ನಡವೆಂದರೆ ಕನ್ನಡ ಭಾಷೆ ಮತ್ತು ಕನ್ನಡ ಸಾಹಿತ್ಯ ಎಂಬ ಸೀಮಿತ ತಿಳುವಳಿಕೆ ಅನೇಕ ಪ್ರಜ್ಞಾವಂತರಲ್ಲಿಯೂ ಇದೆ. ಆದ್ದರಿಂದಲೇ ಕನ್ನಡ ಭಾಷೆ ಕನ್ನಡ ಸಾಹಿತ್ಯದ ವಲಯದಲ್ಲಿ ಪಡೆಯುತ್ತಿರುವ ಬೆಳವಣಿಗೆಯ ತೀವ್ರತೆಯನ್ನು ಇತರ ಜ್ಞಾನ ಶಾಖೆಗಳ ವಲಯದಲ್ಲಿ ಪಡೆಯಲಾಗುತ್ತಿಲ್ಲ. ಅಲ್ಲಿ ಜ್ಞಾನವೆಂದರೆ ಇಂಗ್ಲಿಷ್ ಎಂಬ ಭ್ರಮೆಯೂ ಗಾಢವಾಗಿಯೇ ಇದೆ. ಇದರೊಂದಿಗೆ ಉನ್ನತ ವಿಚಾರಗಳು ಇಂಗ್ಲಿಷ್‌ನಲ್ಲಿ ಮಾತ್ರ ಲಭ್ಯವಿದ್ದು ಅವುಗಳನ್ನು ಕನ್ನಡದಲ್ಲಿ ಹೇಳಲು ಸಾಧ್ಯವಿಲ್ಲವಾಗಿದೆ ಎಂಬ ಗಿಳಿ ಪಾಠಗಳೂ ಅನೇಕ ವಿದ್ವಾಂಸರಿಂದ ಕೇಳಿಬರುತ್ತಲೇ ಇವೆ. ಇದು ಆಂಶಿಕವಾಗಿ ಸತ್ಯವೂ ಇರಬಹುದು. ಆದರೆ ಇಡೀ ಜಗತ್ತಿನ ಬೇರೆ ಬೇರೆ ದೇಶಗಳ ಸಂದರ್ಭದಲ್ಲಿ ಜ್ಞಾನವೆಲ್ಲವೂ ಇಂಗ್ಲಿಷ್ ಭಾಷೆಯ ಮೂಲಕವೇ ಉತ್ಪನ್ನಗೊಳ್ಳುತ್ತಿದೆಯೇ ? ಜಪಾನ್, ಜರ್ಮನಿ, ಚೈನಾ ಮೊದಲಾದ ದೇಶಗಳೂ ಇದರಿಂದ ಹೊರತಾಗಿಲ್ಲವೇ ? ವಿದ್ವಾಂಸರೇ ಇದನ್ನು ವಿವೇಚಿಸಿಕೊಳ್ಳಬೇಕು.

ಇನ್ನೂ ಒಂದು ಮಾತು ನಮ್ಮ ನಡುವೆ ಪ್ರಚಲಿತದಲ್ಲಿದೆ. ಅದೆಂದರೆ ಭೌತಶಾಸ್ತ್ರ, ಎಂಜಿನಿಯರಿಂಗ್, ವೈದ್ಯಕೀಯ ಮೊದಲಾದ ಶಾಸ್ತ್ರಗಳನ್ನು ಕನ್ನಡದಲ್ಲಿ ಹೇಳಲು ಸಹಾಯಕ ಸಾಮಗ್ರಿಗಳ ಕೊರತೆ ಬಹಳಷ್ಟು ಇದೆ ಎಂಬುದು. ಇದನ್ನು ಅನೇಕ ತಜ್ಞರು ಮತ್ತು ವಿಶ್ವವಿದ್ಯಾಲಯ, ಕಾಲೇಜುಗಳ ಅಧ್ಯಾಪಕರು ಮತ್ತು ಪ್ರಾಧ್ಯಾಪಕರು ಇಂದಿಗೂ ಹೇಳುತ್ತಲೇ ಬಂದಿದ್ದಾರೆ. ಇದು ಸರಿ- ಆದರೆ ಈ ಕೊರತೆಯನ್ನು ತುಂಬಬೇಕಾದವರು ಯಾರು ಅಥವಾ ಇವರಿಗೆ ಬೇಕಾದ ಕನ್ನಡ ಪಠ್ಯಗಳನ್ನು ಯಾರು ರಚಿಸಿಕೊಡಬೇಕು ? ಕಾರ್ಖಾನೆಯಲ್ಲಿರುವ ಕಾರ್ಮಿಕರೇ ಅಥವಾ ಕೆಸರಿನಲ್ಲಿ ದುಡಿಯುತ್ತಿರುವ ರೈತರೇ ? ಯುಜಿಸಿ ಮೊದಲಾದ ವೇತನವನ್ನು ಪಡೆಯುತ್ತಿರುವ ಅಧ್ಯಾಪಕರೇ ಇದಕ್ಕೆ ಉತ್ತರಿಸಬೇಕು.

ಹೀಗೆ ವಿಭಿನ್ನ ಜ್ಞಾನ ಶಾಖೆಗಳಲ್ಲಿ ದುಡಿಯುತ್ತಿರುವ ಪ್ರಜ್ಞಾವಂತ ಜನತೆ ದೇಶ ಭಾಷೆಯನ್ನು ತಮ್ಮ ಜ್ಞಾನದ ಅಭಿವೃದ್ಧಿಗೆ ಸಜ್ಜುಗೊಳಿಸಿದ್ದೇ ಆದರೆ ಕನ್ನಡದ ಮೂಲಕ ಜಗತ್ತಿನ ಬೌದ್ಧಿಕತೆಯು ಕರ್ನಾಟಕಕ್ಕೆ ಇಳಿಯುತ್ತದೆ. ಆಗ ಕರ್ನಾಟಕವೇ ಮಾದರಿ ಕನ್ನಡಕ್ಕೆ ವೇದಿಕೆಯಾಗುತ್ತದೆ. ಅಲ್ಲಿ ಐದು ಕೋಟಿ ಜನಸಂಖ್ಯೆ ಯೆಂಬುದು ಸಮಸ್ಯೆ ಎನ್ನಿಸುವುದಿಲ್ಲ; ಸಂಪನ್ಮೂಲ ಎನ್ನಿಸುತ್ತದೆ.

ಹೀಗೆ ಕನ್ನಡ-ಕರ್ನಾಟಕದ ಸಮಕಾಲೀನ ಸಮಸ್ಯೆಗಳು ಹಲವು. ಅವುಗಳ ಪಟ್ಟಿ ಪುಟಗಳನ್ನು ದಾಟುತ್ತದೆ, ಚರ್ಚೆ ಪುಸ್ತಕಗಳನ್ನು ಮೀರುತ್ತದೆ. ಆದರೂ ಈ ನಿಟ್ಟಿನಲ್ಲಿ ಒಂದು ಕ್ಷ-ಕಿರಣವಷ್ಟೆ ಇಲ್ಲಿಯ ಮಾತುಗಳು.

ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ
ಕನ್ನಡ ಅಧ್ಯಾಪಕ, ಸ್ನಾತಕೋತ್ತರ ಕೇಂದ್ರ
ಬೆಂಗಳೂರು ವಿಶ್ವವಿದ್ಯಾಲಯ
ಕೋಲಾರ-೫೬೩ ೧೦೧

## ದೇವರೆಲ್ಲ ಮನುಷ್ಯರಾದ ದಿನ

ದೇವರೆಲ್ಲ ಮನುಷ್ಯರಾದ ದಿನ
ಈ ಜಗತ್ತು ಹೊಸ ಹಗಲನ್ನು ಹಡೆಯುತ್ತದೆ.

ಮಂತ್ರಗಳ ಮೈಥುನದಿ ನಾರುವ
ಗಂಗೆ ತುಂಗೆಯರು ಪಾಪ ತೊಳಕೊಂಡಾಗ
ಸೀತೆ ರಾವಣರು ಸೋದರತೆಯ
ಪ್ರೀತಿಯಲ್ಲಿ ಆಟವಾಡುತ್ತಾರೆ.

ಶೋಕ ಕಾವ್ಯಗಳ ಸೃಷ್ಟಿಸಿದ ಶ್ಲೋಕಗಳು
ಅಳುವ ಕೂಸಿಗೆ ರಮಿಸುವ ಜೋಗುಳವಾದಾಗ
ಅಯೋಧ್ಯೆ, ಮಥುರಾಗಳ ಮೇಲೆ
ಮಮತೆಯ ಹಿಮಾಲಯ ಬೆಳೆಯುತ್ತದೆ.

ಕಾವಿಗಳ ಎದೆಯೊಳಗಿನ ಕೋವಿಗಳು
ಆತ್ಮಹತ್ಯೆಗೈದುಕೊಂಡ ಸಂಜೆ
ಕಮಂಡಲದ ಗೂಡೊಳಗೆ ಕ್ರೌಂಚ ಮಿಥುನ
ಪ್ರೇಮಕಾವ್ಯ ಭಾಷ್ಯ ಬರೆಯುತ್ತದೆ.

ದೇವರೆಲ್ಲ ಮನುಷ್ಯರಾದ ದಿನವೇ
ಈ ಜಗತ್ತು ಹೊಸ ಬದುಕನ್ನು ಬದುಕುತ್ತದೆ.



ಬಿ. ಪೀರ್‌ಬಾಷ
ಹೂವಿನ ಹಡಗಲಿ

# ಪ್ರತಿಭಟನೆ

ರೇಣುಕಾ ಮಂಜುನಾಥ್



ಇನ್ನೂ ಕಣ್ಣೆದುರಿನಲ್ಲೇ ಇದೆ, ಆ ದೃಶ್ಯ ! ನಾಳೆ ಮೊದಲ ಸಂಬಳ ತಂದು, ಮನೆಯವರಿಗೆಲ್ಲಾ ಸಿಹಿ ಹಂಚುವಳೆಂದು ಕಾಯುತ್ತಿದ್ದ ಇಡೀ ಸಂಸಾರವನ್ನು ಧಿಕ್ಕರಿಸಿ, ಹಠಕ್ಕೆ ಬಿದ್ದು ಕಿಂದರ ಜೋಗಿಯ ಹಿಂದೆ ಹೊರಟ ಮಕ್ಕಳಂತೆ ಹೋಗೇ ಬಿಟ್ಟಿದ್ದಳು; ಅವನ ಹಿಂದೆ ! ತನ್ನ ಬದುಕಿನ ಬೇರನ್ನೇ ಕಿತ್ತು, ಅವನೊಯ್ಯುವ ಲೋಕದಲ್ಲಿ ಹೊಸದಾಗಿ ನೆಟ್ಟು, ಬದುಕ ಸಂಭ್ರಮ ಕಾಣುವ ಹುಚ್ಚಿನೊಂದಿಗೆ ಹೋದ ಹಿರಿಯ ಮಗಳಲ್ಲವೇ, ಇವಳು ? ನಮ್ಮೆಲ್ಲರಿಗೂ ಹಿರಿಯ ಅಕ್ಕ !

ಏಕೊ.... ಏನೋ, ಅಂದಿನ ದಿನಗಳನ್ನು ನೆನೆಸಿಕೊಂಡರೆ, ಗಿರಿಜಳಿಗೆ ಇಂದೂ ಸಹ ಅದೇ ಆತಂಕ, ಗಾಬರಿ, ಕಳವಳ, ವಿಷಣ್ಣತೆಗಳು ಒಟ್ಟಿಗೇ ಧುತ್ತೆಂದು ಮೈಯ್ಯಾವರಿಸಿಕೊಂಡು, ಚೇತರಿಸಿಕೊಳ್ಳಲು ಕೆಲ ಕ್ಷಣಗಳೇ ಹಿಡಿಯುತ್ತವೆ.

ಪದವಿ ಕಾಲೇಜಿನಲ್ಲಿ, ಇಡೀ ಕಾಲೇಜಿಗೆ ಮೊದಲು ಬಂದಳೆಂದು ಹಿಗ್ಗಿ, ಅಪ್ಪಾಜಿ ಅವಳನ್ನು ಮೈಸೂರಿನ ಸ್ನಾತಕೋತ್ತರ ಪದವಿಗೆ ಸೇರಿಸಿದ್ದರು. ಹಿರಿಯ ಮಗ ಓದಿನಲ್ಲಿ ಯಾವಾಗಲೂ ನಿರಾಶೆಗೊಳಿಸಿದ್ದರಿಂದ, ಓದಿನಲ್ಲಿ ಮಹಾ ಜಾಣೆಯಾಗಿದ್ದ ಇವಳನ್ನು, ಅಪ್ಪಾಜಿ-ಅಮ್ಮ, 'ಪರಿಪೂರ್ಣ', ಎಂದೇ ಭ್ರಮಿಸಿದ್ದರು ! ತುಂಬಿದ ಸಂಸಾರ: ನಾಲ್ಕು ತಂಗಿಯರು, ಒಬ್ಬ ಅಣ್ಣ, ಒಬ್ಬ ತಮ್ಮ. ಅಪ್ಪಾಜಿಯೊಬ್ಬರದೇ ದುಡಿಮೆ, ಜೊತೆಗೆ ದುರ್ಬಲ ಮನಸ್ಸಿನ, ದೂರ ದೃಷ್ಟಿಯಿಲ್ಲದ ಮಮತಾಮಯಿ ತಾಯಿ. ತಂಗಿಯರಲ್ಲೇ ಹಿರಿಯಳಾದ ಗಿರಿಜೆಗೆ, ಮಾನಸ ಗಂಗೋತ್ರಿಯಿಂದ ಪದವಿ ಹಿಡಿದು ಬಂದ ಅವಳಕ್ಕನ ಪರಿ ಈಗಲೂ ನೆನಪಿದೆ.

ಭೌತಶಾಸ್ತ್ರದಲ್ಲಿ ಪ್ರವೀಣೆಯಾಗಿ ಬರುವ ಮಗಳಿಗೆ, ಅಪ್ಪಾಜಿ ಆಗಲೇ 'ಭಾಭಾ ಅಟಾಮಿಕ್ ರಿಸರ್ಚ್ ಸೆಂಟರ್'ನಿಂದ ಅರ್ಜಿಗಳನ್ನು ತರಿಸಿದ್ದರು. ಅವರಿಗೆ ಅವಳನ್ನೊಬ್ಬ ವಿಜ್ಞಾನಿಯನ್ನಾಗಿ ಕಾಣುವ ಆಸೆ ! ಎಷ್ಟಾದರೂ ಖರ್ಚಾಗಲಿ, ತನ್ನ ಮಗಳು ವಿಜ್ಞಾನಿಯಾಗಲೇಬೇಕೆಂಬ ಕನಸು ಅವರದು ! ಅಮ್ಮ ಹಾಲೊಬ್ಬಟ್ಟು ಮಾಡಿ ಕಾದರು. ಊರಿನ ಶಾಲೆ, ಕಾಲೇಜುಗಳಿಂದ ಹೊರಗೆ ಹೋಗಿರದ ತಮ್ಮ-ತಂಗಿಯರಿಗೆ ಮೈಸೂರಿನಿಂದ ಎಂ. ಎಸ್ಸಿ. ಮಾಡಿ ಬರುವ ಅಕ್ಕನ ಬಗ್ಗೆ ಹೆಮ್ಮೆ.

ಅವಳು ಅಂದು ಬಂದಿಳಿದಾಗ, ಜೊತೆಯಲ್ಲಿ ಆ..ಅವನೂ ಇದ್ದನಲ್ಲವೆ ? ನೆನಪಿಸಿಕೊಂಡಳು ಗಿರಿಜೆ. ದೂರದ ಪರಿಚಯದವನಿರಬಹುದು, ಆದರೆ ಅದನ್ನೇ ನೆಪವಾಗಿರಿಸಿಕೊಂಡು ಇವಳ ಜೊತೆ ಬಂದಿಳಿದನಲ್ಲಾ ! ಪದವೀಧರ, ನಿರುದ್ಯೋಗಿ. ಎಂದೂ, ಎಲ್ಲೂ ಮೈ ಬಗ್ಗಿಸುವ, ಬೆವರಿಳಿಸುವ ಸಾಹಸಕ್ಕೆ ಕೈ ಹಾಕದವನು. ಯಾರ ಬಗ್ಗೆಯೂ ಆಶ್ಚರ್ಯ, ಪ್ರಶಂಸೆಗಳನ್ನು ವ್ಯಕ್ತಪಡಿಸುವುದೇ ಗೊತ್ತಿಲ್ಲದವನು. ತನ್ನದೇ ವಿನ್ಯಾಸದಲ್ಲಿ ಗಡ್ಡ-ಮೀಸೆ ಬೆಳೆಸಿ, ತನ್ನನುಕೂಲಕ್ಕೆ ತಕ್ಕ ಹಾಗೆ ತತ್ವ ಬೋಧಿಸುತ್ತಿದ್ದವನು. ಅವನ ದುಡಿಯಲಾರದ ಸೋಮಾರಿತನಕ್ಕೆ ಬೇಕಾದ ರೀತಿಯಲ್ಲಿ ಅವಳನ್ನುಪಯೋಗಿಸಿಕೊಂಡು, ಹೊರ ಪ್ರಪಂಚದ ಬಗ್ಗೆ ಮುಗ್ಧಳಾದ ಅವಳಿಗೆ, ಅವಳ ಮಿದುಳಿಗೆ ಭೌತಶಾಸ್ತ್ರಬಿಟ್ಟರೆ, ಇವನ ಏಲು ತತ್ವಗಳನ್ನೇ ತುಂಬಿದ್ದ. ಬಂದ ಮಾರನೆಯ ದಿನವೇ, ಕಲಿತ ಭೌತಶಾಸ್ತ್ರವನ್ನು ಪಕ್ಕಕ್ಕಿರಿಸಿ, ಅಪ್ಪಾಜಿಯ ಮುಂದೆ ಅವನಿಂದ ಉಪದೇಶಿಸಲ್ಪಟ್ಟ ಗಿಳಿಪಾಠವನ್ನೊಪ್ಪಿಸಿದಳು. ''ಅಪ್ಪಾಜಿ, ನಾವಿಬ್ಬರೂ ಮದುವೆಯಾಗುವುದು. ಮುಂದೆ ಓದುವ ವಿಷಯ ಬಿಡಿ. ತಂದೆಯಾಗಿ ನನ್ನ ಮದುವೆ ಮಾಡುವುದು ನಿಮ್ಮ ಕರ್ತವ್ಯ, ಮದುವೆ ಮಾಡಿಕೊಡಿ'' ಎಂದುಬಿಟ್ಟಳು. ಇಡೀ ಸಂಸಾರ ದಿಗ್ಭ್ರಮೆಯಾಗಿತ್ತು !

ಅಂದಿನ ಮನೆಯ ಪರಿಸ್ಥಿತಿ ನೆನೆಸಿಕೊಂಡರೆ ಗಿರಿಜೆಗೆ ಯಾರ ಮೇಲೆ ಸಿಟ್ಟಾಗಬೇಕೆಂದೇ ತಿಳಿಯುತ್ತಿಲ್ಲ. ಕರ್ತವ್ಯ-ನಿಷ್ಠೆಗೆ ಬದ್ಧರಾದ ಅಪ್ಪಾಜಿಗೆ ವ್ಯವಹಾರ ಜ್ಞಾನ ಅಷ್ಟಕ್ಕಷ್ಟೆ. ಅಣ್ಣನೆಷ್ಟು ನಿರುಪಯೋಗಿ ! ಹಿರಿಯ ಮಗ, ಇಪ್ಪತ್ಮೂರು ವರ್ಷಕ್ಕೆ ಮದುವೆಯಾಗಿಬಿಟ್ಟ ! ಮನೆಯ ಮುಂದೆ ನೀರ ಹಿಡಿಯಲು ಬರುತ್ತಿದ್ದ ಪಕ್ಕದ ಮನೆ ಹುಡುಗಿಯನ್ನು ಹಠ ಹಿಡಿದು ಮದುವೆಯಾಗಿದ್ದ, ಅದೂ ಅಪ್ಪಾಜಿಯ ನಿವೃತ್ತಿ ಹಣದಲ್ಲಿ ! ಇನ್ನು ಇವಳ ಈ ಅನಿರೀಕ್ಷಿತ ವರ್ತನೆ ತಮ್ಮ-ತಂಗಿಯರ ಭವಿಷ್ಯವನ್ನು ಎಂತಹ ಅನಿರ್ದಿಷ್ಟತೆಗೆ ಒಯ್ದಿತ್ತು ! ಇಂತಹ ಪರಿಸ್ಥಿತಿಯನ್ನು ನಿರ್ಲಕ್ಷಿಸಿ, ಅಪ್ಪಾಜಿಗೆ ಕರ್ತವ್ಯದ ಪಾಠ ಹೇಳುತ್ತಿದ್ದ ಅವಳಕ್ಕನ ಅವಿವೇಕ, ಸ್ವಾರ್ಥದ ಬಗ್ಗೆ ಗಿರಿಜೆಗೆ ಎಂತಹ ಜುಗುಪ್ಸೆಯುಂಟಾಗಿತ್ತು !

ಕಾಲೇಜಿನ ಉಪನ್ಯಾಸಕಿ ಹುದ್ದೆ ಸಿಕ್ಕ ಮೊದಲ ತಿಂಗಳೇ, ಸಂಬಳ ಬರುವ ಹಿಂದಿನ ದಿನ, ಅವನ ಹಿಂದೆ ಹೋಗೇಬಿಟ್ಟಳು. ಇಡೀ ಸಮಾಜಕ್ಕೆ ತನ್ನ ವರ್ತನೆಯಿಂದ ಅಪ್ಪಾಜಿಯ ಆರ್ಥಿಕ ಪರಿಸ್ಥಿತಿ ಅಸಹಾಯಕತೆಗಳನ್ನು ಬಹಿರಂಗಪಡಿಸಿದ್ದಲ್ಲದೆ, ಒಡಹುಟ್ಟಿದವರ ಭವಿಷ್ಯಕ್ಕೆ ಮಂಕು ಬಳಿದಿದ್ದಳು. ಆ ಗಂಡೆಂಬ ಗಂಡಸು, ಅವಳ ಮೊದಲ ಸಂಬಳದಲ್ಲಿ ದೇವಸ್ಥಾನದಲ್ಲಿ ಮದುವೆ ಮಾಡಿಕೊಂಡು, ವಠಾರದಲ್ಲಿ ಒಂಟಿ ಕೋಣೆಯ ಮನೆ ಮಾಡಿ, ಗಂಡನೆಂಬ ಪಟ್ಟ ಹೊತ್ತು, ಅವಳನ್ನು ದುಡಿಯಲು ಹಚ್ಚಿ, ತಾನು ಅವಳ ಮೇಸ್ತ್ರಿಯಾಗಿ ಮನೆಯಲ್ಲಿ ಕುಳಿತ.

ಪರಿಸ್ಥಿತಿಯನ್ನು ಪೂರ್ತಿಯಾಗಿ ಅವಲೋಕಿಸಿದ ಗಿರಿಜೆ, ಅಂದು ಸೆರಗು ಸಿಕ್ಕಿಸಿಕೊಂಡು ಮನೆಯ ಜವಾಬ್ದಾರಿ ಹೊತ್ತವಳು, ಅವಳಕ್ಕ ಸೃಷ್ಟಿಸಿದ್ದ ಸಿಕ್ಕನ್ನು ಇಂದಿಗೂ ಬಿಡಿಸುತ್ತಲೇ ಇದ್ದಾಳೆ, ಅಲ್ಲಿಂದ ಬಿಡುಗಡೆಗೂ ಸೆಣಸುತ್ತಿದ್ದಾಳೆ.

ಎಲ್ಲರಿಗೂ ಕೆಲಸ, ತನಗೊಂದು ನೌಕರಿಯ ಜೊತೆಗೆ, ತಾಯಿಯ ಮಾನಸಿಕ ಅಸ್ವಸ್ಥತೆ, ಅಣ್ಣನ ಅರ್ಥವಿಲ್ಲದ ನಡೆವಳಿಕೆ, ತಂದೆಯ ಹತಾಶ ಪರಿಸ್ಥಿತಿ ಇವುಗಳ ಮಧ್ಯೆ ಮನೆಯನ್ನು ಈ ಹದಕ್ಕೆ ತರಲು ಸಾಕಷ್ಟು ಶ್ರಮಿಸಿದ್ದಳು. ಆ ಶ್ರಮ, ತೊಳಲಾಟಗಳು ದಿಟ್ಟತನ, ಧೈರ್ಯದ ಜೊತೆಗೆ, ಒರಟುತನವನ್ನೂ ಬಿಟ್ಟುಹೋಗಿದ್ದವು. ಮೃದು ಮನಸ್ಸಿನ ಮಧುರ ಭಾವನೆಗಳನ್ನು ಸುಟ್ಟುಹಾಕಿದ್ದವು. ಮಾನಸಿಕ ನೆಮ್ಮದಿಗೆ ಪುಸ್ತಕಗಳ ಮೊರೆ ಹೋಗಿದ್ದಳು.

ನೋಡೇ ನೋಡಿದಳು ಗಿರಿಜೆ, ಹಳೆಯ ನೆನಪುಗಳೊಂದಿಗೆ ಅವಳಕ್ಕನನ್ನೂ ! ಆರ್ಥಿಕವಾಗಿ, ಸಾಮಾಜಿಕವಾಗಿ, ಕೌಟುಂಬಿಕವಾಗಿ, ಪರಿಸ್ಥಿತಿಯನ್ನು ಹಾಳುಗೆಡವಿ ಹೋದ ಅವಳು, ಹದಕ್ಕೆ ತಂದಿದ್ದ ತೌರುಮನೆಗೆ ಮತ್ತೆ ಬಂದಿದ್ದಳೀಗ! 'ಅಕ್ಕ' ಎಂದರೆ ಅದೊಂದು ಭರವಸೆ, ಆಶ್ರಯ, ಆಶ್ವಾಸನೆ, ಅಭಯಗಳ ಪ್ರತೀಕ ಎಂಬುದು ಎಲ್ಲರ ಅನಿಸಿಕೆ. ಆದರೆ ತನಗೆ.... ? ಅದಿರಲಿ ಇವಳೇ ಆಗಲಿ.... ಏನಾಗಿದ್ದಾಳೆ ? ಸ್ನಾತಕೋತ್ತರ ಪದವೀಧರೆ, ಭೌತಶಾಸ್ತ್ರದ ಬೋಧಕಿ, ಬಯಸಿ ಬಯಸಿ ಮದುವೆಯಾದ ಗಂಡ ! ಇದೆಲ್ಲ ಅವಳ ಮುಖದಲ್ಲಿ, ನಡವಳಿಕೆಯಲ್ಲಿ ಎಲ್ಲಾದರೂ ಚಿಮ್ಮುತ್ತಿದೆಯೆ ? ಗಂಡನೆಂದರೆ ಗಡಗಡ ನಡುಗುವವಳು. ಅವನು ಹಾಕಿದ್ದೇ ಲಕ್ಷ್ಮಣರೇಖೆ. ಹೇಳಿದ್ದೇ ವೇದವಾಕ್ಯ. ಅವನ ಆದೇಶವೇ ಇವಳ ಕರ್ತವ್ಯ. ಸದಾ ದಪ್ಪನಾದ ವಿಮಲ್ ಸೀರೆ [illegible], ಓಡುವ

ಹಾಕುವಂತಿಲ್ಲ, ಕೇಳುವಂತೆಯೂ ಇಲ್ಲ, ಮನೆಗೆಲಸ ಪೂರ್ತಿಮಾಡಿ, ಅವನ ಕರವಸ್ತ್ರದಿಂದ ಮೊದಲ್ಗೊಂಡು ಎಲ್ಲವನ್ನೂ ಇಸ್ತ್ರಿ ಮಾಡಿ, ಸಣ್ಣ ಮನೆಯಾದ್ದರಿಂದ ಚಪ್ಪಲಿಗಳನ್ನು ಜೋಡಿಸಿಟ್ಟು, ಅಡುಗೆ ಮಾಡಿಟ್ಟು, ಬಸ್ಸಿಗೆ ಓಡಬೇಕು. ಪ್ರತಿಯೊಂದಕ್ಕೂ ಅವನದೇ ಆದ ನೀತಿ ಸಂಹಿತೆ. ಅವಳು ಜೋರಾಗಿ ನಗುವ ಹಾಗಿಲ್ಲ, ಎಂದೂ ತನ್ನ ವಿದ್ಯಾರ್ಹತೆ-ವೃತ್ತಿಯ ಬಗ್ಗೆ ಮಾತಾಡುವಂತಿಲ್ಲ. ಮಹಿಳಾ ಕಾರ್ಯಕ್ರಮ ನೋಡುವಂತಿಲ್ಲ. ಗೆಳತಿಯರೊಡನೆ ಸೇರುವಂತಿಲ್ಲ. ಬದಲಾದ ಪ್ರಿನ್ಸಿಪಾಲರ ಬಗ್ಗೆ ಹೇಳುವಂತಿಲ್ಲ. ಕೊನೆಗೆ 'ಲಂಕೇಶ್ ಪತ್ರಿಕೆ' ಓದುವಂತಿಲ್ಲ! ತಿಂಗಳ ಕೊನೆಗೆ ಪೂರ್ತಿ ಸಂಬಳ ತಂದು ಅವನ ಕೈಗಿಡಬೇಕು. ಅದರ ವಿತರಣೆಯೇ ಅವನ ತಿಂಗಳ ಪೂರ್ತಿ ಕಾಯಕ. ಅವನ ಅಣ್ಣಂದಿರ ಮಕ್ಕಳ, ಮೊಮ್ಮಕ್ಕಳ ಖರ್ಚು-ವೆಚ್ಚದಿಂದ ಮೊದಲ್ಗೊಂಡು, ವಠಾರದ ಮನೆಯ ಬಾಡಿಗೆ, ಕರೆಂಟು-ನೀರು-ಹಾಲು-ತರಕಾರಿ, ಊಟದ ವೆಚ್ಚಗಳ ಉಸ್ತುವಾರಿಗೆ, ವಿತರಣೆಗೆ ತನ್ನನ್ನೇ ಮುಡುಪಾಗಿಟ್ಟುಕೊಂಡ.

ಇವಳಿಗೇನೋ ಹೊಟ್ಟೆ, ಬಟ್ಟೆ, ಸೂರಿಗೆ ತೊಂದರೆಯಿಲ್ಲದಿರಬಹುದು, ಆದರೆ ನೆಮ್ಮದಿ ? ಹಗಲೂ ರಾತ್ರಿ ಏನಾದರೂ ನೆಪ ಹಿಡಿದು ಅವಳನ್ನು ಬೈಯುತ್ತಲೇ, ಅವಳ ಮೇಲೆ ಪ್ರಭುತ್ವ ಸಾಧಿಸಿ, ಗಂಡನ ಪಟ್ಟ ಉಳಿಸಿಕೊಳ್ಳುವ ಉಪಾಯ ಕಂಡುಕೊಂಡಿದ್ದ. 'You have to marry because you can't blame the government for everything' ಎಂಬ ಉಕ್ತಿ ಅವನನ್ನು ನೋಡಿದಾಗೆಲ್ಲ ಗಿರಿಜೆಗೆ ನೆನಪಾಗುತ್ತಿತ್ತು. 'ಸ್ವಾಭಿಮಾನ ಒತ್ತೆಯಿಟ್ಟು ಈ ರೀತಿ ಬದುಕಲು ನಾನಿವಳನ್ನು ಓದಿಸಬೇಕಿತ್ತೇನು ?' ಎಂದು ಅಪ್ಪಾಜಿ ಅವಳ ವಿಷಯಕ್ಕೆ ಕೈಚೆಲ್ಲಿ ಕುಳಿತರೆ, 'ಈ ಘನಂದಾರಿ ಬದುಕಿಗಾಗಿ ಏನೆಲ್ಲಾ ಮಾಡಿಹೋದಳು ?' ಎಂದು ಅವಳ ಬಗ್ಗೆ ಸಿಟ್ಟು-ಮರುಕ ಎರಡೂ ಬರುತ್ತಿತ್ತು ತನಗೆ.

ಸ್ವಂತಿಕೆ, ಸ್ವಾಭಿಮಾನಗಳನ್ನು ಮೈಗೂಡಿಸಿಕೊಂಡ ಗಿರಿಜೆಗೆ, ಮನೆಯಲ್ಲಿ ಯಾರಿಗಾದರೂ ಈ ರೀತಿ ಬದುಕು ಗೊಂದಲಮಯವಾದರೆ, ಅವರನ್ನು ಸರಿಪಡಿಸಬೇಕೆಂಬ ಒಂದು ರೀತಿಯ ಕಾಳಜಿ ಇತ್ತು. ತನ್ನಕ್ಕನನ್ನು ಸ್ವಲ್ಪವಾದರೂ ಎಚ್ಚರಿಸಿ, ಯೋಚಿಸುವಂತೆ ಮಾಡಬೇಕು. ಕಂಗೆಟ್ಟು, ಕಂಗಾಲಾದ ಅವಳ ಮುಖದಲ್ಲಿ ಲವಲವಿಕೆ ಬರಿಸಬೇಕು. ಜೊತೆಗೆ ಆ ಗಂಡೆಂಬ ಗಂಡಸಿಗೆ ಬುದ್ಧಿ ಬರುವಂತೆ ಮಾಡಬೇಕು ಎಂದೆಲ್ಲ ಯೋಚಿಸತೊಡಗಿದಳು.

ಆಗಾಗ ಬಾಯಿ ಬಿಡಿಸಿದರೆ, ತುಟಿಯೆಲ್ಲಾ ನಡುಗಿಸಿಕೊಂಡು, ಕಣ್ತುಂಬಾ ನೀರು ತುಂಬಿಕೊಂಡು, ಅವನು ಕೊಡುವ ಕಿರುಕುಳ, ಬೈಗುಳಗಳ ಬಗ್ಗೆ ಹೇಳುವಳು. ಅವನು ಎದುರಿಗೆ ಬಂದರೆ ಸಾಕು ನಾಯಿಕುನ್ನಿಯಂತಾಗುತ್ತಿದ್ದಳು. ಅವನು ಮಾತ್ರ ಅವಳು ಇಸ್ತ್ರಿ ಮಾಡಿದ ಬಟ್ಟೆಗಳನ್ನು ಹಾಕಿಕೊಂಡು, ಗಡ್ಡ ನೀವಿಕೊಂಡು, ಮರ್ಯಾದಸ್ಥನ ಮುಖವಾಡ ಹೊತ್ತು ತಿರುಗುತ್ತಿದ್ದ. ಗಿರಿಜೆಗೆ ಮೈಯ್ಯೆಲ್ಲಾ ಬೆಂಕಿಯಾಗುತ್ತಿತ್ತು. ಅವನನ್ನೆದುರಿಸುವ ಶಕ್ತಿ ಅವಳಲ್ಲೇ ಬರಬೇಕು. ಇದನ್ನೆಲ್ಲಾದರೂ ಇಂಜೆಕ್ಟ್ ಮಾಡಲು ಸಾಧ್ಯವೆ ? ಎಂದು ಯೋಚಿಸುವಳು.

ಒಮ್ಮೆ ಅವಳಕ್ಕನಿಗೆ ಹೇಳಿದ್ದಳು. ''ನೋಡು, ಭೌತಶಾಸ್ತ್ರವನ್ನು ಶಾಲೆಯಲ್ಲಿಯೇ ಇಟ್ಟು ಬಾ. ಬೇರೆ ಪುಸ್ತಕಗಳನ್ನು ಓದು. 'ಲಂಕೇಶ್ ಪತ್ರಿಕೆ' ಓದಲು ಬಿಡದಿದ್ದರೆ ನನ್ನ ಕಛೇರಿಗೆ ಬಂದು ಓದು. ಸಾಧ್ಯವಾದರೆ ಈ 'ವಚನ ಸಂಪುಟ' ತೆಗೆದುಕೊಂಡು ಹೋಗಿ ಓದು'' ಎಂದು ಕಪಾಟಿನಿಂದ ತೆಗೆದುಕೊಟ್ಟಿದ್ದಳು.

## ಸಾದರ ಸ್ವೀಕಾರ

**ಮೇಘಧ್ವನಿ** (ಕವನ ಸಂಕಲನ) *ಉಮೇಶ ತಿಮ್ಮಾಪುರ*
**ಪುಟ : ೫೬** **ಬೆಲೆ : ರೂ. ೪೦**
**ಸಿದ್ಧಗಂಗಾ ಪ್ರಕಾಶನ**, ಬಾಗಲಕೋಟ

**ಮದುವೆ** (ಹಾಸ್ಯ ಹನಿಗವನ ಸಂಕಲನ)
*ಸಂ.: ಕೋ. ಲ. ರಂಗನಾಥ ರಾವ್*
**ಪುಟ : ೯೬** **ಬೆಲೆ : ರೂ. ೩೫**
**ಗುರುರಾಜ ಪ್ರಕಾಶನ**, ಸಿ. ೨, ಸಿ.ಪಿ.ಡಬ್ಲ್ಯೂ.ಡಿ. ಕ್ವಾರ್ಟರ್ಸ್, ವಿಜಯನಗರ, ಬೆಂಗಳೂರು - ೪೦

**ಮರಗುದರೆ** (ಕವಿತೆ) *ತೆಲುಗು ಮೂಲ : ನಗ್ನಮುನಿ*
*ಅನು: ಗುರುಮೂರ್ತಿ ಪೆಂಡಕೂರು*
**ಪುಟ : ೪೮** **ಬೆಲೆ : ರೂ. ೩೦**
**ಯುವಕರ ಸಂಘ (ರಿ)**, ರಾಮನಗರ, ಹಗರಿಬೊಮ್ಮನಹಳ್ಳಿ-೫೮೩೨೧೨, ಬಳ್ಳಾರಿ ಜಿಲ್ಲೆ

**ಮಿಂಚು ಗುಡುಗು ಮಳೆ** (ಹನಿಗವನ ಸಂಕಲನ)
*ಉಪ್ಪುಂದ ಗಣೇಶ ವೈದ್ಯ*
**ಪುಟ : ೫೬** **ಬೆಲೆ : ರೂ. ೨೫**

**ಸ್ಕೂಲ್ ಡೈರಿ** (ವಿದ್ಯಾರ್ಥಿಗಳಿಗಾಗಿ ಮಾಹಿತಿ ಸಾಹಿತ್ಯ)
*ಬೇಂದ್ರೆ ಎನ್. ಮಂಜುನಾಥ*
**ಪುಟ : ೧೬೦** **ಬೆಲೆ : ರೂ. ೬೦**
*ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು*
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿಮಿಟೆಡ್**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೧

**ಕೈಗಾರಿಕೆಗಳಲ್ಲಿ ಉಗ್ರಾಣ ನಿರ್ವಹಣೆ** (ಲೇಖನ ಸಂಗ್ರಹ)
*ಜಿ. ರಾಮಚಂದ್ರ*
**ಪುಟ : ೧೪೪** **ಬೆಲೆ : ರೂ. ೬೦**
**ಸಹಸ್ರಮಾನ ಪ್ರಕಾಶನ**, ೭೨೫, ೯ನೇ ಅಡ್ಡರಸ್ತೆ, ೪ನೇ ಮುಖ್ಯರಸ್ತೆ, ೩ನೇ ಹಂತ, ಬಿ.ಇ.ಎಲ್. ಬಡಾವಣೆ, ವಿದ್ಯಾರಣ್ಯಪುರ, ಬೆಂಗಳೂರು-೯೭

**ಶಿರವೇ ಬ್ರಹ್ಮಾಂಡ ಜಗವೇ ಪಿಂಡಾಂಡ** (ಲೇಖನ ಸಂಕಲನ) *ಸದಾಶಿವಯೋಗಿ ಹಂಪಿ*
**ಪುಟ : ೧೧೩** **ಬೆಲೆ : ರೂ. ೮೦**
**ಗುರುಕುಲ ಪ್ರಕಾಶನ**, ಗುರುಕುಲಾನಂದಾಶ್ರಮ, ಕೆ. ಆರ್. ಬಡಾವಣೆ, ತಿಪಟೂರು-೫೭೨೨೦೨

**ಕರ್ನಾಟಕ ಆಡಳಿತ ಸುಧಾರಣಾ ಆಯೋಗ ವರದಿಯ ಒಂದು ಒಳನೋಟ ಮತ್ತು ಅದರ ಭೀಕರ ಪರಿಣಾಮುಗಳು** ಆರ್. ಮಾನಸಯ್ಯ
**ಪುಟ : ೧೨** **ಬೆಲೆ : ರೂ. ೨.೫೦**
**ಕರ್ನಾಟಕ ರಾಜ್ಯ ಸರಕಾರಿ ನೌಕರರ ಸಂಘ**, ರಾಯಚೂರು

ಕೆಲದಿನಗಳ ಮೇಲೆ ಗಿರಿಜೆಗೆ ಅವಳಕ್ಕ ಸಿಕ್ಕಿದ್ದಳು. ಮುಖ ನಿರಾಳವಾಗಿತ್ತು. ಎಂದಿಗಿಂತ ಲವಲವಿಕೆಯಿಂದಿದ್ದಳು. ಇವಳಿಗೆ ಒಳಗೇ ಹಗುರಾದಂತೆನಿಸಿ, ''ಏನು ಸಮಾಚಾರ, ಸ್ವಲ್ಪ ಖುಷಿಯಾಗಿ ಕಾಣುತ್ತೀಯಾ ?'' ಎಂದಳು. ಅವಳಕ್ಕ ''ಹೌದು ಕಣೆ, ಎರಡು-ಮೂರು ದಿನದಿಂದ ಮನೆಯಲ್ಲಿ ಬೈಗುಳ ನಿಂತುಹೋಗಿದೆ'' ಎಂದಳು. ಇವಳು ಆಶ್ಚರ್ಯದಿಂದ, ಕುತೂಹಲಭರಿತಳಾಗಿ ಅವಳನ್ನೊಮ್ಮೆ ಪ್ರಶ್ನಾರ್ಥಕವಾಗಿ ನೋಡಿದಳು! ಮುಂದುವರೆಸಿದ್ದಳು ಅವಳಕ್ಕ..... ''ನೀನು ಕೊಟ್ಟ ಪುಸ್ತಕಗಳನ್ನು ಓದುತ್ತಿದ್ದೆ. ಒಂದು ರೀತಿ ಬೇರೆಯೇ ಎನಿಸುತ್ತಿತ್ತು. ಒಂದು ದಿನ ಎಂದಿನಂತೆ ಬೈಯ್ಯಲು ಶುರುಮಾಡುತ್ತಿದ್ದ ಹಾಗೇ, ನಾನು ಸಿಡಿದು ಹೇಳಿಬಿಟ್ಟೆ, 'ಇನ್ನು ಮೇಲೆ ಬೈದರೆ ಸುಮ್ಮನಿರುವುದಿಲ್ಲ' ಎಂದು. ತಿರುಗಿ ಮಾತನಾಡಿದ್ದೇ ನೋಡದ ಅವನು 'ನನಗೇ ತಿರುಗಿಸಿ ಮಾತನಾಡ್ತೀಯಾ, ಎಷ್ಟು ಪೊಗರು ನಿನಗೆ ?' ಎಂದು ಹೊಡೆಯಲು ಬಂದ ಅವನ ಕೈಯನ್ನು ಭದ್ರವಾಗಿ ಹಿಡಿದು ಹೇಳಿದೆ 'ನೀನೇನಾದರೂ ಇನ್ನು ಮೇಲೆ ಬೈದರೆ, ನಾನು ಅಕ್ಕಮಹಾದೇವಿಯಂತೆ ಬಟ್ಟೆ ಕಳಚಿ ಮನೆ ಮುಂದೆ ಬೀದಿಯಲ್ಲಿ ನಿಂತುಬಿಡುತ್ತೇನೆ' ಎಂದುಬಿಟ್ಟೆ. ಗಾಬರಿಯಿಂದ ದಂಗಾಗಿ, ನನ್ನ ಸುದ್ದಿಗೆ ಬರದೇ ಸುಮ್ಮನಿದ್ದಾನೆ'' ಎಂದಳು.

ಎಂಟು ನೂರು ವರ್ಷಗಳ ಹಿಂದೆ, ಉಡುತಡಿಯಿಂದ ಉಡುಪನ್ನೇ ಕಳಚಿ, ಸ್ವಾಭಿಮಾನ, ವೈರಾಗ್ಯ, ಪ್ರತಿಭಟನೆಗಳ ಸ್ವರೂಪವಾಗಿ ಹೊರಟ ಅಕ್ಕಮಹಾದೇವಿ ಕದಳಿಗೆಲ್ಲಿ ಹೋಗಿದ್ದಾಳು ? ಅಮರಳಲ್ಲವೇ ಅವಳು ! ಎಲ್ಲರ ಬೆಂಗಾವಲಾಗಿ, ಭರವಸೆಯಾಗಿ ಇಲ್ಲೇ ಇದ್ದಾಳೆ ! ಶತಮಾನಗಳಿಂದ ಅಚಲಳಾಗಿ ನಿಂತಿರುವ 'ಅಕ್ಕ' ತನಗಿದ್ದ 'ಅಕ್ಕ'ನ ಅಭಾವವನ್ನು ನಿವಾರಿಸಿದ್ದಳು.

ಅಕ್ಕನಿಗೆ ಕೊಟ್ಟು ಖಾಲಿಯಾಗಿದ್ದ ತನ್ನ ಪುಸ್ತಕದ ಕಪಾಟಿನ ಜಾಗಕ್ಕೆ ಮತ್ತೆ 'ವಚನ ಸಂಪುಟ' ತಂದು ತುಂಬಿದ್ದಳು. ಭರವಸೆಯಂತೆ ಕಂಡ ಅಕ್ಕನ ವಚನಗಳ ಆ ಪುಸ್ತಕವನ್ನೊಮ್ಮೆ ಕೈತುಂಬಾ ಹಿಡಿದು ಹಾಳೆ ತಿರುವಿದ್ದಳು.

*ಹಸಿವಾದೊಡೆ ಊರೊಳಗೆ ಭಿಕ್ಷಾನ್ನಗಳುಂಟು,*
*ತೃಷೆಯಾದೊಡೆ ಕೆರೆ, ಹಳ್ಳ, ಬಾವಿಗಳುಂಟು.*
*ಅಂಗಶೀತಕ್ಕೆ ಬೀಸಾಟ ಅರಿವೆಗಳುಂಟು,*
*ಶಯನಕ್ಕೆ ಹಾಳು ದೇಗುಲಗಳುಂಟು.*
*ಚೆನ್ನಮಲ್ಲಿಕಾರ್ಜುನಯ್ಯ, ಆತ್ಮ ಸಂಗಾತಕ್ಕೆ*
*ನೀನೆನಗುಂಟು.*

'ನಿರ್ಭಯದ ನಿಲುವು, ಆತ್ಮಗೌರವದ ಪ್ರತಿರೂಪ, ವೈರಾಗ್ಯದಲ್ಲಿ ಪ್ರತಿಭಟನೆ !' ಹೊಸ ತಿಳಿವಿನಿಂದ ರೋಮಾಂಚಿತಗೊಂಡಳು ಗಿರಿಜೆ. ಮಹಿಳಾ ಸಂಘಟನೆಗಳು, ಅರಿವು ಮೂಡಿಸುವ ಶಿಬಿರಗಳು ಒತ್ತಟ್ಟಿಗಿರಲಿ, ಎಲ್ಲ ಮಹಿಳೆಯರಿಗೆ ಇನ್ನು ಮೇಲೆ ಕೊಡುಗೆಯಾಗೋ, ಸುಮ್ಮನೆಯೋ, ಅರಿಸಿಣ-ಕುಂಕುಮದ ಜೊತೆಗಿನ ಬ್ಲೌಸ್ ಪೀಸ್ ಬದಲಾಗಿ ಈ ಪುಸ್ತಕವನ್ನೇ ಕೊಡೋಣವೆಂದು ನಿರ್ಧರಿಸಿ, ಅಂದು ನಿರುಮ್ಮಳವಾಗಿ ನಿದ್ರಿಸಿದ್ದಳು ಗಿರಿಜೆ.

**ರೇಣುಕಾ ಮಂಜುನಾಥ್**
''ಶ್ರೀಶೈಲ'' ೧೦೧೪, ೧೦ನೇ ಮುಖ್ಯರಸ್ತೆ, ೧ನೇ ಬ್ಲಾಕ್, ೩ನೇ ಸ್ಟೇಜ್
ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

ಎಚ್ ಎಮ್ ಟಿ
ಬಹುಮಾನಿತ ಲೇಖನ







# ಪ್ರಶಸ್ತಿ ಬೇಕೆ?

ಮುಂಜಾನೆ ಕಾಲೇಜು ಎಂದರೆ ಹೀಗೇ. ಏಳೂವರೆಗೆ ಮೊದಲನೆಯ ಪಿರಿಯಡ್ಡು. ಸಾಡೇ ಸಾತ್ ಬೆನ್ನಿಗಂಟಿದ ಬೇತಾಳ. ಕ್ಷೌರ ಆದರೆ ಸ್ನಾನ ಆಗೋಲ್ಲ, ಸ್ನಾನ ಆದರೆ ಮುಖ ಕ್ಷೌರಕ್ಕೆ ತಿಲಾಂಜಲಿ. ವಿದ್ಯುತ್ ಕೈಕೊಟ್ಟರೆ ತಿಂಡಿಗೆ ಹೋಟೇಲು ಗತಿ. ಈ ಚಳಿಗಾಲದಲ್ಲಿ ನೀರು ಬೇರೆ ಬೇಗ ಕಾಯೊಲ್ಲ. ತಣ್ಣೀರು ಮುಟ್ಟಲಾಗದಂತಹ ಚಳಿ. ಅವಸರವಸರವಾಗಿ ಬೈಕ್ ಮೇಲೆ ಹೊರಟರೆ ತಣ್ಣೀರು ಉಗ್ಗಿದಂತಾಗಿ ಕಣ್ಣು ಮೂಗು ನಾಲ್ಕರಲ್ಲೂ ಜಲಧಾರೆ !

''ಕಾಲೇಜನವರೆಗಾದರೂ ಶಾಲು ಹೊದ್ದುಕೊಂಡು ಹೋಗಿ ಎಂದರೆ ನೀವು ಕೇಳುವುದಿಲ್ಲ. ಮನೆ ತುಂಬ ಶಾಲುಗಳಿದ್ದೂ ಹೀಗೆ.'' ಮನೆಯಾಕೆಯ ವರಾತ.

ಅವಳೆನ್ನುವುದೂ ಸರಿ. ಮನೆಯಲ್ಲಿ 'ಸುಮಾರು' ಶಾಲುಗಳಿವೆ. ಅವುಗಳಲ್ಲಿ ಕೆಲವು ನಿಜವಾಗಿಯೂ ಚೆನ್ನಾಗಿವೆ. ಪ್ರೀತಿಯಿಂದ, ಅಭಿಮಾನದಿಂದ ಶಾಲು ಹೊದಿಸಿ ಸನ್ಮಾನಿಸಿದ್ದಾರೆ. ಸನ್ಮಾನಿಸಿದ್ದಕ್ಕೆ ಸಾಕ್ಷಿಯಾಗಿ ಫೋಟೋದಲ್ಲಿ ಸೆರೆ ಹಿಡಿದಿದ್ದಾರೆ. ನಾನು ಮರೆತರೆ ಭೆಟ್ಟಿಯಾದಾಗ ನೆನಪು ಮಾಡುತ್ತಾರೆ.

ಒಂದು ಪ್ರಶಸ್ತಿಗೆ ಹಲವು ಹನ್ನೊಂದು ಸನ್ಮಾನ. ಹಾದಿಗೊಂದ ದುಡ್ಡು, ಬೀದಿಗೊಂದ ದುಡ್ಡು, ಎಲ್ಲಾ ದುಡ್ಡ ಕೂಡಿಸಿ, ಕೊಬ್ಬರಿ-ಬೆಲ್ಲಾ ತಂದು, ಲಟಾ-ಲಟಾ ಮುರಿದು – ಹೀಗೆ ಸಾಗುತ್ತದೆ ಮಕ್ಕಳ ಜಾನಪದ ಪದ್ಯವೊಂದು. ಅದನ್ನು ನೀವೂ ಕೇಳಿಯೇ ಇದ್ದೀರಿ, ಬಿಡಿ. ಆದರೆ, ಅದಕ್ಕೂ ಇದಕ್ಕೂ ಏನು ಸಂಬಂಧ ಎನ್ನಬೇಡಿ. ಕೆಲವು ಯಂತ್ರಗಳಿಗೆ ಸ್ಟಾರ್ಟಿಂಗ್ ಟ್ರಬಲ್ ಇರುವಂತೆ, ನನ್ನಂತಹ ಕೆಲವು ಲೇಖಕರಿಗೂ ಅದೇ ರೋಗ ! ಈಗ ನೇರವಾಗಿ ವಿಷಯಕ್ಕೆ ಬರುತ್ತೇನೆ.

ಪ್ರಶಸ್ತಿಗಳು ಇಂದು ಅರ್ಥ ಕಳೆದುಕೊಳ್ಳುತ್ತಿವೆ ಎಂಬುದನ್ನು ನೀವೂ ಒಪ್ಪುತ್ತೀರಿ ಎಂದು ನಂಬಿದ್ದೇನೆ. ಹಾದಿಗೊಂದು ಪ್ರಶಸ್ತಿ, ಬೀದಿಗೊಂದು ಪ್ರಶಸ್ತಿ, ಅಕಾಡೆಮಿ ಪ್ರಶಸ್ತಿ, ಭವ್ಯ ಭಾರತದ ಘನ ಸರಕಾರ ಕೊಡಮಾಡುವ 'ಭಾರತ ರತ್ನ'ದಂತಹ ಪ್ರಶಸ್ತಿಯ ಬಗ್ಗೆಯೂ ಮೊದಲಿನ ಘನತೆ-ಗೌರವ ಈಗ ಉಳಿದಿದೆಯೆ, ನೀವೇ ಹೇಳಿ. ಹಾಗೇ ಉತ್ತರದಿಂದ ದಕ್ಷಿಣಕ್ಕೆ ಬರೋಣ ಅಥವಾ ಮೇಲಿನಿಂದ ಕೆಳಕ್ಕೆ ಬರೋಣ ಎನ್ನುತ್ತೀರೊ ? ಜ್ಞಾನಪೀಠ ಪ್ರಶಸ್ತಿ, ಅಕಾಡೆಮಿ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ ಮುಂತಾದ ಈ ಪ್ರಶಸ್ತಿ ಪ್ರದಾನ ಸಂದರ್ಭಗಳಲ್ಲೆಲ್ಲ - ಅಪಸ್ವರ ಮೆಲ್ಲಗೆ (ಒಮ್ಮೊಮ್ಮೆ ಗಟ್ಟಿಯಾಗಿಯೂ) ಕೇಳಿಬರುತ್ತದೆ. ಈ ಅಪಸ್ವರವೇನಾದರೂ ಪ್ರಶಸ್ತಿ ತನಗೆ ಸಿಗಲಿಲ್ಲವೆಂಬ ಕಾರಣಕ್ಕಾಗಿ ಹೊಟ್ಟೆಕಿಚ್ಚಿನಿಂದ ಹೊರಬಂದದ್ದೊ ಹೇಗೆ ? ನಿರ್ಮೋಹಿಯಾಗಿ, ನಿರ್ಲಿಪ್ತವಾಗಿ ದೂರ ನಿಂತು ನೋಡುವ ಪ್ರಜ್ಞಾವಂತ ನಾಗರಿಕರ ಧ್ವನಿಯೇ ಇದು ಎಂಬುದನ್ನು ಪರಿಶೀಲಿಸಬೇಕಾಗುತ್ತದೆ.

ಇತ್ತೀಚಿನ ಪ್ರಶಸ್ತಿಗಳ ಸಂಖ್ಯೆಯ ತೀವ್ರ ಬೆಳವಣಿಗೆಯನ್ನು ನೋಡಿದರೆ ''ಜನಸಂಖ್ಯಾ ಸ್ಫೋಟ'' ಎನ್ನುವಂತೆ ''ಪ್ರಶಸ್ತಿ ಸ್ಫೋಟ'' ಎಂಬ ಪದಪುಂಜ ಸೃಷ್ಟಿಸಬೇಕಾಗುತ್ತದೆ ! ರಾಜ್ಯಮಟ್ಟದ, ತಾಲ್ಲೂಕು ಮಟ್ಟದ ಪ್ರಶಸ್ತಿಗಳ ಜೊತೆಗೆ, ನಗರ ಸಭೆ ವ್ಯಾಪ್ತಿಯ, ಗ್ರಾಮ ಪಂಚಾಯಿತಿ ಮಟ್ಟದ, ಒಂದೊಂದು ಬಡಾವಣೆಗೆ ಮಾತ್ರ ಸೀಮಿತವಾದ ಪ್ರಶಸ್ತಿಗಳೂ ಇವೆ.

ಜಿ. ಎಸ್. ವಡಗಾಂವಿ

ಈ ಮೊದಲು ಸಾಹಿತ್ಯದ ಒಂದು ಪ್ರಕಾರ – ಕಥೆ, ಕಾವ್ಯ, ಕಾದಂಬರಿ ಹೀಗೆ ಯಾವುದೇ ಒಂದು ಪ್ರಕಟಿತ ಕೃತಿಗೆ ಪ್ರಶಸ್ತಿ ಬರುತ್ತಿತ್ತು. ಇಂದು ಪತ್ರಿಕೆಗಳಲ್ಲಿ ಪ್ರಕಟವಾಗುವ ಕಥಾ ಸ್ಪರ್ಧೆ, ಕವನ ಸ್ಪರ್ಧೆ, ಚುಟುಕು ಸ್ಪರ್ಧೆಗಳನ್ನು ನೀವು ಗಮನಿಸಿರಬಹುದು. ತಿಂಗಳಿಗೊಂದು ಹಬ್ಬ ನಮ್ಮಲ್ಲಿ, ಹಬ್ಬಕ್ಕೊಂದು ಸ್ಪರ್ಧೆ, ದೀಪಾವಳಿಗೊಂದು ಸ್ಪರ್ಧೆ, ದಸರಾಕ್ಕೆ ಮತ್ತೊಂದು. ದಸರಾ ಕವಿಗೋಷ್ಠಿ, ಯುಗಾದಿ ಕವಿಗೋಷ್ಠಿ. ಬೇಗ-ಬೇಗ ಡ್ರಾ, ಬೇಗ-ಬೇಗ ಬಹುಮಾನ ಎನ್ನುತ್ತಾರಲ್ಲ ಹಾಗೆ ! ಯಾರಿಗುಂಟು ಯಾರಿಗಿಲ್ಲ ಈ ಭಾಗ್ಯ ! ಸಾಹಿತಿಗಳಿಗೆ ಸುಗ್ಗಿಯ ಕಾಲವಿದು ! ಓದುಗರ ಸಂಖ್ಯೆ ಕಡಿಮೆಯಾದರೇನಂತೆ, ಪ್ರಶಸ್ತಿಗಳಿದ್ದಾವಲ್ಲ !

ಇತ್ತೀಚೆಗೆ ನಾನು ಗಡಿಯಾರ ಕಟ್ಟುವುದನ್ನು ಬಿಟ್ಟಿದ್ದೇನೆ. ಅದಕ್ಕೆ ಕಾರಣಗಳೆರಡು. ನನ್ನ ಕೈಗಡಿಯಾರ ತನ್ನ ರಜತಮಹೋತ್ಸವವನ್ನು ವಿಜೃಂಭಣೆಯಿಂದ ಆಚರಿಸಿಕೊಂಡು ನನಗೆ ಕೈಕೊಟ್ಟಿತು. ಮದುವೆಯಲ್ಲಿ ಮಾವ ಕೊಡಿಸಿದ್ದು. ರಿಪೇರಿಯಾಗಿ ಆಗಿ ಮೊಂಡಾಟ ಮಾಡತೊಡಗಿದ್ದು ಒಂದು ಕಾರಣವಾದರೆ ಇನ್ನೊಂದು ಸಬಲ ಕಾರಣವಿದೆ. ಕೈಯಲ್ಲಿ ಗಡಿಯಾರವಿದ್ದರೂ, ಬೆಲ್ಲು ಬಾರಿಸಿದ್ದರೂ ನಾನು ನನ್ನ ಪಿರಿಯಡ್ಡು ಮುಗಿಸದಿದ್ದಾಗ, ಮುಂದಿನ ಪಿರಿಯಡ್ಡಿಗಾಗಿ ಬಂದ ನನ್ನ ಸ್ನೇಹಿತ ''ಕೈಗೆ ಗಡಿಯಾರ ಚೆಂದಕ್ಕೆ ಕಟ್ಟಿರುವೆಯಾ ?'' ಎಂದು ದಬಾಯಿಸಿದ್ದ. ಸಮಯಪ್ರಜ್ಞೆಯಿಲ್ಲದ, ಹೊತ್ತಿಗೊದಗದ ನನ್ನ ಕೈಗೆ ಇದೊಂದು ಕೇಡು ಎಂದು ಕೈಗಡಿಯಾರಕ್ಕೆ ಸಲಾಮು ಹೊಡೆದಿದ್ದೆ. ನಾನು ಪ್ರಾಮಾಣಿಕವಾಗಿ ಈ ಕಾರಣಗಳಿಂದಾಗಿ ವಾಚು ಕಟ್ಟುವುದನ್ನು ಬಿಟ್ಟಿದ್ದೇನೆ. ಮನೆಯಾಕೆಗೆ ನನ್ನ ಮೇಲೆ ಗುಮಾನಿ. ಸಾಹಿತ್ಯ ಸ್ಪರ್ಧೆಗಳಲ್ಲಿ (ಲಲಿತ ಪ್ರಬಂಧ, ಕಥಾ ಸ್ಪರ್ಧೆ) ಕೈಗಡಿಯಾರ ಬಹುಮಾನವಾಗಿ ಬರುವವರೆಗೆ ಕೈಗೆ ವಾಚು ಕಟ್ಟ

ಬಾರದೆಂಬ ಪ್ರತಿಜ್ಞೆ ನೀವು ಮಾಡಿರಬಹುದು ಎನ್ನುತ್ತಾಳೆ! ಹೆಂಗಸರ ಮೆದುಳು ಸ್ವಲ್ಪ ವಿಶೇಷವಾಗಿಯೇ ಕೆಲಸ ಮಾಡುತ್ತದೆಯಲ್ಲವೆ? ಚಿನ್ನದ ವ್ಯಾಪಾರಿಯೊಬ್ಬರು ಪ್ರಾಯೋಜಕರಾಗಿ ಮಹಿಳೆಯರಿಗಾಗಿ ''ಚಿನ್ನದ ಬಳೆ'' ಸಾಹಿತ್ಯ ಸ್ಪರ್ಧೆ ಏರ್ಪಡಿಸಿದರೆ ನನ್ನಾಕೆಯೂ ಒಂದು ಕೈ ನೋಡಿಯಾಳು! ಮನೆಪಾಠದ ಹಾವಳಿ ಹೆಚ್ಚಾಗಿರುವ ಈ ದಿನಗಳಲ್ಲಿ ''ಟ್ಯೂಶನ್ ಫೀ ಬಹುಮಾನ'' ಯೋಜನೆಯನ್ನು ವಿದ್ಯಾರ್ಥಿಗಳಿಗಾಗಿ ಹಮ್ಮಿಕೊಳ್ಳಬಹುದು!

ಪ್ರತಿಷ್ಠಾನಗಳು, ದತ್ತಿ ನಿಧಿಗಳು ವರ್ಷದಿಂದ ವರ್ಷಕ್ಕೆ ಹೆಚ್ಚುತ್ತಲೇ ಇವೆ. ಅವೂ ಪ್ರಶಸ್ತಿ, ಪುರಸ್ಕಾರಗಳನ್ನು ಪ್ರದಾನ ಮಾಡುತ್ತಿವೆ. ಕರ್ನಾಟಕದ ಒಂದು ಜಿಲ್ಲೆಯ ಒಂದು ತಾಲ್ಲೂಕಿನಲ್ಲಿ ಒಂದು ಊರು. ಅಲ್ಲಿಯ ಹಿರಿಯ ಸಾಹಿತಿಗಳು ಕಣ್ಮರೆ. ಅವರ ಹಿತೈಷಿಗಳು (ಬೀಗರು-ಬಿಜ್ಜರು) ಅವರ ಪುಣ್ಯಾರಾಧನೆಯ ಸಂದರ್ಭದಲ್ಲಿ ಸಾಹಿತ್ಯಾರಾಧನೆ, ಪ್ರಶಸ್ತಿ ಪ್ರದಾನ ಸಮಾರಂಭ ಹಮ್ಮಿಕೊಳ್ಳುತ್ತಾರೆ. ತುಂಬ ಒಳ್ಳೆಯ ಕೆಲಸ. ಇವು ಮಿನಿ ಸಾಹಿತ್ಯ ಸಮ್ಮೇಳನದಂತಿರುತ್ತವೆ. ಸಾಹಿತಿಯೊಬ್ಬ ಸನ್ಮಾನಗೊಂಡು, ಸಂತೋಷಪಟ್ಟು ಸಮಾಧಾನಿಯಾಗುತ್ತಾನೆ, ಸಾಕಲ್ಲ.

ಸಾಹಿತ್ಯ ಪರಿಷತ್ತಿನ ವತಿಯಿಂದಲೂ, ಖಾಸಗಿಯಾಗಿಯೂ ಅನೇಕರು ಅಗಲಿದವರ ಹೆಸರಿನಲ್ಲಿ ದತ್ತಿನಿಧಿಗಳನ್ನು ಸ್ಥಾಪಿಸಿ, ಹಣವನ್ನು ಇಡುಗಂಟಾಗಿಟ್ಟು, ಅದರಿಂದ ಬರುವ ಬಡ್ಡಿಯಲ್ಲಿ ಪ್ರತಿವರ್ಷ ಪ್ರಶಸ್ತಿ ಕೊಡುವ, ಅಥವಾ ಸಾಹಿತ್ಯಗೋಷ್ಠಿಗಳನ್ನೇರ್ಪಡಿಸುವ ಸತ್‌ಸಂಪ್ರದಾಯ ಬೆಳೆಯುತ್ತಿದೆ. ಸರತಿಯಲ್ಲಿರುವ ಮತ್ತೋರ್ವ ಸಾಹಿತಿಗೆ ಶಾಲು ಹೊದಿಸಿ ಸನ್ಮಾನಿಸುತ್ತಾರೆ.

ಪ್ರಶಸ್ತಿ ಬಂದಿತೆಂದರೆ ಜನ ಗುಮಾನಿಯಿಂದ ನೋಡತೊಡಗುತ್ತಾರೆ. ಅವನ ಪೈಕಿ ಅಲ್ಲಿ ಯಾರಿದ್ದಾರೆ, ಯಾವ ರೀತಿ ಸಂಬಂಧ, ಜಾತಿ-ಕುಲ, ರಾಜಕೀಯ ಪಕ್ಷ ಮುಂತಾದ ಲೆಕ್ಕಾಚಾರಗಳೆಲ್ಲ ಪ್ರಾರಂಭ. ಹತ್ತಿರದವರೂ ಕೈ ಕುಲುಕುತ್ತಾರೆ, ಹೊತ್ತಿ ಉರಿದವರೂ, ಕರುಬಿದವರೂ ಕೈ ಕುಲುಕುತ್ತಾರೆ! ಆ ಪಕ್ಷದವರಿಂದ ಸನ್ಮಾನವಾದರೆ, ಈ ಪಕ್ಷದವರು ಏಕೆ ಬಿಟ್ಟಾರು? ಆ ಬಡಾವಣೆಯವರು ಸನ್ಮಾನ ಮಾಡಿ ಹೌದೆನಿಸಿಕೊಂಡರೆ, ಈ ಬಡಾವಣೆಯವರು ಬಡಿವಾರದಲ್ಲೇನು ಕಡಿಮೆ? ಉಳಿದ ಸಂಘ-ಸಂಸ್ಥೆಗಳು ಸನ್ಮಾನ ಸಮಾರಂಭ ಏರ್ಪಡಿಸಿ, ಪತ್ರಿಕೆಯಲ್ಲಿ ದೊಡ್ಡದಾಗಿ ಪ್ರಚಾರ ಕೊಟ್ಟಾಗ ಪ್ರಶಸ್ತಿ ಪಡೆದಾತನ ಮಾತೃಸಂಸ್ಥೆ ಸನ್ಮಾನ ಮಾಡದಿದ್ದರೆ ಹೇಗೆ? ನಾಲ್ಕುಜನ ಏನೆಂದಾರು? ಅನಿವಾರ್ಯವಾಗಿ ಮತ್ತೊಂದು ಸನ್ಮಾನ ಸಮಾರಂಭ! ಪರಜಾತಿಯವರು ಮಾಡುವಾಗ ಸ್ವಜಾತಿಯವರು ಸುಮ್ಮನಿರಲಾದೀತೆ? ಹೀಗಾಗಿ – ಸನ್ಮಾನದ ಮೇಲೆ ಸನ್ಮಾನ, ಸಮಾರಂಭದ ಮೇಲೆ ಸಮಾರಂಭ. ಮನೆ ತುಂಬ ತರಹೆವಾರಿ ಶಾಲುಗಳು, ತಟ್ಟೆಗಳು. ನೆಂಟರಿಷ್ಟರಿಗೆ ಹಂಚಿಕೊಟ್ಟಾದ ಮೇಲೂ ಕೆಲವು ಹಾಗೇ ಉಳಿದುಕೊಳ್ಳುತ್ತವೆ. ಸನ್ಮಾನಿತರಿಂದ ಎರಡು ಮಾತು: ಸನ್ಮಾನಕ್ಕೆ ಉತ್ತರ ಕೊಟ್ಟೂ ಕೊಟ್ಟೂ, ಹಾಡಿದ್ದನ್ನೆ ಹಾಡಿ-ಹಾಡಿ, ಸಾಹಿತಿಯ ಉತ್ತರೋತ್ತರ ಬೆಳವಣಿಗೆ ಪೂರ್ವ-ಪಶ್ಚಿಮವಾಗಿಬಿಡುತ್ತದೆ! ಮೆರವಣಿಗೆಯಲ್ಲಿ ಬರವಣಿಗೆಗೆ ಎಲ್ಲಿ ಅವಕಾಶ?

ಈ ಕೀರ್ತಿಗಾಗಿ ಮನುಷ್ಯ (ಸಾಹಿತಿಯೂ ಕೂಡ) ಮೊದ-ಮೊದಲು ಹಂಬಲಿಸುತ್ತಾನೆ, ತಹತಹಿಸುತ್ತಾನೆ. ಉಪ್ಪು ರುಚಿಗೆ ಬೇಕು, ಅದು ಹೆಚ್ಚಾದರೆ? ಜಾಣನಾದವನು ಪ್ರಚಾರ, ಪ್ರಸಿದ್ಧಿಗಳಿಂದ ಬೇಗ ಬಿಡಿಸಿಕೊಳ್ಳುತ್ತಾನೆ. ''ತೊಲಗಾಚೆ ಕೀರ್ತಿಶನಿ'' ಎಂದಾಗ ಮುಂದಿನ 'ಬರ'ವಣಿಗೆಗೆ ದಾರಿ ಸಿಗುತ್ತದೆ. ಇಲ್ಲದಿರೆ ಬರಿ, ಬರಿ ಎಂದರೂ ಬರಿದೊ, ಬರಿದು!

ಜಿ. ಎಸ್. ವಡಗಾಂವಿ
೬೭೪, ರಾಮಪುರ, ಅಂಚೆ: ರಬಕವಿ-೫೮೭೩೧೪, ಬಾಗಲಕೋಟೆ (ಜಿ)

# ಯಯಾತಿ



ಏರಿಏರಿದನೇರಿ ಗಾಳಿಗುದುರೆ ಸವಾರಿ
ಹರಿದ ಕಡೆ ಚಿತ್ತ ಸವಾರಿ
ಶಶಿಕುಲ ಲಲಾಮ ಇಂದ್ರಿಯ ಗುಲಾಮ
ವನಾಂತರದ ಸೌಂದರ್ಯ ಆಹ್ವಾನಿಸಿತೆ ಅಯ್ಯ.
ಚಿಗುರುಮೀಸೆ ಕಂಗಳಿಗೆ
ಬೆಡಗು ಬಿನ್ನಾಣದ ಚೆಲುವೆ
ಹಾಳು ಬಾವಿಯ ಕೂಗು ಏನಿದು ಬೆರಗು!
ನಖಶಿಖಾಂತ ಗುಣಾಕಾರ ಶಾಪ ವರವಾಯಿತು
ಗೆದ್ದಳಬಲೆ ಮುಯ್ಯಿಕ್ಕಿದ ಸಬಲೆ
ಹತಾಶ ತರುಣ ಕೈಹಿಡಿದ ಕಾರಣ
ಶಪಿತ ಕುಲದ ಕರುಣೆ ಕಟ್ಟಿದ ಕಂಕಣ
ಗುರುಸುತೆಗೆ ಅಸುರ ಕನ್ಯೆ
ಕೆಳದಿಗೂ ಕೀಳು ಅವಳೊಲುಮೆ ಬಾಳು
ಚಕ್ಕ ಚಕ್ಕಂದ ಒಳಗೆ ತಾಂಬೂಲದ ಘಳಿಗೆ
ಕಾವ ಬೆಸನ ಕೂಡೊ ವ್ಯಸನ
ಬೀಸೊಗಾಳಿ ಪೂರ್ವ ಪಶ್ಚಿಮ ತಾಳಿ
'ಬಣ್ಣದ ಚಿಟ್ಟೆ' ಬೆನ್ನ ಹತ್ತಿ
ಯೋಜ ಯೋಜನ ಬೆಂಬತ್ತಿ
ಹಾಲಾಗಲು ಹಾತೊರೆದ ವಿಷವಾಗಲು ಬೆರಗಾದ
'ತಿನ್ನಲಾಗದ ಹಣ್ಣವಳು '...
ದಾಸಿಯಾದಳು ಅವಗೆ
ವಾಸಿಯಾದಳು ನನಗೆ.

-೨-

ಮನ ಒಡೆದ ಅಂಗಳಕೆ
ಮಲ್ಲಿಗೆಯ ತಂದೆ ಅನುಗಾಲ ನಿಂದೆ
ತೊಂಡುಗೂಳಿಗೆ ಕಣ್ಣೆ ಇಟ್ಟ ಘಳಿಗೆ
ಕಾವು ಬಿಟ್ಟು ಒಳಗೆ
ಬನ್ನಿ ಮಕ್ಕಳೆ ಎನ್ನ ಕಂಗಳೆ
ನಿಮ್ಮ ತಂದೆ ಯಾರು?
'ಏನು ಮೋಸವೆ ಅದುವೆ ನ್ಯಾಯವೆ'

ನನ್ನ ಒಡೆಯ ನಿನಗೂ ಒಡೆಯ
ಬುಸುಗುಟ್ಟಿದ ಬಾಲೆ ಹೆಡೆಯೆತ್ತಿದ ಲೀಲೆ
ಅಪ್ಪನಿತ್ತ ಬಳುವಳಿ

-೩-

ಅರಸು ಮಕ್ಕಳೆ ಸರಸಕೀ ಕಳೆ
ಕೊಟ್ಟು ಪಡೆಯಿರಯ್ಯ ಬಿಡಬೇಡಿ ಕಯ್ಯ
ಎಲ್ಲ ಜಗಿದರು ಹಾರಿನೆಗೆದರು ಮಾತ ಕೊಂದರು
''ನಿಮ್ಮ ನೋವಿಗೆ ನನ್ನ ನೀವೆ'' ಕೊಳ್ಳಿ ಅಡಿದಾವರೆಗೆ
ಕೊಟ್ಟು ಧನ್ಯನು ದಿಟ್ಟ ಪುರು

ನಾನು ಧನ್ಯ ನೀನು ಮಾನ್ಯ
ಎಲ್ಲ ಕಾಲದ ಧರ್ಮ ತಿಳಿಯುವಲ್ಲಿದೆ ಮರ್ಮ.

-೪-

ಕಾಡಿಗಚ್ಚಿದ ಕಣ್ಣ ಅರಿಷಿಣದ ಮೈಬಣ್ಣ
ಹಗಲು ಚಂದ್ರನ ಹೆಣ....
ಶ್ರಾವಣದ ವರ್ಷಾ ಆಷಾಢ ಸ್ಪರ್ಶ
'ಕರೆ ಮಗಳೆ' ಅಂತಃಪುರಕೆ
ನಿನ್ನ ಮನ ಮಂದಿರಕೆ
ಅಂಗಕುಲ ಕನ್ಯೆ ಕೇಳು ಮಾನ್ಯೆ
ಹೂವಿದೆ ಮಧುವಿದೆ ಜೇನ್ನೊಣಗಳ ರಿಂಗಣ
ಕೊಟ್ಟುಬಿಡುವೆ ಇಟ್ಟುಕೊಳ್ಳೆ ಇನ್ನಷ್ಟು ಕಾಲ
ಚಿತ್ತ ಚೆಲುವಿನ ಚವರಿ ಬೀಸಿತು ಬೆನ್ನೇರಿ
ಶಂಕೆಯಿಲ್ಲದ ಸಂಗ ಅಂಕೆಯಿಲ್ಲದ ಅನಂಗ
ಸ್ವಾರ್ಥಕೆ ಮುದ್ದಾದ ಬಲಿ
ಕೀವು ಬಾವಾಗಿ ಬಾವು ಮಾಯುವಲ್ಲಿಗೆ
ಸಿದ್ಧಳಾಗಬೇಕೆ
ಅಂಕಿ ಸಂಖ್ಯೆಯ ಲೆಕ್ಕ ಚುಕ್ತಕ್ಕೆ
ಕಪ್ಪು ಬಿಳುಪಾಗಬೇಕೆ?

ಆ ಚೆಲುವು... ಆ ಕಣ್ಣು...
ಕಂಡ ಬಗೆ ಕನಸೊ ಭ್ರಮೆಯೋ
'ಕಣ್ಣು ಸಹಿಸದೀಗ' ಹೋಯಿತೆಲ್ಲಿಗೆ ಆ ಕಾಲ
''ಅರಮನೆಯೊಳಗೇನಾದರಾಗಬಹುದೆ?''
ಪಂಜರದ ಗಿಳಿ ಛಿದ್ರಗೈದ - ''ಚಿತ್ರ''
ತಾರುಣ್ಯಕೊಂಡು ಒಂದ ಬಿಟ್ಟರು....
ಆರಂಭಿಸಿ ಭರತವಂಶದ ಹೊಸ ಅಧ್ಯಾಯ

ಎಕ್ಕೆಗೆರೆ, ಆರ್. ಸಿದ್ದಹನುಮಯ್ಯ
''ತೇಜಸ್,'' ನಾರಾಯಣಪ್ಪ ತೋಟದ ಹತ್ತಿರ
ದೇವನೂರು ಚರ್ಚ್ ಹಿಂಭಾಗ, ಸಪ್ತಗಿರಿ ಬಡಾವಣೆ
ತುಮಕೂರು - ೫೭೨ ೧೦೨

# ವಿಜ್ಞಾನಿ – ವಿಶ್ವಮಾನವ

ಕೆ. ಎಸ್. ವಿನೋದ

ಒಂದು ದಿನ ಸಂಜೆ ಸುಮಾರು ಐದು ಗಂಟೆ ಸಮಯವಿರಬಹುದು. ಬಾಗಿಲ ಮುಂದೆ ಇದ್ದ ಬಳ್ಳಿಯಿಂದ ನಾಗಮ್ಮ ಹೂ ಕಿತ್ತು ಕಟ್ಟಲು ಕುಳಿತಿದ್ದರು. ಜಾಜಿ ಅರಳಲು ಪ್ರಾರಂಭಿಸಿ ಸುತ್ತೆಲ್ಲಾ ತನ್ನ ಕಂಪನ್ನು ಚೆಲ್ಲಿತ್ತು.

ಶಂಕರ ಐದು ವರ್ಷಗಳ ನಂತರ ಭಾರತಕ್ಕೆ ಬಂದಿದ್ದ. ಅಮೆರಿಕಾ ಬಗ್ಗೆ ಹೇಳಿದರೆ ದೊಡ್ಡಮ್ಮ ಹಳ್ಳಿ ಪೂರ್ತಿ ತಿಳಿಸುತ್ತಾರೆ ಅಂತ ಅತ್ಯಂತ ಆಸೆಯಿಂದ ಅಗ್ರಹಾರದಲ್ಲಿ ರಾತ್ರಿ ಉಳಿಯಲು ಶಂಕರ ನಿರ್ಧರಿಸಿದ. ಶಂಕರನನ್ನು ಬಾಗಿಲ ಮುಂದೆ ನೋಡಿದ ನಾಗಮ್ಮ ಪ್ರೀತಿಯಿಂದ ಬಾರೋ ಚೆನ್ನಾಗಿದ್ದೀಯಾ ಅಂತ ಅತ್ಯಂತ ಸಂತೋಷದಿಂದ ಸ್ವಾಗತಿಸಿ ಬಾ ಕೂತ್ಕೋ ಅಂತ ಹೇಳಿದರು. ಇಬ್ಬರೂ ಮಾತಾಡಿ ಮುಗಿಸುವ ವೇಳೆಗೆ ಹೂ ಕಟ್ಟಿಯೂ ಮುಗಿಯಿತು.

ಒಂದು ಗಳಿಗೆ ಬಂದೆ ಅಂತ ಒಳಗೆ ಹೋಗಿ ಬರುವಾಗ ಬಿಸಿ ಬಿಸಿ ಹಾಲನ್ನು ಶಂಕರನಿಗೆ ಕುಡಿಯಲು ತಂದುಕೊಟ್ಟರು. ಹಾಲು ಕುಡಿಯುತ್ತಾ ಶಂಕರ ಅಮೆರಿಕಾ ಹೇಗಿದೆ ? ಅಲ್ಲಿ ಏನೇನಿದೆ ? ಅದು ಎಂತಹ ಶ್ರೀಮಂತ ದೇಶ ಹೀಗೆ ಎಲ್ಲಾ ತಿಳಿಸಿ ಹೇಳುತ್ತಿದ್ದ. ನಾಗಮ್ಮ ಆಸೆಯಿಂದ ಎಲ್ಲಾ ಕೇಳಿ ತಿಳಿದುಕೊಳ್ಳುತ್ತಿದ್ದರು. ಹೀಗೆ ಮಾತಾಡುತ್ತಾ ಬಹಳ ಹೊತ್ತಾಯಿತು. ಶಂಕರ ಬಾ ಊಟ ಮಾಡೋಣ ಅಂತ ಅಡಿಗೆ ಮನೆಗೆ ಕರೆದುಕೊಂಡು ಹೋದರು. ನಾಗಮ್ಮ ಊಟಕ್ಕೆ ಸಂಡಿಗೆ ಕರಿಯುತ್ತಿದ್ದರು. ಹಾರ ಹಾಕಿ, ದೀಪ ಹಚ್ಚಿದ್ದ ಫೋಟೋ ನೋಡಿ ಯಾವ ದೇವರಿರಬಹುದು ಎಂದು ಸುಮ್ಮನೆ ಬಗ್ಗಿ ನೋಡಿದ ಶಂಕರ ತಲ್ಲಣಿಸಿಹೋದ, ಅದು ದೇವರ ಫೋಟೋ ಆಗಿರಲಿಲ್ಲ. ನಾನು ಅಲ್ಲಿ ಹೋಮ, ಹವನ, ಪೂಜೆ, ಪುನಸ್ಕಾರ ಅಂತ ಎಲ್ಲಾ ಮಾಡಿದರೆ ದೊಡ್ಡಮ್ಮ ದೇವರನ್ನು ಪೂಜಿಸುವುದಿಲ್ಲವೇ? ಅಷ್ಟೇ ಅಲ್ಲ, ಮನುಷ್ಯರ ಫೋಟೋಗೆ ದೀಪ ಹಚ್ಚಿದ್ದಾರೆ. ಇದೇನು ವಿಚಿತ್ರ ಅಂತ ಒಂದು ಗಳಿಗೆ ಯೋಚಿಸಿ, ದೊಡ್ಡಮ್ಮ ಇದು ಯಾರ ಫೋಟೋ ಅಂತ ಕುತೂಹಲದಿಂದ ಕೇಳಿದ. ಶಂಕರ ನನಗೆ ಹೆಸರು ಮರೆತಿದೆ ತಾಳು, ಅಂತ ಪೆಟ್ಟಿಗೆಯಲ್ಲಿ ಒಳ್ಳೆ ಬಟ್ಟೆಯಲ್ಲಿ ಭದ್ರಪಡಿಸಿದ್ದ ಪುಸ್ತಕವನ್ನು ತೆಗೆದು ಶಂಕರನಿಗೆ ನಾಗಮ್ಮ ಕೊಟ್ಟರು. ಅದು 'ರೋನಾಲ್ಡ್ ರಾಸ್'ರವರ ಪುಸ್ತಕವಾಗಿತ್ತು. ಪುಸ್ತಕದಲ್ಲಿದ್ದ ಚಿತ್ರವೇ ಆ ಪಟದಲ್ಲಿತ್ತು. ಓಹೋ ದೊಡ್ಡಮ್ಮ ರೋನಾಲ್ಡ್ ಹೆಸರವರನ್ನು ಪೂಜಿಸುತ್ತಾರೆ ಎಂದು ಶಂಕರನಿಗೆ ಅರ್ಥವಾಯಿತು. ಈ ಫೋಟೋ ಹಾಗೂ ಈ ಪುಸ್ತಕ ದೊಡ್ಡಮ್ಮನಿಗೆ ಎಲ್ಲಿ ಸಿಕ್ಕಿತ್ತು ಎಂದು ಕುತೂಹಲದಿಂದ ಶಂಕರ ಕೇಳಿದ. ಸುಮಾರು ೬೦ ವರ್ಷಗಳ ಹಿಂದೆ ಈ ಊರಿನಲ್ಲಿ ಒಬ್ಬರು ಮೇಷ್ಟರು ಇದ್ದರು. ಅವರು ಹಾಗೂ ನಮ್ಮ ತಂದೆ ಬಹಳ ಒಳ್ಳೆಯ ಸ್ನೇಹಿತರಾಗಿದ್ದರು. ಈ ಊರನ್ನು ಬಿಟ್ಟು ಹೋಗುವಾಗ ಅವರು ಈ ಫೋಟೋ ಹಾಗೂ ಪುಸ್ತಕವನ್ನು ನಮ್ಮ ತಂದೆಗೆ ಕೊಟ್ಟು ಅವರ ಬಗ್ಗೆ ಹೇಳಿದರು ಎಂದಾಗ ಅವರ ಬಗ್ಗೆ ಹೇಳಿದರಾ ? ಎಂದು ಶಂಕರ ಕಾತುರದಿಂದ ಕೇಳಿದ ! ಈತ ಒಬ್ಬ ಬ್ರಿಟಿಷ್ ಅಧಿಕಾರಿಯ ಮಗ. ಭಾರತದಲ್ಲಿ ಹುಟ್ಟಿ ಬೆಳೆದು ಇಂಗ್ಲೆಂಡಿಗೆ ಓದಲು ಹೋಗಿ ವೈದ್ಯನಾಗಿ ಭಾರತಕ್ಕೆ ಹಿಂದಿರುಗಿದ. ಆಗ ಭಾರತದಲ್ಲಿ ಮಲೇರಿಯಾ ರೋಗದಿಂದ ಜನ ನರಳಾಡುತ್ತಿದ್ದರು. ಈ ಮಹಾನುಭಾವ ಮಲೇರಿಯಾ ರೋಗಕ್ಕೆ ಔಷಧಿ ಕಂಡುಹಿಡಿದು ಲಕ್ಷಾಂತರ ಜೀವ ಉಳಿಸಿದ. 'ವಿಜ್ಞಾನಿ ಒಬ್ಬ ವಿಶ್ವಮಾನವ' ಎಂದಿದ್ದಲ್ಲದೆ ಮಾನವ ಕುಲದ ಹಿತಕ್ಕಾಗಿ ಯಾರು ಕೆಲಸ ಮಾಡುತ್ತಾರೋ ಅವರು ಸತ್ತರೂ ಬದುಕಿರುತ್ತಾರೆ ಎಂದು ಮೇಷ್ಟರು ಹೇಳಿದರು. ನಾನು ಶಾಲೆಗೆ ಹೋಗಿಲ್ಲ, ಅಕ್ಷರವೂ ಕಲಿತಿಲ್ಲ. ಆದರೂ ಆ ಮೇಷ್ಟರು ಹೇಳಿದ ವಿಷಯ ಎಂದರೆ ನಿಜವಾದ ಪಾಠವನ್ನು ಇಂದೂ ಕಿವಿಯಲ್ಲಿ ಕೇಳುತ್ತಿದ್ದೇನೆ. ಈಗ ಮನೆಯಲ್ಲಿ ನಾನೊಬ್ಬಳೆ ಇರುವುದರಿಂದ ನಮ್ಮ ಹಳ್ಳಿಯ ಜನರ ಪ್ರಾಣವನ್ನು ಉಳಿಸಿದ, ನಮ್ಮ ದೇಶದ ಜನರ ಪ್ರಾಣವನ್ನು ಉಳಿಸಿದ, ಅವರ ಫೋಟೋಕ್ಕೆ ಹೂವು ಹಾಕಿ ಗೌರವ ಸೂಚಿಸಿ ದೀಪ ಹಚ್ಚಿ ಸ್ಮರಿಸುತ್ತೇನೆ ಎಂದು ನಾಗಮ್ಮ ಹೇಳಿದಾಗ ಶಂಕರನಿಗೆ ಆಶ್ಚರ್ಯವಾಯಿತು. ಅದೆಲ್ಲಾ ಸರಿ, ವಿದೇಶಿಯನೊಬ್ಬನ ಫೋಟೋನ ಅಡಿಗೆ ಮನೆಯಲ್ಲಿ ಇಡೋದು ಸರೀನಾ ?



ಎಂದು ಶಂಕರ ಕೇಳಿದ. ನಾಗಮ್ಮ ಆಶ್ಚರ್ಯದಿಂದ ಇದೇನೋ ಶಂಕರ! ಈ ರೀತಿ ಹೇಳ್ತೀಯಾ, ನೀನು ಓದಿದ್ದೀಯಾ. ವಿದ್ಯಾವಂತ ಮನುಷ್ಯ ಯಾವ ದೇಶದವನು? ಎಲ್ಲಿ ಹುಟ್ಟಿದ ? ಯಾವ ಮತ ಮತ್ತು ಯಾವ ಜಾತಿಯವನು ಅನ್ನೋದು ಮುಖ್ಯ ಅಲ್ಲ ಕಣೋ, ಮಾನವ ಕುಲಕ್ಕೆ ಅವನು ಏನು ಮಾಡಿದ್ದಾನೆ ಅನ್ನೋದು ಮುಖ್ಯ. ಇವನೇನು ಸಾಮಾನ್ಯವಾದ ಮನುಷ್ಯನ, ಶಂಕರ ಮಹಾನುಭಾವ ಕಣೋ ಮಹಾನುಭಾವ: ಜೀವ ಉಳಿಸಿದ ವೈದ್ಯ, ಔಷಧಿ ಕಂಡುಹಿಡಿದ ವಿಜ್ಞಾನಿ, ಇಂತಹವನ ಸ್ಮರಿಸದೇ ಇನ್ಯಾರನ್ನ ಸ್ಮರಿಸಬೇಕು ಎಂದು ಹೇಳಿದ ದೊಡ್ಡಮ್ಮನ ದೊಡ್ಡ ಮಾತಿನಿಂದ ಶಂಕರ ತಲ್ಲಣಿಸಿ ಹೋದ. ಅವನ ಮನಸ್ಸು ಅಲ್ಲೋಲ ಕಲ್ಲೋಲವಾಯಿತು. ಇಬ್ಬರೂ ಊಟ ಮಾಡಿ ಮುಗಿಸಿದರು. ಮಲಗಿದ ತಕ್ಷಣ ದೊಡ್ಡಮ್ಮ ನಿದ್ದೆ ಹೋದರು. ಶಂಕರನಿಗೆ ನಿದ್ದೆಯೇ ಹತ್ತಲಿಲ್ಲ. ಅತ್ತಿಂದಿತ್ತ ಇತ್ತಿಂದತ್ತ ಹೊರಳಾಡಿ ಇಷ್ಟೇನು ಹೊರಳಾಡಿದ್ದು ಸಾಕು ಅನ್ನುವಾಗ ಚಿಕ್ಕಂದಿನಲ್ಲಿ ಈ ಹಳ್ಳಿಯಲ್ಲಿ ಇದ್ದಿದ್ದು ಬೆಳೆದಿದ್ದು ಜ್ಞಾಪಕ ಬಂತು. ಅಣ್ಣಂದಿರು ಓದುವಾಗ ಹಳ್ಳೀಲಿ ಶಾಲೆ ಇರಲಿಲ್ಲ, ಬೆಂಗಳೂರಿನಲ್ಲಿ ಕಷ್ಟಪಟ್ಟು ಅವರಿವರ ಮನೇಲಿ ವಾರಾನ್ನದ ವಿದ್ಯಾರ್ಥಿಗಳಾಗಿ ಕಲಿತರು. ಕೊನೆಯವನಾದ ನಾನು ಓದುವ ವೇಳೆಗೆ ದೊಡ್ಡಮ್ಮ ಹೇಳಿದ ಹಾಗೆ ಯಾರೋ ಮಹಾನುಭಾವರು ಈ ಹಳ್ಳಿಯಲ್ಲಿ ಶಾಲೆ ಮಾಡಿದರು. ಆದ್ದರಿಂದ ನಾನು ಹಳ್ಳೀಲೇ ಓದೋದಕ್ಕೆ ಆಯ್ತು, ಆಗ ನಮ್ಮ ಹಳ್ಳೀಲಿ ಎಸ್. ಎಸ್. ಎಲ್. ಸಿ. ಪರೀಕ್ಷಾ ಕೇಂದ್ರ ಇರಲಿಲ್ಲ, ಆರು ಮೈಲಿ ದೂರದ ಕೇಂದಳ್ಳಿಗೆ ಹೋಗಬೇಕಾಗಿತ್ತು. ವಿದ್ಯಾರ್ಥಿಗಳನ್ನು ಕರೆದುಕೊಂಡು ಹೋಗಿ ಒಂದು ಛತ್ರದಲ್ಲಿ ಇಳಿಸುತ್ತಿದ್ದರು. ನಮ್ಮ ಜೊತೆ ಶಿಕ್ಷಕರು ಇರುತ್ತಿದ್ದರು. ನಮ್ಮ ಊಟದ ವ್ಯವಸ್ಥೆಯನ್ನು ನಮ್ಮ ಹಳ್ಳಿಯವರೇ ಮಾಡುತ್ತಿದ್ದರು. ಮಧ್ಯಾಹ್ನ ಶಾಲೆ ಬಳಿ ಬಂದು ಬಿಸಿಲಿಗೆ ನೀರು ಮಜ್ಜಿಗೆ ಹಾಗೂ ಪಾನಕ ಕೊಡುತ್ತಿದ್ದರು. ಅವರೆಲ್ಲಾ ನನ್ನ ಹಾಗೆ ಸ್ವಾರ್ಥಿಗಳಾಗಿದ್ದರೆ ನಾವು ಓದಲು ಹೇಗೆ ಸಾಧ್ಯವಾಗುತ್ತಿತ್ತು ? ನನ್ನಂತಹ ಸ್ವಾರ್ಥಿಗಳೇ ಈ ದೇಶದಲ್ಲಿ ತುಂಬಿದ್ದರೆ ನಾನು ಓದಿ ಅಮೆರಿಕಾಗೆ ಹೋಗಲು ಸಾಧ್ಯವಾಗುತ್ತಿತ್ತೆ? ಶಂಕರ ಹೇಳು, ಎಂದು ತನ್ನಷ್ಟಕ್ಕೆ ತಾನೇ ಪ್ರಶ್ನಿಸಿಕೊಂಡ. ಈ ದೇಶದಲ್ಲಿ ಏನೇನು ಲಭ್ಯವೋ ಎಲ್ಲಾ ಪಡೆದು ವಿದ್ಯಾವಂತನಾಗಿದ್ದೇನೆ. ನಾನು ಓದಿ ಅಂಕ ಪಡೆದಿರಬಹುದು. ಫೀಜು ಕಟ್ಟಿರಬಹುದು. ಒಬ್ಬ ಡಾಕ್ಟರ್ ಆಗಬೇಕಾದರೆ ಸಮಾಜಕ್ಕೆ ಲಕ್ಷಾಂತರ ರೂಪಾಯಿ ಖರ್ಚು ಬೀಳುತ್ತದೆ. ನಮ್ಮ ಮೇಲೆ ಸಮಾಜದ ಋಣ ಅಂದರೆ

(೨೫ನೇ ಪುಟಕ್ಕೆ)

# ಕಣಿವೆಯಲ್ಲಿ ಮಳೆ

**ವೆಂಕಟಾಚಲಂ**



ಅಕ್ಟೋಬರ್ ಒಂದರಂದು ಭಾನುವಾರ. ಅದು ಮುದಲ್ ತೇದಿ. ಹೌದು, ಭಾನುವಾರ ಎಂದರೆ ಶರೀರದ ಯಂತ್ರಗಳು ತಮಗೆ ತಾವೇ ರಜೆ ಘೋಷಿಸಿಕೊಂಡು ನಮಗೂ ನೆನಪು ಮಾಡಿಕೊಡುತ್ತವೆ. ಇಂದು ರಜೆಯಾದ್ದರಿಂದ ನೀನು ರಜೆಯ ಅನುಭವವನ್ನು ಅನುಭವಿಸು, ನಮಗಂತೂ ಅದರ ನೆನಪಿದೆ ಎಂಬಂತಹ ಸ್ಥಿತಿ. ರಜೆ ಅಂದಮೇಲೆ ರಜೆ ತಾನೆ? ಎಂದಿನ ಮಾಮೂಲಿ ವಹಿವಾಟುಗಳಿಗೆ, ಆಫೀಸು ವ್ಯಾಪಾರ ವ್ಯವಹಾರ ಇತ್ಯಾದಿಗಳಿಗೆ ರಜೆಯ ಷರತ್ತು. ಆಯಿತು, ರಜೆಯಲ್ಲಿ ಮಾಡುವುದೇನು? ರಜೆ ಅನುಭವಿಸುವುದು ಅನ್ನುವುದಕ್ಕಿಂತ ರಜೆಯ ಮೂಡಿನಲ್ಲಿರುವುದು ಅಂತ ಅಂದುಕೊಂಡರೆ ಸರಿಯಾಗಬಹುದೇನೋ?

ರಜಾದಿನ ಹರಟೆ. ಹರಟೆಯಲ್ಲಿ ಏನೇನೋ ಮನೋವ್ಯಾಪಾರಗಳು ಸುಳಿಯುತ್ತವೆ. ಕೊನೆಗೆ ಒಂದು ಮನೋಪಾಕವಾಗಿ ಎಚ್ಚರಿಸಿ ಚುಚ್ಚುತ್ತವೆ. ಅದರ ಒಂದು ರೀತಿ - ''ಹೌದು ನೀವು ಹಿಂದೆ ಹೇಳಿದ್ದಿರಲ್ಲ ಕಣಿವೆ, ಅಲ್ಲಿಗೆ ಯಾಕೆ ಹೋಗಿ ಬರಬಾರದು?'' ''ಸರಿ ಹೊರಡೋಣ'' ಎಂದು ತಕ್ಷಣ ಹೊರಟೆವು. ಸುಮಾರು ಐವತ್ತು ಕಿ. ಮೀ. ಪ್ರಯಾಣ. ಅದು ಹೊಸದಲ್ಲ, ಹೊಸದರಂತೆ ಕಂಡರೂ ಹೊಸತಾಗಿರಲಿಲ್ಲ, ಹೊಸದರಂತೆ ಗಾಳಿಯನ್ನು ಸೀಳಿಕೊಂಡು ನುಗ್ಗುತ್ತಿತ್ತು. ಏನೋ ಮೋಜು. ನಗುವ ಮನಸ್ಸು, ಎಲ್ಲೋ ನಿದ್ದೆ ಮಾಡುತ್ತಿದ್ದರೂ ಆ ಸುಪ್ತಾವಸ್ಥೆಯಿಂದ ಅದನ್ನೆಬ್ಬಿಸಿ ಅಲ್ಲಿ ನೋಡು ಇಲ್ಲಿ ನೋಡು ಎಂದು ಮನಸ್ಸಿಗೆ ಕಚಗುಳಿಯಿಟ್ಟು ಸಹಜ ನಗುವಂತೆ ಮಾಡಿತ್ತು, ಅದು ಅನಿವಾರ್ಯ ಎಂಬುದನ್ನು ಮರೆಸಿತ್ತು. ಅದರ ಮೈಮೇಲಿನ ಧೂಳು, ಸ್ವಲ್ಪ ಹಳತಲ್ಲವೆ ಎಂಬ ದೂರುಗಳಿಷ್ಟೇ ಇದ್ದರೂ ಅದರ ನುಗ್ಗುವ ಪರಿ ಸಹಜಾನಂದವನ್ನು ಉಂಟುಮಾಡುತ್ತಿತ್ತು. ಅದರ ಪರಿಚಯ - ಹೊಚ್ಚ ಹೊಸದಲ್ಲದಿದ್ದರೂ ಒಂದು ರೀತಿಯಲ್ಲಿ ಚೇತಕ್ ಸ್ಕೂಟರ್‌ನ ಹಾಗೆ.

ಇರಲಿ ಹಾಗೂ ಹೀಗೂ ಅನ್ನೋದಕ್ಕಿಂತ ಹೇಗೆ ಹೇಗೋ ಸುಮಾರು ಐವತ್ತು ಕಿ. ಮೀ. ದಾಟ ಅಲ್ಲಲ್ಲಿ ಕಣಿದು, ಜಾರಿ ಹೋಗೇಬಿಟ್ಟವು, ತಾಣಕ್ಕೆ - ನವೆಯುತ್ತಾ ಒದ್ದೆ ಮುದ್ದೆಯಾಗಿ. ನಮಗೂ ಒಂದು ಹೆಸರುಂಟು. ಇನ್ನು ನಾವು ತಲುಪಿದ ತಾಣಕ್ಕೆ ತಟ್ಟೇಕೆರೆ ದೇವಸ್ಥಾನ ಅಂತಾರೆ. ಕಣಿವೆ ಮಹದೇಶ್ವರ ದೇವಸ್ಥಾನ ಅಂತಲೂ ಕರೀತಾರೆ. ಇದಕ್ಕೆ ಯಾಕೆ ಈ ಹೆಸರು? ಬಹುಶಃ ತಟ್ಟೆಕೆರೆ – ತಟ್ಟೆಯ ಆಕಾರದಲ್ಲಿರುವ ಕೆರೆ. ಸುತ್ತಲೂ ಬೆಟ್ಟಗುಡ್ಡಗಳಿದ್ದು ಮಧ್ಯಭಾಗ ಒಂದು ತಟ್ಟೆಯಾಕಾರದಲ್ಲಿ ಇದೆ ಎಂಬ ಕಾರಣಕ್ಕೆ. ತಟ್ಟೆಯಾಕಾರದಲ್ಲಿ ಇರುವ, ಸದಾ ನೀರಿನಿಂದ ತುಂಬಿರುವ ಒಂದು ವಿಶಾಲ ಕೆರೆ. ಅದಕ್ಕೇ ಇದನ್ನು ತಟ್ಟೇಕೆರೆ ಎಂದಿರಬಹುದು. ಇದರ ಆಜೂಬಾಜಕ್ಕೆ ಒಂದೋ ಎರಡೋ ಮನೆಗಳಾಗಿ ಈಗ ಒಂದು ಪುಟ್ಟ ಹಳ್ಳಿಯಾಗಿದೆ. ಲಂಬಾಣಿ ಜನರಿದ್ದಾರೆ. ಹಿಂದೆ ಲಂಬಾಣಿ ಹಟ್ಟಿ (ತಾಂಡಾ)ಯಾಗಿತ್ತೇನೋ. ಅದಕ್ಕೂ ಒಂದು ಹೆಸರು ಬೇಕಲ್ಲ, ತಟ್ಟೆಯಾಕಾರದ ಕೆರೆಯ ಅಂಚಿಗೆ ಇದ್ದ ಹಟ್ಟಿ ತಟ್ಟೇಕೆರೆಯ ಹಟ್ಟಿಯಾಗಿದ್ದು ಈಗ ತಟ್ಟೇಕೆರೆ ಎಂಬ ಹಳ್ಳಿಯ ಬೋರ್ಡಿನಿಂದ ಅಸ್ತಿತ್ವದಲ್ಲಿದೆ.

ಇನ್ನು ಕಣಿವೆ ಮಹದೇಶ್ವರ - ಎರಡೂ ಕಡೆ ಬೆಟ್ಟಗಳಿವೆ. ಇವುಗಳ ಮಧ್ಯೆ ಉದ್ದನೆಯ ಹಳ್ಳ ಪ್ರದೇಶವಿದೆ. ಇಲ್ಲಿ ಹೆಸರು ಇರುವ ಅಥವಾ ಇಲ್ಲದಿರುವ ಎರಡು ತೊರೆಗಳು ಸದಾ ಹರಿಯುತ್ತವೆ. ಈ ನದಿಗಳಿಗೆ ಒಡ್ಡು ಹಾಕಿ ಕೆರೆ ಮಾಡಿದ್ದಾರೆ. ಇದೇ ತಟ್ಟೇಕೆರೆ. ಎರಡು ಮೂರು ಬೆಟ್ಟಗಳ ಇಳಿಜಾರು ಪ್ರದೇಶವನ್ನು ಕಣಿವೆ ಎಂದು ಕರೆದಿದ್ದಾರೆ. ಈ ಕಣಿವೆಗೊಂದು ದೇವರು – ಮಹದೇಶ್ವರ; ದೇವರಿಗೊಂದು ಗುಡಿ, ಸ್ಥಾನ ಮಹದೇಶ್ವರ ದೇವಸ್ಥಾನ. ಕಾಡು ಮೃಗಗಳ ಬೀಡಾಗಿತ್ತು. ಈಗಲೂ ಆನೆಗಳಿವೆ. ರಾತ್ರಿ ವೇಳೆ ತಿರುಗಾಡಿದ ಸುಳಿವು ಇರುತ್ತದೆಯಂತೆ. ಕೆರೆಗೂ ಬರುತ್ತವೆಯಂತೆ. ಇದು ಸ್ಥಳ ಮಹಿಮೆ ಪುರಾಣದ ಕಥೆಯಾಯ್ತು. ನದಿ ಕೆರೆ ನೀರಿನಿಂದ ತೋಯ್ದು ಮುಳುಗುತ್ತಿದ್ದ ಮಹದೇಶ್ವರ ಸ್ವಾಮಿಯನ್ನು ಪಕ್ಕದ ಎತ್ತರದ ಸ್ಥಳದಲ್ಲಿ ನೆಲೆಗೊಳಿಸಿ ಹೊಸ ಆಲಯ ಮಾಡಿ ಸಂಭ್ರಮಿಸಿದೆ ಜನಸ್ತೋಮ. ಪ್ರತೀ ಸೋಮವಾರ ವಿಶೇಷ ಪೂಜೆ, ರಸಾಯನ ಸಂತೃಪ್ತಿ. ಇದಕ್ಕೆ ಇನ್ನೂ ಏನೇನು ಪುರಾಣ ಕಥೆ ಇದೆಯೋ ಗೊತ್ತಿಲ್ಲ.

ಮಳೆಯಲ್ಲಿ ತೊಯ್ದು ತೊಪ್ಪೆಯಾಗಿ ದೇವಸ್ಥಾನ ತಲುಪಿದೆವು. ಸಂಜೆ ಮಳೆ ನಿಲ್ಲುವ ಸೂಚನೆಗಳಿರಲಿಲ್ಲ, ಮಳೆಯಲ್ಲೇ ಕೆರೆಯ ಒಡ್ಡಿನ ಈ ತುದಿಯಿಂದ ಆ ತುದಿಯ ತನಕ ನಡೆದಾಡಿದೆವು. ಕೆರೆ ತುಂಬಿ ಕೋಡಿ ಹೋಗುತ್ತಿತ್ತು. ರಮಣೀಯವಾಗಿತ್ತು. ಕೆರೆಯ ಮತ್ತೊಂದು ಬದಿ ಕಾಣುತ್ತಿರಲಿಲ್ಲ, ಎಲ್ಲಿ ನೋಡಿದರೂ ನೀರು, ನೀರು. ನೀರಲ್ಲದೆ ಮತ್ತೇನೂ ಇಲ್ಲದಂತಿತ್ತು. ಕೆರೆಯ ಒಡ್ಡು ಇಷ್ಟೊಂದು ನೀರಿಗೆ ಕಿತ್ತು ಹೋದರೆ ಏನಾಗಬಹುದು ಎಂಬ ತುಂಟು ಯೋಚನೆಯೂ ಬಂತು. ಬೆಟ್ಟಗಳು ಮಾಯವಾಗಿ ಮೋಡಗಳು ಮೆರೆದವು. ಬೆಟ್ಟಗಳಿಗೆ ಮೋಡದ ಚಿತ್ತಾರ ಹೊದಿಕೆ. ಅದು ಮಳೆಯಾಗಿರಲಿಲ್ಲ, ಜೋಗ್ ಜಲಪಾತದ 'ಲೇಡಿ' ಜಲಪಾತದ ಅಂಗದಂತೆ ಅತ್ಯಂತ ಮನಮೋಹಕವಾಗಿ ವಯ್ಯಾರದಿಂದ ಬಳುಕು ಮಳೆಯನ್ನು ಸುರಿಸುತ್ತಿತ್ತು, ಅಲ್ಲ, ಅದು ಮಳೆಯಾಗಿರಲಿಲ್ಲ, ಈ ಮೋಡಗಳ ಸುರಿಮಳೆ, ಜಡಿಮಳೆ ಯಾವುದೂ ಆಗಿರದೆ ಆಕಾಶದಿಂದ ಹರಿದುಬರುವ ನೀರ ಗಂಗೆಯಾಗಿ ಕಣಿವೆಯೆಲ್ಲಾ ತೋಯ್ದಿತ್ತು. ನಮ್ಮ ಅಂಗಗಳ ಯಾವ ಭಾಗ ಒದ್ದೆಯಾಗಿಲ್ಲ ಎಂದು ಹುಡುಕುವುದು, ಹೇಳುವುದು ಸಾಧ್ಯವೇ ಇಲ್ಲದ ಮಾತಾಗಿತ್ತು. ಮೈಮೇಲೆ ಬಟ್ಟೆ ಇತ್ತು ಅಂತ ಹೇಳುವುದಕ್ಕಿಂತ ಇಲ್ಲ ಅಂತ ಹೇಳುವುದೇ ಸರಿ ಅನ್ನಿಸುತ್ತಿತ್ತು. ಹೊರಗೂ ಮಳೆ ಒಳಗೂ ಮಳೆ, ಕೆಳಗೂ ಮಳೆ, ಮೇಲೂ ಮಳೆ, ಎಲ್ಲೆಲ್ಲೂ ಮಳೆ, ಮಳೆಯ ಮಾಯಾ ಲೋಕ. ನಾವು ಭುವಿಯ ಮೇಲಿರಲಿಲ್ಲ; ಮಳೆಯಲ್ಲಿ ತೇಲಾಡಿ, ಮೋಡಗಳ ಮುಟ್ಟಬಯಸಿ, ಬೆಟ್ಟಗಳ ತಡಕಾಡಿ ಸೋತು, ಕಣಿವೆಯ ಕೆರೆಯ ನೀರಲ್ಲಿ ಬಿದ್ದು ಅದ್ದಲಬ್ಬು ರಮಿಸಿದೆವು. ಆಹಹಾ ಉಹುಹೂ ಮಳೆಯ ರಾಗವ ಹಾಡಿದೆವು. ಏಕತಾನತೆಯಲ್ಲಿ ಕುಣಿದೆವು. ಮಳೆಗೆ ರಾಗ ಕಲಿಸಲು ಹೊರಟೆವು. ಅದರ ಮುತ್ತುಗಳು ನಮ್ಮ ಗಲ್ಲ ಕಪೋಲಗಳ ಚುಂಬಿಸಿದವು. ಮೈಗೆ ಕಚಗುಳಿಯ ಪುಲಕವ ಕೊಟ್ಟವು. ಮನಕ್ಕೆ ಮೋಹಕ ಶೀತಲಾನುಭವವನ್ನು ಅನುಭೂತಿಸಿದವು. ಅಮೃತ ಬಿಂದುಗಳ ಸೇವಿಸಿ ತೃಪ್ತರಾಗಿದ್ದರೂ ಮತ್ತಷ್ಟು, ಇನ್ನಷ್ಟು ಕುಡಿ ಎಂದು ಕುಡಿಸಿ ಮತ್ತನ್ನು ತರಿಸುತ್ತಿದ್ದವು. ಅವು ಸುರಾಪಾನದಂತಿದ್ದು ನಮ್ಮನ್ನು ಹೆಜ್ಜೆ ಹಾಕಿಸಿ ಕುಣಿಸಿ ರಮಿಸುತ್ತಿದ್ದವು. ನಾವು ಆವ ಲೋಕದಲ್ಲಿದ್ದೆವೋ ಅರಿವಿಲ್ಲ. ಕಣ್ಣಾಲಿ, ತುಟಿಗಳಿಗೆ ಬಿರುಸು ಹನಿಮುತ್ತುಗಳು ಅಮರತ್ವವನ್ನೀಯುತ್ತಿದ್ದವು.

ಅನಿತಿರಲಿ, ಒಂದು ಕೊಡೆ ಹಿಡಿದು ಬಂದ

ಆಕೃತಿಯಿಂದ ತಪೋಭಂಗವಾಯ್ತು. ಇಹದ ಕಥೆ ಶುರುವಾಯ್ತು. ''ಏನು ಸ್ವಾಮಿ, ಮಳೆಯಲ್ಲಿ ಕುಣಿಯುತ್ತಾ ಇದ್ದೀರಾ?'' ''ನೀನೆಲ್ಲಿಂದಾ ಬಂದೆಯಪ್ಪಾ ಈ ಮಳೆಯಲ್ಲಿ?'' ''ಅಯ್ಯೋ ಸ್ವಾಮಿ ನನ್ನ ಹೆಂಡ್ತೀ, ಕುರಿಗಳು ಹೊಳೆಯ ಆ ಕಡೆ ಇದ್ದಾರೆ. ಹೊಳೆ ಇರಲಿಲ್ಲ, ದಾಟಿ ಕುರಿ ಮೇಯಿಸಲು ಮಾಮೂಲಾಗಿ ಆ ಕಡೆ ಹೋಗಿದ್ದಾಳೆ.'' ಮಾಯದಂಥಾ ಮಳೆ ಬಂದು ಹೊಳೆ ತುಂಬಿ ಹರಿದಿದೆ. ಈ ಕಡೆ ಬರೋಕ್ಕಾಗದು. ಕತ್ತಲಾಗತಾ ಇದೆ. ಹೊಳೆ ಈ ಕಡೆ ಆ ಕಡೆ ನಿಂತು ಮಾತಾಡಿದೆವು. ಒಬ್ಬರನ್ನು ಒಬ್ಬರು ನೋಡಿಕೊಂಡರೂ ಒಟ್ಟಿಗೆ ಆಗೋಕೆ ಆಗ್ತಾ ಇಲ್ಲ. ಇವನೊಂದು ತೀರ ಅವಳೊಂದು ತೀರ ಮಧ್ಯೆ ಮಾಯದ ತುಂಬು ಹೊಳೆ. ಈಜಲಾರರು, ಒಂದಾಗಲಾರರು. ಇದು ಮಳೆಯೆಂಬ ವಿಧಿಯಾಟ. 'ಇದು ಎಂಥಾ ಲೋಕವಯ್ಯ' ಹಾಡು ನೆನಪಾಯ್ತು. ''ಮತ್ತೆ ನೀನು ವಾಪಸ್ಸು ಬಂದೆಯಲ್ಲಾ''- ''ಹಳ್ಳಿಗೆ ಹೋಗಿ ಒಂದಷ್ಟು ಜನಾನ ಕರ್ಕೊಂಡು ನಾಲ್ಕೆರಡು ಕಿ. ಮೀ. ಬಳಸುದಾರಿಯಲ್ಲಿ ಹೋಗಿ ಎಲ್ಲರನ್ನೂ ಕರಕೊಂಡು ಬರಬೇಕು, ಈ ದರಿದ್ರ ಮಳೆ,'' ಅಂತ ಮುಂದೆ ಹೊರಟ.



ಪ್ರಸೂತಿ ವೈರಾಗ್ಯ, ಸ್ಮಶಾನ ವೈರಾಗ್ಯ ಅಂದ್ಕೊಂಡು ಮತ್ತೆ ಕುಣಿಯಲು ಮಳೆಯಲಿ, ಮತ್ತೋರ್ವ ಆ ಕಡೆಯಿಂದ ಕೊಡೆ ಹಿಡಿದು ಬಂದ. 'ಮಳೆಯಲಿ ಕಾಡಲ್ಲಿ ಒಬ್ಬೇ ಹೊರಟಿದೀಯ' ಅಂದರೆ - 'ಸ್ವಾಮಿ ಕುರಿಗಳು ಎಲ್ಲಾ ಬಂದವು. ಒಂದು ಮರಿ ತಪ್ಪಿಸಿಕೊಂಡೈತೆ'. ''ಈ ಮಳೆಯಲ್ಲಿ ಕಾಡುಗಿಡಗಳಲ್ಲಿ ಹೇಗಪ್ಪಾ ಹುಡುಕುತ್ತೀಯಾ?'' ಅಂದರೆ - ''ಬ್ಯಾ ಬ್ಯಾ ಅಂಬ್ಯಾ ಬರ್ ಬರ್ ಎಂದರೆ ಅದು ಕೂಗುತ್ತೆ ಕರಕಂಬರಬೇಕು,'' ಅಂತಾ ಹೇಳಿ ಅವಸರದಲ್ಲಿ ಹೊರಟ. ಇವ ಕೂಗಿದರೆ ಅದು ಕೂಗುತ್ತೆ, ಎಂತಹ ಪರಿಭಾಷೆ. ಒಬ್ಬರಿಗೆ ಮಾತು ಬರುತ್ತೆ, ಮತ್ತೊಬ್ಬರಿಗೆ ಮಾತಿಲ್ಲದಿದ್ದರೂ ಮಾತನಾಡಿಸುವ ಅಥವಾ ಮಾತು ಅರ್ಥವಾಗುತ್ತೆ ಅನ್ನೋ ಭ್ರಮಾಸಂಕೇತ ಭಾಷೆ. ಏನೇನೋ ಕಲ್ಪನೆಗಳು, ಪರಿಕಲ್ಪನೆಗಳು. ಇವುಗಳೊಟ್ಟಿಗೇ ಬದುಕು ಸಾಗಿದೆ, ಸಾಗಿಸುತ್ತಿದ್ದಾರೆ. ಒಂದೂ ಅರ್ಥವಾಗದು.

ಇದನ್ನೇ -ಯೋಚಿಸುತ್ತಾ ಇದ್ದ ಹಾಗೆ ಇನ್ನೊಂದು ಪ್ರಸಂಗ. ಎರಡೂ ಕಡೆ ಬೆಳೆದ ಹೊಲದ ಪೈರು, ಸಣ್ಣ ಕಾಲುದಾರಿ, ಒಬ್ಬ ರೈತ, ಎರಡು ಹಸು, ಮೂರು ಕುರಿಗಳನ್ನು ಮನೆಯ ಕಡೆ ಹೊಡೆದು ಕೊಂಡು ಹೋಗುವಾಗ ಒಂದು ಹಸು ಪಕ್ಕದ ಪೈರಿಗೆ ಬಾಯಿ ಹಚ್ಚಿದಾಗ ಹಗ್ಗ ಎಳೆಯುತ್ತಾನೆ. ಈ ಕಡೆ ಕುರಿ ಹಸುರಿಗೆ ಬಾಯಿ ಹಾಕುತ್ತೆ. ಐದು ಪ್ರಾಣಿಗಳನ್ನು ಹಗ್ಗ ಹಾಕಿ ಹಿಡಿದಿದ್ದರೂ ಒಂದೊಂದು ಒಮ್ಮೊಮ್ಮೆ ಆ ಕಡೆ ಈ ಕಡೆ ಬಾಯಿ ಆಡಿಸಲು ಎಳೆಯುತ್ತೆ. ಐದನ್ನು ಹಿಡಿದು ಸಾಗಿಸಲು ಸಾಕು ಬೇಕಾಯ್ತು ಆತನಿಗೆ. ದಾರಿ ಚಿಕ್ಕದಿತ್ತು, ನೋಡುವುದೂ ಅವಷ್ಟನ್ನೂ ಒಟ್ಟಿಗೆ ಗಮನಿಸುವುದೂ ಅನಿವಾರ್ಯವಾಯ್ತು. ಹೀಗೆ ಅನ್ನಿಸಿತು - ಅಯ್ಯೋ ಈತನ ಪಾಡೇ! ಬದುಕು ಹೈರಾಣ ಎಂಬಂತೆ ಅನ್ನಿಸುತ್ತಿತ್ತು. ಇಂತಹ ಕಾಟ ಬೇಡಪ್ಪಾ ಅನ್ನಿಸುವಷ್ಟು ವೇದನೆಯಂತಿತ್ತು.

ಇನ್ನು ನಸುಕಾಗುತ್ತಿತ್ತು. ಕಾಡು ಮತ್ತಷ್ಟು ಮೌನದ ಮಾತಾಡಿತು, ಮಳೆ ಕುಣಿಕುಣಿದು ಕುಪ್ಪಳಿಸಿ ಸಂಭ್ರಮಿಸುತ್ತಿತ್ತು. ಕಾಡಿನಿಂದ ಮೂವತ್ತು ಕಿ.ಮೀ. ಸುಮಾರಿಗೆ ಆನೇಕಲ್ (ಆಲೀಕಲ್ಲು, ಆನೇಕಾಲು) ಊರು. ಈ ಕಡೆ ಸುಮಾರು ಎರಡು ಮೂರು ಕಿ. ಮೀ.ನಲ್ಲಿ ತಟ್ಟೇಕೆರೆ ಹಟ್ಟಿ, ಮಧ್ಯೆ ಜನ ಮನೆ ಇಲ್ಲದ ಕಾಡಲ್ಲಿ ನಾವು. ಆದರೂ ದೇವಸ್ಥಾನದ ಪುರೋಹಿತರು ಕರುಣಾಳು. ಏನಿದ್ದರೆ ಅದು ಬೇಯಿಸಿ ಹಾಕ್ತೀನಿ, ಬಟ್ಟೆ ಬದಲಿಸಿಕೊಂಡು ಇಲ್ಲೇ ಉಳಿದುಕೊಳ್ಳಿ, ಇಲ್ಲಾ ಸ್ಕೂಟರ್ ಇಲ್ಲೇ ಬಿಟ್ಟು ಬಸ್ಸಿನಲ್ಲಿ (ರಸ್ತೆಗೆ ಹೋಗಿ) ಹೊರಟು ನಾಳೆ ಬಂದು ವಾಹನ ತೆಗೆದುಕೊಂಡು ಹೋಗಿ, ಎಂಬ ಅಮೂಲ್ಯ ಸಲಹೆಯನ್ನಿತ್ತರು. ತುಂಟ ಮನಸ್ಸು ಕೇಳ ಬೇಕಲ್ಲ? ನರಜು ಕಲ್ಲು, ಕೆಟ್ಟ ಡಾಂಬರು ರಸ್ತೆ, ದಿಬ್ಬ, ಇಳಿಜಾರು ರಸ್ತೆಯಲ್ಲಿ ಸವಾರಿ ಮುಂದುವರೆಯಿತು. ಸಂಜೆಗತ್ತಲು, ನಿಲ್ಲದ ಮಳೆ, ರಸ್ತೆಯ ಕೊರಕಲು, ಹಳ್ಳಗಳಲ್ಲಿ ನೀರು, ಕೆಲವು ಕಡೆ ಕೆಸರು ರಸ್ತೆ. ಎರಡು ಮೂರು ಕಡೆ ಮುಗ್ಗರಿಸುವ ಅನುಭವವಾದರೂ ನಮ್ಮ ಅನುಭವೀ ಮಿತ್ರರು ಸರ್ಕಸ್ ಮಾಡುತ್ತಾ, ಎಲ್ಲಾ ಅಡೆ ತಡೆಗಳನ್ನೂ ದಾಟುತ್ತಾ, ನಗು ನಗುತ್ತಾ, ಮಳೆಯ ಆನಂದವನ್ನು ಮೆಲುಕು ಹಾಕುತ್ತಾ ರಾತ್ರಿ ಎಂಟು ಗಂಟೆ ಸುಮಾರಿಗೆ ಗಮ್ಯ ತಲುಪಿಯೇ ತಲುಪಿದೆವು. ಅಂದು ಇಡೀ ರಾತ್ರಿ ಮಳೆ ಬೀಳುತ್ತಲೇ ಇತ್ತು. ಇಷ್ಟಾದರೂ ಕಣಿವೆಯಲ್ಲಿ ಬಿದ್ದ, ಬೀಳುತ್ತಿದ್ದ ಮೋಹಕ ಮಾಯಾ ಮಳೆ ಇಲ್ಲೆಲ್ಲೂ ಕಾಣಲಿಲ್ಲ ಅಂದು ಇಂದು.

**ವೆಂಕಟಾಚಲಂ**
ದೊಡ್ಡ ಭಜನೆ ಮಂದಿರ ಬೀದಿ
ಸರ್ಜಾಪುರ-೫೬೨೧೨೫, ಬೆಂಗಳೂರು ಜಿಲ್ಲೆ

*(೨೩ನೇ ಪುಟದಿಂದ)*

ಕಲಿತವರ ಮೇಲೆ ಸಮಾಜದ ಅಪಾರ ಋಣ ಇದೆ. ಏನು ಮಾಡಲಿ ಎಂದು ಶಂಕರ ಚಡಪಡಿಸಿದ. ಭಾರತದಲ್ಲಿ ಇರಲು ಮನಸ್ಸು ಬರಲಿಲ್ಲ. ಅಮೆರಿಕಾಗೆ ಹೋಗಲು ಮನಸ್ಸು ಒಪ್ಪಲಿಲ್ಲ.

ರಾತ್ರಿಯೆಲ್ಲಾ ಶಂಕರ ವಿಲಿ ವಿಲಿ ಒದ್ದಾಡಿದ. ಈ ದೇಶಾನ, ಈ ಜನಾನ ಹೀನಾಯವಾಗಿ ಕಂಡು ಅಮೆರಿಕದಲ್ಲಿ ವೈದ್ಯನಾಗಿ ಕುಬೇರನಾಗುವ ಕನಸು ಕಂಡಿದ್ದ ಅವನಿಗೆ ಅವನ ಬಗ್ಗೆ ಅಸಹ್ಯವಾಯಿತು. ನಮ್ಮ ಸುತ್ತಮುತ್ತ ಜನ ಬಡತನದಿಂದ ರೋಗದಿಂದ ನರಳುತ್ತಿದ್ದಾಗ ಈ ದೇಶದಲ್ಲಿ ಬೆಳೆದು ವಿದ್ಯಾವಂತನಾಗಿ ಅದರಲ್ಲೂ ವೈದ್ಯನಾಗಿ ನಾನು ಶ್ರೀಮಂತ ರಾಷ್ಟ್ರದಲ್ಲಿ ಹಣಕ್ಕಾಗಿ ಗುಲಾಮನಾಗುವ ಆಸೆ ಪಟ್ಟೆನಲ್ಲ, ನನ್ನ ಬುದ್ಧಿಗೆ ಧಿಕ್ಕಾರ. ನನ್ನಂತಹ ಸ್ವಾರ್ಥಿಯನ್ನು ನಮ್ಮ ದೇಶದವನು ಅಂತ ಹೆಮ್ಮೆ ಪಡುವುದಕ್ಕೆ ಆಗುತ್ತ ? ಎಂದು ತಲ್ಲಣಿಸಿಹೋದ. ಚಡಪಡಿಸಿದ. ಈ ದೇಶದ ಹೆಮ್ಮೆ ಪಡುವ ಪುತ್ರ ನಾನಾಗಬೇಕು ಎಂಬ ಆಲೋಚನೆ ಬಂದೊಡನೆ ಹಣ ಮಾಡಿ ಶ್ರೀಮಂತನಾಗುವ ಆಸೆ ಕರಗಿಹೋಯಿತು. ಭಾರತದಲ್ಲಿ ಉಳಿದು ತಾನು ಬದುಕಿ ಜನರಿಗೆ ಉತ್ತಮ ವೈದ್ಯಕೀಯ ಸೇವೆ ನೀಡಿ ಅಮರನಾಗುವ ಆಸೆ ಶಂಕರನಲ್ಲಿ ಚಿಗುರಿತು.

**ಕೆ. ಎಸ್. ವಿನೋದ**
೩೮, ೧ನೇ ಮೈನ್, ಮಾರುತಿ ಬಡಾವಣೆ, ಬೆಂಗಳೂರು - ೫೬೦ ೦೨೧

# ಮೂರು ಪ್ರಶ್ನೆಗಳು

''ನಮಸ್ಕಾರ ಸಾ'' ಎಂದು ಇದ್ದಕ್ಕಿದ್ದಂತೆ ಎಲ್ಲಿಂದಲೋ ಬಂದ ಧ್ವನಿಗೆ ನಾನು ಬೆಚ್ಚಿಬಿದ್ದೆ. ತಕ್ಷಣ ಯೋಚಿಸದೆ ''ನಮಸ್ಕಾರ !'' ಎಂದು ಪ್ರತಿ ನಮಸ್ಕಾರ ಹಾಕಿದೆ. ಆಮೇಲೆ ಯೋಚಿಸಿದೆ ನನಗೆ ನಮಸ್ಕಾರ ಹಾಕಿದವರು ಯಾರು.... ನಾನು ಪ್ರತಿ ನಮಸ್ಕಾರ ಹೇಳಿದ್ದು ಯಾರಿಗೆ...? ಎಂದು. ನಂತರ ತಿಳಿಯಿತು ನನಗೆ ನಮಸ್ಕಾರ ಮಾಡಿದ್ದು ಮರಿ ಸಾಹಿತಿ ರಂಗಸ್ವಾಮಿ ಎಂದು. ರಂಗಸ್ವಾಮಿ ಇರೋದು ನಮ್ಮ ಬೀದಿಯಲ್ಲಿಯೆ. ನನ್ನ ಕಂಡರೆ ಅವನಿಗೆ ಬಹಳ ಅಕ್ಕರೆ ಅಭಿಮಾನವಂತೆ. ಈ ವಿಷಯ ನನಗೂ ತಿಳಿದಿರಲಿಲ್ಲ. ಇತ್ತೀಚೆಗೆ ಅವನೇ ಒಂದು ದಿನ ಹಾಗೆ ಹೇಳಿದ ನಂತರ ತಿಳಿಯಿತು. ರಂಗಸ್ವಾಮಿ ಶುರುಮಾಡಿದ: ''ಸಾ.. ಸಾಯಂಕಾಲ ..ನಿಮ್ಮ ಮನೆತವ ಬರೋಣ ಅಂತಿದ್ದೀನಿ, ಸಿಕ್ತಿರಲ್ವಾ ಸಾ ?'' ಅವನ ಏಕಾಏಕಿ ಪ್ರಶ್ನೆಗೆ ನಾನು ಹುಷಾರಾಗಿ ಉತ್ತರಿಸಬೇಕಾಗಿದ್ದುದರಿಂದ ತಕ್ಷಣ ನಾನೊಂದು ಮರು ಪ್ರಶ್ನೆ ಎಸೆದೆ. ''ತಾವು ಬರಲಿರುವ ಮಹಾತ್ಕಾರ್ಯವೇನು?'' ಎಂದೆನು. ರಂಗಸ್ವಾಮಿ ಕಿಸಕಿಸನೆ ನಗುತ್ತ.. ''ನೀವು ಹಾಸ್ಯ ಸಾಯಿತ್ಗಳು.. ಸಾಯೋವಾಗಲು ಹಾಸ್ಯ ಬಿಡೊಲ್ಲ ಅಂತೀರಿ ! ಅದೇ ಸಾ.. ನಾನು ನಿಮ್ಮ ಮೇಲೆ ಒಂದು ಲೇಖ್ನ ಬರಿಬೇಕು ಅಂತಿದ್ದೀನಿ. ಅದಕ್ಕೆ ಸಂಜೆ ನಿಮ್ಮ ಮನೆಗೆ ಬಂದು ನಿಮ್ಮ ಇಷ್ಟ-ಕಷ್ಟ-ಅನಿಷ್ಟಗಳನ್ನೆಲ್ಲ ಕೇಳಿ ತಿಳಿದು ನಿಮ್ಮ ಮೇಲೆ ಒಂದು ಪರಿಚಯ ಲೇಖನ ಬರೆಯೋಣ ಅಂತ, ಬರೆಯೋಣ ಅಂತ.. !'' ಅವನ ಇಂಗಿತ ತೆರೆದಿಟ್ಟನು. ಅವನ ಇಂಗಿತ ಅರಿತು ನಾನೂ ಉಬ್ಬಿ ಹೋದೆನು. 'ಭಲಾರೆ.. ನನ್ನ ಮೇಲೆ ಮತ್ತೊಬ್ಬರು ಲೇಖನ ಬರೆಯುವ ಅಷ್ಟು ಬೆಳೆದು ಬಿಟ್ಟೆನೆ ನಾನು..?' ನನ್ನ ಬಗ್ಗೆ ನನಗೆ ಅಚ್ಚರಿಯಾಯಿತು. ಸಿಕ್ಕಿದ ಹಕ್ಕಿ ಮಿಸ್ ಆದೀತು ಎಂದು ಬಗೆದು.. ''ಖಂಡಿತ ಬನ್ನಿ ಮಿ॥ ರಂಗಸ್ವಾಮಿ. ನೀವು ಬರೆಯೋದು (ಬರೋದು) ಹೆಚ್ಚೋ.. ನಾ ಇರೋದು ಹೆಚ್ಚೋ ?'' ಎಂದು ಹುರಿದುಂಬಿಸಿದೆ.



ಅಂದು ಸಾಯಂಕಾಲ ರಂಗಸ್ವಾಮಿ ಬರುವುದನ್ನೇ ಕಾಯುತ್ತ ಕುಳಿತಿದ್ದೆ. ಕೊನೆಗೂ ಮರಿ ಸಾಹಿತಿ ನಮ್ಮ ಮನೆಯ ಒಳಗಡೆ ಕಾಲಿಟ್ಟನು. ಪದ್ಮಳಿಗೆ ಮೊದಲೇ ವಿನಂತಿಸಿದ್ದರಿಂದ ಒಂದು ಲೋಟ ಕಪ್ಪು ಕಾಫಿ (ಹಾಲು ಹಾಕದ್ದು) ನೀಡಿದಳು. ರಂಗಸ್ವಾಮಿ ಲೋಟದ ಒಳಗಡೆ ಕಣ್ಣಾಯಿಸಿ ಅಚ್ಚರಿ ಹಾಗೂ ಕುತೂಹಲಗಳಿಂದ ನೋಡುತ್ತಲಿದ್ದನು. ಅವನ ಅನುಮಾನ ಏನು ಅಂದ್ರೆ... ಅದೇನು ಕಾಫಿನೋ.. ಕಷಾಯನೋ.. ಇಲ್ಲ ವಿಸ್ಕಿ.. ಬ್ರಾಂದಿ ಏನಾದರು ಇರ ಬಹುದೋ ? ಎನ್ನುವ ಅನುಮಾನ. ಅವನು ಹಾಗೆ ಕುಡಿಯದೆ ತದೇಕ ದೃಷ್ಟಿಯಿಂದ ನೋಡುತ್ತಿದ್ದುದನ್ನು ಗಮನಿಸಿದ ನಾನೇ ಅವನಿಗೆ ಧೈರ್ಯ ಹೇಳಿದೆ. ''ಅದು ಕಾಫಿ ಕಣೊ.. ಕರಿ ಕಾಫಿ ಆರೋಗ್ಯಕ್ಕೆ ಬಾಳ ಒಳ್ಳೆಯದು ಅಂತ ನಾವು ಸದಾ ಯಾವಾಗಲೂ ಇದೇ ಕಾಫಿ ಮಾಡೋದು ನಮ್ಮ ಮನೇಲಿ !'' ಎಂದಾಗ ಧೈರ್ಯವಾಗಿ ರಂಗಸ್ವಾಮಿ ಕಾಫಿಯನ್ನು ಕುಡಿದು ಕುಳಿತನು.

''ಸಾರ್.. ನಾನು ತಮ್ಮ ಸಂದರ್ಶನ ಶುರು ಮಾಡ್ಲೆ .. ? ತಮಗೆ ನಾನು ಮೂರೇ ಮೂರು ಪ್ರಶ್ನೆ ಕೇಳ್ತೀನೆ ಅಷ್ಟೆ !'' ಪೀಠಿಕೆ ಹಾಕಿದನು ರಂಗು.

''ಓಹೋ ಆಗಬಹುದು, ಆದರೆ ಮೂರೇ ಪ್ರಶ್ನೆ ಏಕೆ ಎನ್ನುವ ಅನುಮಾನ ನನಗೆ !''

''ಸಾರ್.. ತಾವು ಈ ಕ್ಷೇತ್ರಕ್ಕೆ ಪ್ರವೇಶಿಸಲು ಕಾರಣ ?''

ರಂಗಸ್ವಾಮಿಯ ಮೊದಲನೆಯ ಪ್ರಶ್ನೆ ಹೊರಬಿದ್ದಿತು. ಇವನ ಪ್ರಶ್ನೆಗಳಿಗೆ ನಾನು ಎಷ್ಟು ಶೇಕಡವಾರು ಪ್ರಾಮಾಣಿಕ ಉತ್ತರ ಹೇಳಬೇಕು ಎಂದು ಯೋಚಿಸತೊಡಗಿದೆ. ''ಸಾರ್ ತಮ್ಮನ್ನೇ ಕೇಳ್ತಾ ಇರೋದು,'' ರಂಗಸ್ವಾಮಿ ಮತ್ತೆ ಬಾಯಿಹಾಕಿದನು. 'ಪಾಪಿ ಮುಂಡೇದು ಸ್ವಲ್ಪ ಯೋಚಿಸಲು ಬಿಡುತ್ತಿಲ್ಲವಲ್ಲ!' ಎಂದು ಒಳಗೊಳಗೆ ಶಾಪ ಹಾಕಿದೆ. ಅದನ್ನು ತೋರಗೊಡದೆ ಮುವತ್ತೆರಡು ಹಲ್ಲುಗಳನ್ನು ಬಿಡುತ್ತ.. ''ನಾನು ಈ ಕ್ಷೇತ್ರಕ್ಕೆ ಏಕೆ ಬಂದೆ ಎಂದರೆ.. ಬೇರೆ ಕ್ಷೇತ್ರಗಳಲ್ಲಿ ನಾನು ಬೆಳೆಯಲು ಜನರು ಬಿಡಲಿಲ್ಲವಲ್ಲ!'' ಅದಷ್ಟು ಪ್ರಾಮಾಣಿಕ ಉತ್ತರವನ್ನೇ ಹೇಳಿದೆ.

''ಸಾಹಿತ್ಯ ಕ್ಷೇತ್ರದಲ್ಲಿ ನೀವು ಹಾಸ್ಯ ಸಾಹಿತ್ಯವನ್ನೇ ಆರಿಸಿಕೊಳ್ಳಲು ಕಾರಣ ?'' ರಂಗಸ್ವಾಮಿ ನಾನು ಮೊದಲು ಪ್ರಶ್ನೆಗೆ ಉತ್ತರಿಸಿದ್ದನ್ನು ಗುರುತು ಹಾಕಿಕೊಂಡು ಮುಂದಿನ ಈ ಪ್ರಶ್ನೆ ಕೇಳಿದ್ದನು. ಅದು ಅವನ ಎರಡನೆಯ ಪ್ರಶ್ನೆ.

''ಬಹಳ ಒಳ್ಳೆಯ ಪ್ರಶ್ನೆ ಕೇಳಿದೆ ನೋಡು.. ನಾನು ನಿಜ ಹೇಳಿದರು ನಂಬುತ್ತೀಯ.. ಸುಳ್ಳು ಹೇಳಿದರು ನಂಬ್ತೀಯ... ನನಗೆ ಈ ಹಾಸ್ಯ ಸಾಹಿತ್ಯದಲ್ಲಿ ಕಿಂಚಿತ್ತೂ ಆಸಕ್ತಿ ಇಲ್ಲ. ಆದರೆ ನಾನು ಬರೆದ ಕಥೆ, ಕಾದಂಬರಿ, ಹನಿ-ಮಿನಿ ಎಲ್ಲ ಲೇಖನಗಳನ್ನು ಪತ್ರಿಕಾ ಸಂಪಾದಕರು ಅವರೇ ಏಕ ಮುಖ ನಿರ್ಧಾರ ತೆಗೆದು ಕೊಂಡು ಹಾಸ್ಯ ಲೇಖನದ ತಲೆಬರಹದಲ್ಲಿ ಪ್ರಕಟಿಸಲು ಪ್ರಾರಂಭಿಸಿಬಿಟ್ಟರು. 'ಪಾಲಿಗೆ ಬಂದದ್ದು ಪಂಚಾಮೃತ' ಎಂದು ನಾನು ಅದಕ್ಕೇ ಅಂಟಿಕೊಂಡುಬಿಟ್ಟೆನು !''

ರಂಗಸ್ವಾಮಿ ಅದನ್ನು ಗುರುತು ಹಾಕಿಕೊಂಡನು. ಮತ್ತೆ ಮುಂದೆ ಇನ್ನೆಂತಹ ತರಲೆ ಪ್ರಶ್ನೆ ಕೇಳಿ ನನ್ನ ತಲೆ ತಿನ್ನುವನೋ ಎಂದು ಯೋಚಿಸುತ್ತಿರುವಾಗಲೇ ನಿಜವಾಗಿಯೂ ಒಂದು ತರಲೆ ಪ್ರಶ್ನೆಯನ್ನೇ ಕೇಳಿಬಿಟ್ಟನು.

''ನಿಮ್ಮ .. ಈ ಸಾಹಿತ್ಯ ರಚನೆಗೆ ಸ್ಫೂರ್ತಿ..ಯಾರು ಸಾರ್ ?'' ಅದು ಅವನ ಮೂರನೆಯ ಹಾಗೂ ಕೊನೆಯ ಪ್ರಶ್ನೆ ಹೊರ ಬಿದ್ದಿತು.

''ಇದು ಇನ್ನೂ ಮುಖ್ಯವಾದ ಪ್ರಶ್ನೆ !'' ಎಂದು ಅವನನ್ನು ಹುರಿದುಂಬಿಸಿದೆನು. ರಂಗಸ್ವಾಮಿ ನನ್ನನ್ನು ಆ ಪ್ರಶ್ನೆ ಕೇಳಿದ ತಕ್ಷಣ ಹಜಾರದಲ್ಲಿ ಇದ್ದ ಅರ್ಧಾಂಗಿ ಪದ್ಮಳ ಕಿವಿಯೂ ನೆಟ್ಟಗಾದದ್ದು ನನ್ನ ಅರಿವಿಗೆ ಬಂತು. ಈಗ ಈ ಪ್ರಶ್ನೆಗೆ ಏನು ಉತ್ತರ ಹೇಳುವುದು.. ? ಎಂದು ಯೋಚಿಸುತ್ತಿರುವಾಗಲೆ ರಂಗಸ್ವಾಮಿ ಮತ್ತೆ ಎಚ್ಚರಿಸಿದನು.

''ನಿಮ್ಮ ಈ ಸಾಹಿತ್ಯ ರಚನೆಯ ಸ್ಫೂರ್ತಿ.. ನಿಮ್ಮ ಶ್ರಿಮತಿಯವರು ತಾನೆ.. ?'' ಪಾಪಿ ಮುಂಡೇದು, ಅವನು ಅದೇ ಉತ್ತರ ಹೇಳುವಂತೆ ಪ್ರೇರೇಪಿಸಿದನು. ಒಳಗಡೆ ಹಜಾರದಿಂದ ಪದ್ಮ ನನ್ನನ್ನೇ ನಿಂತು ದುರುಗುಟ್ಟಿ ನೋಡುತ್ತಲಿದ್ದಳು. ''ಏನ್ ರಂಗಸ್ವಾಮಿ.. ಎಲ್ಲಾ ನಿಮಗೆ ಗೊತ್ತು, ಮತ್ತೆ ಕೇಳ್ತೀರಲ್ಲಾ.. ನನ್ನ ಈ ಎಲ್ಲಾ ಸಾಹಿತ್ಯ ರಚನೆಗೂ ನನ್ನ ಅರ್ಧಾಂಗಿ ಪದ್ಮಳೇ ಕಾರಣ !'' ಎಂದು ನಗುತ್ತ ಹೇಳಿದೆನು. ''ಸಾರ್.. ಅದಕ್ಕೆ ಏನಾದರು ಸಮಜಾಯಿಸಿ ಕೊಡ್ತೀರಾ ?'' ರಂಗ ಮತ್ತೆ ಕೆಣುಕಿ- ತಿಣುಕಿದನು. ''ನಾನು ದಿನಕ್ಕೊಂದು ಲೇಖನ ಬರೆಯದೆ ಇದ್ದರೆ ಅವಳು ಹೊಡೆಯುತ್ತಾಳೆ'' ಎಂದು ನಾಲಿಗೆ ಕಚ್ಚಿದೆನು. (ಇದನ್ನು ಲೇಖನದಲ್ಲಿ ಬರೆಯದಂತೆ ವಿನಂತಿಸಿದ್ದೆ !)

ಕ. ಬ. ವೀರಣ್ಣ ಕಣ್ಣಾಗಾಲ
ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ರಾಜರಾಜೇಶ್ವರಿ ನಗರ, ಬೆಂಗಳೂರು - ೫೬೦ ೦೯೮

# ಉರುಳಾಗುತ್ತಿರುವ ಉದಾರೀಕರಣ

**ಚೀ**ನಾ ದೇಶದಿಂದ ಅಕ್ಕಿ ಬಂದಿದೆಯಂತೆ ! ಸೋನಾ ಮಸ್ಸೂರಿ ಅಕ್ಕಿ ಬರೇ ೫ ರೂಪಾಯಿಗೆ ೧ ಕೆ. ಜಿ. ಅಕ್ಕಿಯಂತೆ ! ಬಹಳ ಅಗ್ಗದಲ್ಲಿ ಆಹಾರ ಪದಾರ್ಥಗಳು ಬರುತ್ತಿವೆಯಂತೆ ! ಹಾಲು ಲೀಟರಿಗೆ ೪ ರೂಪಾಯಿಯಂತೆ ! ಕುರಿ ಮಾಂಸ ಕೇಜಿಗೆ ೨೦ ರೂಪಾಯಿಯಂತೆ ! ಎಮ್ಮೆಗಿಂತ ದೊಡ್ಡ ಕುರಿಗಳಂತೆ ! ಸುದ್ದಿ ಕಿವಿಯಿಂದ ಕಿವಿಗೆ ಬಿರುಗಾಳಿಯಂತೆ ಹಬ್ಬುತ್ತಿದೆ. ಕೊಂಡು ತಿನ್ನುವವ ಹರ್ಷೋದ್ಗಾರ ಮಾಡುತ್ತಿದ್ದರೆ ರೈತ ಕುಸಿದು ಕಂಗಾಲಾಗಿದ್ದಾನೆ.

ನನಗೆ ಇನ್ನೂ ಹಸಿಹಸಿಯಾದ ನೆನಪು ! ೧೯೬೫ ರ ಆಸುಪಾಸಿನ ಕಾಲ ! ನೆಹರು - ಹಸಿರು ಕ್ರಾಂತಿಯ ಉತ್ತುಂಗ ! ಗ್ರಾಮಸೇವಕರು ಹಳ್ಳಿ ಹಳ್ಳಿಗಳಿಗೆ ತಿರುಗಿ ಮನೆಗೊಂದು "ಕಿಟ್" ಉಚಿತ ಸೀಮೆಗೊಬ್ಬರ ಹಂಚುತ್ತಿದ್ದರು. ಗಿಡಕ್ಕೆ ಒಂದು ಚಮಚ ಹಾಕಿ ನೋಡಿ ಎಂದು ಹುರಿದುಂಬಿಸುತ್ತಿದ್ದರು.

ನಮ್ಮ ಮನೆಯಲ್ಲೂ ನಮ್ಮಕ್ಕ ಒಂದು ಕುಂಬಳ ಗಿಡಕ್ಕೆ ಅವರು ಕೊಟ್ಟಿದ್ದ ಗೊಬ್ಬರವನ್ನು ಹೆದರಿ ಹೆದರಿಯೇ ನಾಲ್ಕು ಕಾಳು ಉದುರಿಸಿದ್ದಳು. ವಾರ ಒಪ್ಪತ್ತಿನಲ್ಲಿ ಆ ಬಳ್ಳಿಯ ಎಳೆಗಳ ಸಂದುಗೊಂದುಗಳಲ್ಲೆಲ್ಲ ನೂರಾರು ಕುಡಿಯೊಡೆದು ಕಣ್ಣು ಕಣ್ಣುಗಳಲ್ಲೆಲ್ಲಾ ಹೀಚು ಮಿಡಿಗಳು ಬಿಟ್ಟು ಕಾಯಾಗಿ ಉರುಳಿದ್ದವು. "ಆವತ್ತಿನ ಕಾಲದಲ್ಲಿ ಸೋಗೆ ಕರಿಗುಡ್ಡೆಯ ಮೇಲೆ ಕುಂಬಳ ಬೀಜವೊಂದನ್ನು ಹಾಕಿದರೆ ಬಳ್ಳಿ ಬೆಳೆದು ಇಡೀ ಬಳ್ಳಿಯಲ್ಲಿ ಕಾಯಿ ಬಿಡುತ್ತಿದ್ದವು !" ಈ ಗೊಬ್ಬರದ ಚಮತ್ಕಾರದಿಂದ ಒಂದು ಮಾಯಾಜಾಲವೇ ನಡೆದಂತೆ ಕಂಡಿತ್ತು, ಅಂದು ನನಗೆ !

ಇನ್ನೊಂದು ನಿದರ್ಶನ: ಈಗ್ಗೆ ೨ ವರ್ಷಗಳ ಹಿಂದಷ್ಟೆ, ಐ. ಟಿ. ಸಿ. ಕಂಪನಿಯವರು ೧೦ ಪೈಸೆಗೊಂದು ಸಿಗರೇಟೆಂದು ಅಬ್ಬರದ ಪ್ರಚಾರದೊಂದಿಗೆ ಸಿಗರೇಟನ್ನು ಮಾರುಕಟ್ಟೆಗೆ ಬಿಟ್ಟಿದ್ದರು. ೧೦ ಪೈಸೆಗೊಂದು ಬೀಡಿಯೂ ಸಿಗದಿದ್ದ ಕಾಲದಲ್ಲಿ ೧೦ ಪೈಸೆಗೆ ಸಿಗರೇಟನ್ನು ಹೇಗೆ ಮಾರಿಯಾರೆಂದು ಅನುಮಾನ ಕಾಡಿತ್ತು. ಆದರೆ ನಂತರ ತಿಳಿಯಿತು ! ಆಗತಾನೆ ತಲೆಯೆತ್ತುತ್ತಿದ್ದ ಸ್ಥಳೀಯ ಸಿಗರೇಟು ಉದ್ಯಮ ಹಾಗೂ ಬೀಡಿ ಉದ್ಯಮಗಳನ್ನು ಮಗ್ಗ ಮಲಗಿಸಲು ಹುನ್ನಾರವೆಂಬುದು.

**ಉದಾರೀಕರಣ:** ಇದು ಸಾಮ್ರಾಜ್ಯಶಾಹಿಯ ವಿಸ್ತರಣೆಯ ಇನ್ನೊಂದು ರೂಪವಷ್ಟೆ. ಹಿಂದಿನ ಕಾಲದಲ್ಲಿ ರಾಜ್ಯ ವಿಸ್ತರಣೆ ಶಸ್ತ್ರಾಸ್ತ್ರಯುದ್ಧಗಳ ಮುಖಾಂತರ ನಡೆಯುತ್ತಿದ್ದರೆ, ಇಂದು ಕಾಲ ಬದಲಾಗಿದೆ. ಅಂತರ್‍ರಾಷ್ಟ್ರೀಯ ಅರಿವು ತಿಳುವಳಿಕೆ ಹೆಚ್ಚಿದಂತೆ ರಾಷ್ಟ್ರಗಳ ಗಡಿ ವಿಸ್ತರಣೆ ಅಸಾಧ್ಯ. ಸಾಮ್ರಾಜ್ಯಶಾಹಿ ಎಂದರೆ ಇತರ ರಾಜ್ಯಗಳ ಸಂಪತ್ತನ್ನು ಕೊಳ್ಳೆ ಹೊಡೆಯುವುದು. ಆ ಕೊಳ್ಳೆ ಹೊಡೆಯುವ ಕೆಲಸಕ್ಕೆ ಇಂದಿನ ಪರಿಸ್ಥಿತಿಗೆ ಅನುಗುಣವಾಗಿ ಗಡಿ ವಿಸ್ತರಣೆ ಮಾಡಲು ಸಾಧ್ಯವಿಲ್ಲದ್ದರಿಂದ, ಬಂಡವಾಳ ವೆಂಬ ಅಸ್ತ್ರದಿಂದ ಆರ್ಥಿಕ ಬಲಾಢ್ಯ ರಾಷ್ಟ್ರಗಳು ಅಭಿವೃದ್ಧಿಶೀಲ ರಾಷ್ಟ್ರಗಳ ಲೂಟಿ ಮಾಡುವುದು. ಇದೇ ಇಂದಿನ ಸಾಮ್ರಾಜ್ಯಶಾಹಿಯ ಇನ್ನೊಂದು ರೂಪ !

ಬಲಾಢ್ಯ ರಾಷ್ಟ್ರಗಳ ಕುತಂತ್ರವೇ ಈ ಅಂತರ್‍ರಾಷ್ಟ್ರೀಯ ಉದಾರೀಕರಣದ ನೀತಿ ! ಮಕ್ಕಳಿಗೂ ಅರ್ಥವಾಗುವ ಸತ್ಯವಿದು. ಒಬ್ಬ ಸದೃಢ ಪೈಲ್ವಾನನೆದುರು, ಬಡಕಲು ಬಡವನೊಬ್ಬ ಎಂದಾದರೂ ಕುಸ್ತಿ ಮಾಡಲು ಸಾಧ್ಯವೆ ? ಉದಾರೀಕರಣವೆಂಬುದೂ ಇದೇ ರೀತಿ.

ಎಲ್ಲ ರಂಗಗಳಲ್ಲೂ ಅಭಿವೃದ್ಧಿ ಸಾಧಿಸಿದ ರಾಷ್ಟ್ರಗಳ ಉತ್ಪಾದನಾ ಸಾಮರ್ಥ್ಯ ಹಾಗೂ ಯಥೇಚ್ಛ ಬಂಡವಾಳದ ಎದುರು ಈಗ ತಾನೆ ಹೊರ ಜಗತ್ತಿಗೆ ಕಣ್ಣು ಬಿಡುತ್ತಿರುವ ತೃತೀಯ ಜಗತ್ತಿನ ರಾಷ್ಟ್ರಗಳು ಪೈಪೋಟಿ ಮಾಡಿ ಉತ್ಪಾದನೆಯನ್ನು ಉಳಿಸಿಕೊಳ್ಳಲು, ಮಾರುಕಟ್ಟೆ ಹಿಡಿಯಲು ಸಾಧ್ಯವೆ ?

ಒಂದು ಕಡೆ ಜಪಾನ್, ಇಂಗ್ಲೆಂಡ್, ಫ್ರಾನ್ಸ್‌ನಂತಹ ರಾಷ್ಟ್ರಗಳು ತಮ್ಮಲ್ಲಿರುವ ನೈಸರ್ಗಿಕ ಸಂಪತ್ತನ್ನೆಲ್ಲಾ ಸೀಮಾಂತ ಉಪಯೋಗ ಪಡಕೊಂಡು ಬಂಡವಾಳ ಹೆಚ್ಚಿಸಿಕೊಂಡು ಇನ್ನೂ ಹೆಚ್ಚಿನ ಉತ್ಪಾದನೆಗಾಗಿ ಹೊರರಾಷ್ಟ್ರಗಳ ಕಚ್ಚಾ ಸಂಪನ್ಮೂಲಗಳ ಖರೀದಿಗೆ ತುದಿಗಾಲಲ್ಲಿ ನಿಂತಿರುವುದು. (ಏಕೆಂದರೆ ಹೊರಗಿನಿಂದ ಕಚ್ಚಾ ಸಂಪನ್ಮೂಲ ಬಂದರೆ ಮಾತ್ರ ಅಲ್ಲಿನ ಉದ್ಯಮಗಳು ನಡೆಯುವುದು).

ಇನ್ನೊಂದು ಕಡೆ ಭಾರತ, ಪಾಕಿಸ್ತಾನ, ಆಫ್ರಿಕಾದಂತಹ ರಾಷ್ಟ್ರಗಳು ತಮ್ಮಲ್ಲಿರುವ ಸಂಪನ್ಮೂಲವನ್ನು ಬಳಸಿಕೊಳ್ಳಲೂ ಶಕ್ತಿಯಿಲ್ಲದೇ ಬರೇ ಕಚ್ಚಾ ಸಂಪನ್ಮೂಲಗಳನ್ನೇ ಮಾರುವ ದೈನೇಸಿ ದಟ್ಟದರಿದ್ರ ಸ್ಥಿತಿ. (ನಮ್ಮಲ್ಲಿ ಕುದುರೆಮುಖ ಯೋಜನೆಯಂತಹವುಗಳ ಮುಖಾಂತರ ಬರೇ ಅದಿರನ್ನು ಮಾರುತ್ತಿದ್ದಾರಲ್ಲ ಹಾಗೆ !)

ಒಂದು ಕಡೆ ಅತ್ಯುನ್ನತ ಜೈವಿಕ ತಂತ್ರಜ್ಞಾನ ಸಾಧಿಸಿದ ರಾಷ್ಟ್ರಗಳಲ್ಲಿ ಕೃಷಿ, ಆಹಾರ ಉತ್ಪಾದನೆ, ಯಥೇಚ್ಛವಾಗಿ ಹೆಚ್ಚುತ್ತಿದ್ದು ಹೊರ ರಾಷ್ಟ್ರಗಳ ಮಾರುಕಟ್ಟೆ ಗಳಿಸಿಕೊಳ್ಳುವ ತವಕ. ಇನ್ನೊಂದು ಕಡೆ ಪುರಾತನ ಬೇಸಾಯದಿಂದ ಉತ್ಪಾದನೆ ಏರದೆ ಕೊಂಡುಣ್ಣುವವರಿಗೆ ಅಗ್ಗಕ್ಕೆ ಸಿಗದೆ, ಅಗ್ಗಕ್ಕೆ ಸಿಕ್ಕರೆ ಏನನ್ನಾದರೂ ಕೊಳ್ಳುವ ಸ್ಥಿತಿ ! ಒಂದು ಕಡೆ ಅಸಹಜ ಉತ್ಪಾದನಾ ಕ್ರಮದಿಂದಾಗಿ ಉತ್ಪನ್ನಗಳಲ್ಲಿ ಉತ್ತಮ ಗುಣಮಟ್ಟವಿಲ್ಲದ ಕಳಪೆ ಆಹಾರ ಉತ್ಪಾದನೆ (ಅಂದರೆ ಕೃತಕ ಗೊಬ್ಬರ, ಔಷಧಿಗಳ ಉಪಯೋಗದಿಂದಾದ ಉತ್ಪಾದನೆ), ಇನ್ನೊಂದು ಕಡೆ ಸಹಜ ಉತ್ಪಾದನೆಯಿಂದ ಗುಣ-ಸತ್ವವಿರುವ ಆಹಾರ. ಶ್ರೀಮಂತ ರಾಷ್ಟ್ರಗಳು ತಮ್ಮ ಅಸಹಜ ಉತ್ಪನ್ನಗಳನ್ನು ಮಾರಲು ಹಾಗೂ ಸಹಜ ಉತ್ಪನ್ನಗಳನ್ನು ಲೂಟಿ ಹೊಡೆಯಲು ತೃತೀಯ ಜಗತ್ತಿನ ಈ ದರಿದ್ರ ರಾಷ್ಟ್ರಗಳ ಕಡೆಗೆ ನೀಡಿದ ಗಮನವೇ ಈ ಉದಾರೀಕರಣದ ನೀತಿ. ಈ ಕುತಂತ್ರದಿಂದಲೇ ಹುಟ್ಟಿಕೊಂಡಿರುವಂತಹವು ಈ ಗ್ಯಾಟ್, ಡಬ್ಲ್ಯೂ. ಟಿ. ಓ., ಐ. ಎಮ್. ಎಫ್., ಗ್ಲೋಬಲೈಜೇಷನ್, ಲಿಬರಲೈಜೇಷನ್‌ನಂತಹ ಮಂತ್ರಗಳು ಯಾರಿಗೆ ಅರ್ಥವಾಗುವುದಿಲ್ಲ ! ಈ ಉದಾರೀಕರಣವೆಂಬ ಪಿತೂರಿ ! ಯಾರನ್ನು ಉದ್ಧಾರ ಮಾಡಲು ಈ ಉದಾರೀಕರಣ ! ಯಾರಿಗೆ ನಷ್ಟ ಈ ಉದಾರೀಕರಣದಿಂದ !

ಭಾರತದಂತಹ ದೇಶಗಳ ಆರ್ಥಿಕತೆ ನಿಂತಿರುವುದೇ ೭೦ ಭಾಗ ಕೃಷಿ ಆಧಾರದ ಮೇಲೆ. ಈ ದೇಶದ ಜನರ ಕೊಳ್ಳುವ ಬಳಸುವ ಚಟುವಟಿಕೆ ನಿಂತಿರುವುದೇ ಕೃಷಿ ಕ್ಷೇತ್ರದ ಮೇಲೆ. ಚೀನದಿಂದ ಇವತ್ತು [illegible] ರೂ.ಗೆ ಕೇಜಿ ಅಕ್ಕಿ ಬರುತ್ತದೆಂದೂ, ನಾಳೆ ಅಮೆರಿಕಾದಿಂದ ೧ ರೂ.ಗೆ ಗೋಧಿ, ಡೆನ್ಮಾರ್ಕ್‌ನಿಂದ ೪ ರೂ.ಗೆ ಹಾಲು ಬರುತ್ತದೆಂದೂ ಇಲ್ಲಿ ಈಗ ಕೊಂಡುಣ್ಣುವುದೇ ಲೇಸೆಂದು ಹೊರಗಿನ ಉತ್ಪನ್ನಗಳನ್ನೇ ಅವಲಂಬಿಸಿದರೆ, ಈ ದೇಶದ ಬೇಸಾಯ ನಾಶವಾಗಿ ಮುಂದೊಂದು ದಿನ ಹೊರಗಿನಿಂದ ಆಹಾರ ಬರದೆ ಉಣ್ಣುವಂತಿಲ್ಲದ ಸ್ಥಿತಿ ನಿರ್ಮಾಣವಾಗಲು ತಡವಾಗಲಾರದು ! ಆ ದಿನ, ಹೊರಗಿನಿಂದ ಬಂದರೂ ಇಲ್ಲಿನ ಆರ್ಥಿಕತೆಯ ನಾಶವಾದಾಗ ಎಷ್ಟೇ ಅಗ್ಗಕ್ಕೆ ಸಿಕ್ಕರೂ ಕೊಳ್ಳುವ ಶಕ್ತಿಯೇ ಇರುವುದಿಲ್ಲವಲ್ಲ ! ಆಗ ಏನು ಮಾಡುವುದು ? ಪುನಃ ಬೇಸಾಯ ಆರಂಭಮಾಡಲು ರೈತನ ಬಳಿ ಜಮೀನು ಇರುವುದಿಲ್ಲ. ಏಕೆಂದರೆ ನಷ್ಟವಾಗುವ ಭೂಮಿಯನ್ನಿಟ್ಟುಕೊಂಡು ಕುಳಿತಿರಲು ಅವನೇನು ಗಾಳಿ ಕುಡಿದುಕೊಂಡಿರಲು ಸಾಧ್ಯವೆ ? ಕೊಳ್ಳುವವರ ಜೊತೆ ಸೇರಿ ಅವನೂ ಕೊಳ್ಳುಗನಾಗಿ, ಕೊಳ್ಳಲು ಬೇಕಾದ ಹಣಕ್ಕಾಗಿ ಇರುವ ತನ್ನ ಆಸ್ತಿಯನ್ನೇ ಅರು-ಮೂರು ಕಾಸಿಗೆ ಮಾರಿಕೊಂಡಿರುತ್ತಾನೆ. ಭೂಮಿ ಕೊಳ್ಳಲು ಸಜ್ಜಾಗಿ ನಿಂತಿರುವ ಅಂಬಾನಿಯಂತಹ ಕಾರ್ಪೊರೇಟ್ ಜಗತ್ತು ಭೂಮಿಯನ್ನೆಲ್ಲಾ ಕೊಂಡು ಕೊಂಡು ಅವರ ಹಣದಾಹದ ನೀಲಗಿರಿಯಂತಹ ಪ್ಲಾಂಟೇಷನ್ ಬೆಳೆ ಮೇಲೆದ್ದಿರುತ್ತದೆ. ರೈತರೇ ತಮ್ಮದಲ್ಲದ ನೀಲಗಿರಿ ಪ್ಲಾಂಟೇಷನ್‌ಗಳಲ್ಲಿ ಮಾಲಿಕರೆದುರು ಕೊಟ್ಟಷ್ಟು ಕೂಲಿಗೆ 'ಕ್ಯೂ' ನಿಂತಿರುತ್ತಾರೆ. ಉದಾರೀಕರಣದಿಂದ ನಮ್ಮ ತರಹದ ರಾಷ್ಟ್ರಗಳು ಸಾಧಿಸುವುದು ಇದನ್ನೇ!

ಇನ್ನು ಮುಂದೆ ಅಂತರ್‍ರಾಷ್ಟ್ರೀಯ ಮಟ್ಟದಲ್ಲಿ ನಮ್ಮಂತಹ ದೇಶದ ಜನರು ಪೈಪೋಟಿ ಹೇಗೆ ಮಾಡುವುದೆಂದರೆ "ಬೀದಿ ನಾಯಿಗಳ ಎಂಜಲೆಲೆ ಜಗಳ." ಎಂಜಲೆಲೆ ಎಷ್ಟೊತ್ತಿಗೆ ಬಿಸಾಡುತ್ತಾರೆಂದು ಕಾದು ನಿಲ್ಲುವುದು. ಬಿಸಾಡಿದ ತಕ್ಷಣ ಕಚ್ಚಾಡಿ ಮುನ್ನುಗ್ಗುವುದು. ಹೇಗಿದೆ ನಮ್ಮ ರಾಜಕಾರಣಿಗಳ ಮಂತ್ರವಾಗಿರುವ ಅಂತರ್‍ರಾಷ್ಟ್ರೀಯ ಉದಾರೀಕರಣದ ಅಭಿವೃದ್ಧಿ?

**ಕೋಡ್ಲು ವೆಂಕಟೇಶ್**
ರೈತ ಹೋರಾಟಗಾರ, ತೀರ್ಥಹಳ್ಳಿ ತಾಲ್ಲೂಕು
ಶಿವಮೊಗ್ಗ ಜಿಲ್ಲೆ

### ನಾಗಾಲಾಗದು

ಅ. ರಾ. ಮಿತ್ರ

ದೊಡ್ಡ ಸಾಹಿತಿ ಸತ್ತಾಗ
ಮಾತಿನ ಜಡೆ ಮಳೆಯಲ್ಲಿ
ಆಡಂಬರದ ಗುಡುಗಲ್ಲಿ ಮೆರವಣಿಗೆ ಗಲಭೇಲಿ
ಸತ್ತಾತ್ಮಕ್ಕೆ ಶಾಂತಿ ಎಲ್ಲಿ?

# ಸಮಾಜ ವಿಜ್ಞಾನಿಯ ಕಣ್ಣಲ್ಲಿ ಭಾಷೆ

> ಸಾಹಿತ್ಯಕ್ಕಿಂತಲೂ ಭಾಷೆ ದೊಡ್ಡದು, ವಿಜ್ಞಾನಕ್ಕಿಂತಲೂ ಭಾಷೆ ದೊಡ್ಡದು. ವಾಸ್ತವವನ್ನು ಕಲ್ಪನೆಯ ಕುಂಚದಲ್ಲಿ ಸೃಷ್ಟಿಸುವ ಸಾಹಿತಿಗೆ ಹೇಗೆ ಭಾಷೆಯ ಅಗತ್ಯವಿದೆಯೊ ಹಾಗೆಯೇ ವಾಸ್ತವವನ್ನು ಶಾಸ್ತ್ರೀಯ ಭಾಷೆಯಲ್ಲಿ ವಿವರಿಸುವ ವಿಜ್ಞಾನಿಗೂ ಭಾಷೆಯು ಬೇಕಾಗುತ್ತದೆ. ಭಾಷೆಯಿಲ್ಲದೆ ಅಭಿವ್ಯಕ್ತಿ ಸಾಧ್ಯವಿಲ್ಲ ಎಂಬುದು ಇಬ್ಬರಿಗೂ ಗೊತ್ತು.

**ಡಾ|| ಎಚ್. ಎಂ. ಮರುಳಸಿದ್ಧಯ್ಯ**

ಆಲಂಕಾರಿಕವಾಗಿ ಮಾತ್ರವೇ ಅಲ್ಲ, ವಾಸ್ತವವಾಗಿಯೂ ಸಮಾಜ ವಿಜ್ಞಾನಿಯ ಕಣ್ಣಲ್ಲಿ ಭಾಷೆ ಹೇಗಿರುತ್ತದೆ ಎನ್ನುವುದಕ್ಕಿಂತಲೂ ಸಮಾಜ ವಿಜ್ಞಾನಿಯ ಕಣ್ಣೇ ಭಾಷೆ ಎಂದು ಹೇಳುವುದು ಉಚಿತವಾದದ್ದು. ಯಾಕೆಂದರೆ, ಸಮಾಜ ವಿಜ್ಞಾನಿಯು ಮಾನವ ಸಮಾಜವನ್ನು ಅರಿತುಕೊಳ್ಳುವುದು ಪ್ರಮುಖವಾಗಿ ಭಾಷೆಯ ಮೂಲಕವೇ – ಅದು ಬರೆಹದ ಮೂಲಕವೇ ಆಗಿರಲಿ, ಮೌಖಿಕವೇ ಆಗಿರಲಿ. ಮಾನವನ ಹಾವ-ಭಾವಗಳು, ಕೃತಿಗಳು, ಆಚರಣೆಗಳು ವಿಜ್ಞಾನಿಗೆ ಭಾಷೆಯ ಜೊತೆಗೆ ಬೆಂಬಲವಾಗಿರುತ್ತವೆ ಎಂಬುದೂ ನಿಜವೇ. ಇವುಗಳನ್ನೂ ಭಾಷೆಯ ಮೂಲಕ ಅಭಿವ್ಯಕ್ತಿಸಬೇಕು, ಅರ್ಥೈಸಿಕೊಳ್ಳಬೇಕು.

ಮಾನವ ಸಂಬಂಧಗಳ ವಿಷಯಗಳೆಲ್ಲವಕ್ಕೂ ಅನ್ವಯಿಸುವ ಒಂದು ಸಾಮಾನ್ಯವಾದ ಶಬ್ದವೇ ಸಮಾಜ ವಿಜ್ಞಾನ. ಸಮಾಜದ ವಿವಿಧ ಅಂಗಗಳನ್ನು ಅರಿತುಕೊಳ್ಳುವ ಪ್ರಯತ್ನದಲ್ಲಿ ತೊಡಗಿರುವ ಎಲ್ಲ ಶಿಸ್ತುಗಳೂ ಸಮಾಜ ವಿಜ್ಞಾನದ ಪರಿಧಿಯೊಳಗೇ ಬರುತ್ತವೆ. ಸಮಾಜ ವಿಜ್ಞಾನದ ನಿರ್ವಚನಕೋಶದ ಪ್ರಕಾರ ಸಮಾಜ ವಿಜ್ಞಾನಗಳು ಅರ್ಥಶಾಸ್ತ್ರ, ಸರಕಾರ (ಅಂದರೆ, ರಾಜ್ಯಶಾಸ್ತ್ರ), ಕಾನೂನು (ಅಂದರೆ, ನ್ಯಾಯಶಾಸ್ತ್ರ), ಶಿಕ್ಷಣ (ಶಾಸ್ತ್ರ), ಮನೋವಿಜ್ಞಾನ, ಸಮಾಜಶಾಸ್ತ್ರ, ಮಾನವಶಾಸ್ತ್ರ. ಆದರೆ, ಸಮಾಜ ವಿಜ್ಞಾನಕ್ಕೆ ಇನ್ನೂ ಹಲವಾರು ಶಾಖೆ-ಉಪಶಾಖೆಗಳು ಇವೆ: ಮಾನವ ಭೌಗೋಲಿಕ ಶಾಸ್ತ್ರ, ಜೀವಿಪರಿಸ್ಥಿತಿ ಶಾಸ್ತ್ರ, ಇತಿಹಾಸ, ಸಾಮಾಜಿಕ ಮನೋಚಿಕಿತ್ಸಾ ಶಾಸ್ತ್ರ, ಸಮಾಜಕಾರ್ಯ, ಸಂಖ್ಯಾಶಾಸ್ತ್ರ, ಜಾನಪದಶಾಸ್ತ್ರ, ಧರ್ಮಶಾಸ್ತ್ರ, ನೀತಿಶಾಸ್ತ್ರ, ಭಾಷಾಶಾಸ್ತ್ರ, ಇತ್ಯಾದಿ.

ಈ ಎಲ್ಲ ಶಾಸ್ತ್ರಗಳು ಅಥವಾ ವಿಜ್ಞಾನಗಳು ಮಾನವ ಸಮಾಜದ ವಿವಿಧ ಅಂಗಗಳನ್ನು, ವಿನ್ಯಾಸಗಳನ್ನು, ಅವುಗಳೊಳಗಿರುವ ಕ್ರಿಯಾತ್ಮಕ ಸಂಬಂಧಗಳನ್ನು ಅಧ್ಯಯನ ಮಾಡುತ್ತವೆ. ಇವೆಲ್ಲವುಗಳ ಗುರಿ ಒಂದೇ: ಮಾನವ ಸಮಾಜದ ಸ್ಥಿತಿ ಮತ್ತು ಗತಿ ಹಾಗೂ ಇದು ಇತರ ವೈಶ್ವಿಕ ಸಂಗತಿಗಳ ಜೊತೆ ಹೊಂದಿರುವ ಸಂಬಂಧಗಳು. ಆದುದರಿಂದಲೇ ಈ ಎಲ್ಲ ವಿಜ್ಞಾನಗಳು ಪಾರಸ್ಪರಿಕವಾಗಿ ಕ್ರಿಯಾತ್ಮಕ ಸಂಬಂಧಗಳನ್ನು ಹೊಂದಿವೆ. ಇವೆಲ್ಲವೂ ಪರಿಪೂರ್ಣವಾದ ಅಥವಾ ಕೇವಲವೆಂದು ಕರೆಯಲ್ಪಡುವ ಶಿಸ್ತುಗಳಲ್ಲ; ಇವು ಪಾರ್ಶ್ವ ಶಿಸ್ತುಗಳು, ಪೂರಕ ಶಿಸ್ತುಗಳು.

ಇವೆಲ್ಲವೂ ಮಾನವ ಸಮಾಜವನ್ನು ಅಧ್ಯಯನ ಮಾಡುವುದು ಮತ್ತು ಅರ್ಥಮಾಡಿಕೊಳ್ಳುವುದು ಭಾಷೆಯ ಮೂಲಕ, ಮತ್ತು ಆ ಭಾಷೆಯಲ್ಲಿನ ವಿವಿಧ ಛಾಯಾರ್ಥಗಳ ಮೂಲಕ. ಸಮಾಜ ವಿಜ್ಞಾನಗಳು ಕಂಡರಿಸಿಕೊಂಡು ಉಪಯೋಗಿಸುವ ಪಾರಿಭಾಷಿಕ ಶಬ್ದಗಳು ಎಲ್ಲ ವಿಜ್ಞಾನಿಗಳಿಗೂ ಬಹುತೇಕ ಸಮಾನವಾಗಿ ನೆರವಾಗುತ್ತವೆ. ಆದುದರಿಂದಲೂ ಇವು ಅಂತರ-ಶಿಸ್ತೀಯ ಮಾರ್ಗದೃಷ್ಟಿಯನ್ನು ಅಳವಡಿಸಿಕೊಳ್ಳುವ ಅನಿವಾರ್ಯತೆಯಿದೆ.

ಸಮಾಜ ವಿಜ್ಞಾನಕ್ಕೂ ಭಾಷೆಗೂ ಎಂಥ ಸಂಬಂಧವಿದೆ ಎಂಬುದನ್ನು ಐದಾರು ಪ್ರಸಂಗಗಳನ್ನು ಪ್ರಸ್ತಾಪಿಸುವುದರ ಮೂಲಕ ಅರ್ಥಮಾಡಿಕೊಳ್ಳಬಹುದು:

೧) ಅಂತರಶಿಸ್ತೀಯ ಮಾರ್ಗದೃಷ್ಟಿಯ ಅನಿವಾರ್ಯತೆಯ ಕಾರಣದಿಂದ ಎಲ್ಲ ವಿಜ್ಞಾನಿಗಳೂ ಭಾಷೆ-ಉಪಭಾಷೆಗಳನ್ನು ಬಳಸಿಕೊಳ್ಳುವುದರ ಜೊತೆಗೆ ಎಲ್ಲ ವಿಜ್ಞಾನಗಳ ಪಾರಿಭಾಷಿಕ ಶಬ್ದಗಳನ್ನು ಪರಿಚಯ ಮಾಡಿಕೊಳ್ಳಲೇಬೇಕಾಗುತ್ತದೆ. ಆ ಪಾರಿಭಾಷಿಕ ಶಬ್ದಗಳ ಪರಿಚಯವಿಲ್ಲದಿದ್ದರೆ ವಿಜ್ಞಾನಗಳು ಬೆಳೆಯಲು ಸಾಧ್ಯವಾಗುವುದಿಲ್ಲ.




೨) ಭಾಷೆಯ ಮೂಲಕವೇ ಮಾನವ ಸಂಬಂಧಗಳನ್ನು, ಸಂಘ - ಸಂಸ್ಥೆಗಳನ್ನು, ಆಚಾರ-ವಿಚಾರಗಳನ್ನು, ಮೌಲ್ಯಗಳ ಸಂಕೀರ್ಣತೆಯನ್ನು, ವೈಯಕ್ತಿಕ-ಸಾಂಘಿಕ-ಸಾಮುದಾಯಕ ವರ್ತನೆಗಳನ್ನು ಒಟ್ಟಿನಲ್ಲಿ ಸಾಂಸ್ಕೃತಿಕ ಸ್ಥಿತಿ-ಗತಿಯನ್ನು ಅರಿತುಕೊಳ್ಳಲು ಸಾಧ್ಯವಾಗುತ್ತದೆ.

೩) ಪಾಲ್ಗೊಂಡ ಪರಿವೀಕ್ಷಣೆ, ಅವಲೋಕನ, ಕ್ಷೇತ್ರಕಾರ್ಯ, ಇತ್ಯಾದಿಗಳ ಸಂದರ್ಭದಲ್ಲಿ ಜನರೊಡನೆ ಬೆರೆತು ಅವರ ದಿನದಿನದ ಮತ್ತು ವಿಶೇಷ ಸಂದರ್ಭಗಳಲ್ಲಿ ಕಾರ್ಯನಿರತನಾಗಿರುವ ವಿಜ್ಞಾನಿ-ಸಂಶೋಧಕನು ಭಾಷೆಯ ಮೂಲಕವೇ ಜನರೊಡನೆ ಸಂಭಾಷಿಸಿ ವಿಷಯವನ್ನು ಸಂಗ್ರಹಿಸಬೇಕಾಗುತ್ತದೆ. ಇದಕ್ಕಾಗಿ ಸ್ಥಳೀಯ ಭಾಷೆಯನ್ನು, ಅದರ ವಿವಿಧ ಮಗ್ಗಲುಗಳನ್ನು ತಿಳಿದುಕೊಳ್ಳುವುದು ಅತ್ಯಗತ್ಯವಾಗುತ್ತದೆ. ಇಂಥ ಸಂದರ್ಭದಲ್ಲಿ ವಿಜ್ಞಾನಿಯು ಸ್ಥಳೀಯ ಭಾಷೆಯ ಬಗ್ಗೆ ಗೌರವ ಭಾವನೆಯಿಂದ ನಡೆದುಕೊಳ್ಳುತ್ತ ಅದನ್ನು ಕಲಿಯುವುದು ಅತ್ಯಗತ್ಯ. ಬರಿಯ ಭಾಷಾಶಾಸ್ತ್ರಜ್ಞರು ಮಾತ್ರ ಸ್ಥಳೀಯ ಭಾಷೆಯನ್ನು ಕಲಿತರೆ ಸಾಕು ಎಂಬಂತಿಲ್ಲ. ಇತರ ಸಮಾಜ ವಿಜ್ಞಾನಿಗಳೂ ಸ್ಥಳೀಯ ಭಾಷೆಯನ್ನು ಮತ್ತು ಅದರ ವಿವಿಧ ಮಗ್ಗಲುಗಳನ್ನು ಅರಿಯುವ ಅಗತ್ಯವಿದೆ. ಅಲ್ಲಿನ ಕತೆಗಳು, ಕಾವ್ಯಗಳು, ಗಾದೆ-ಒಗಟುಗಳು ಇತ್ಯಾದಿಗಳನ್ನು ಆಳವಾಗಿ ತಿಳಿದುಕೊಳ್ಳುವುದೂ ಅಗತ್ಯ.

೪) ಭಾಷೆಯ ಜಾಯಮಾನಕ್ಕೆ ಅನುಗುಣವಾಗಿ ಪಾರಿಭಾಷಿಕ ಮತ್ತಿತರ ಶಬ್ದಗಳನ್ನು ಸೃಷ್ಟಿಸುವ/ಟಂಕಿಸುವ ಅಗತ್ಯವಿದೆ. ಈ ಕ್ರಮವು ವಿಜ್ಞಾನದ ಬೆಳವಣಿಗೆ ಮತ್ತು ಅದು ಜನರ ಬಳಿಗೆ ಹೋಗಬೇಕಾದುದರ ಕಾರಣದಿಂದ ಹಾಗೂ ಅಲ್ಲಿನ ಭಾಷೆಯು ಶ್ರೀಮಂತವಾಗುವ ದೃಷ್ಟಿಯಿಂದ ಇಂಥ ಹೊಸ ಶಬ್ದಗಳ ಸೃಷ್ಟಿಯಾಗಬೇಕು. ಜೊತೆಗೆ ಲಭ್ಯವಿರುವ ಶಬ್ದಗಳಿಗೆ ವಿಶೇಷವಾದ ಅರ್ಥವನ್ನು ತುಂಬುವ ಅಗತ್ಯವೂ ಇದೆ. ಕನ್ನಡ ಭಾಷೆಗೆ ನಾನು ಸೇರಿಸಿದ - ಕೊಳೆಗೇರಿ, ಸ್ತರವಿನ್ಯಾಸ, ಊನಶಕ್ತ / ಊನಶಕ್ತ, ಸಮಾಜಕಾರ್ಯ ಇತ್ಯಾದಿಗಳನ್ನು ಇಲ್ಲಿ ಉದಾಹರಿಸಬಹುದು.

೫) ಸ್ವ-ಸಮಾಜ ಮತ್ತು ಪರ-ಸಮಾಜಗಳ ಅಧ್ಯಯನದ ಬಗ್ಗೆ ವಿವಾದ ಇನ್ನೂ ಇದೆ. ಸಾಮಾಜೀಕರಣದಿಂದ ವಸ್ತು-ನಿಷ್ಠತೆಗಿಂತಲೂ ಸ್ವ-ನಿಷ್ಠತೆಯು ಬಲಿಷ್ಠವಾಗಿರುವುದರಿಂದ, ವಿಜ್ಞಾನಿಯು ವಸ್ತುನಿಷ್ಠ ದೃಷ್ಟಿಯಿಂದಲೇ ಅಧ್ಯಯನವನ್ನು ಕೈಗೊಳ್ಳಬೇಕಾಗಿರುವುದರಿಂದ ಅವನು ತನ್ನ ಸಮಾಜವನ್ನು ಅಧ್ಯಯನ ಮಾಡದೆ ಪರ-ಸಮಾಜವನ್ನು ಅಧ್ಯಯನ ಮಾಡುವುದೇ ಉಚಿತ ಎಂಬ ವಾದವಿದೆ. ಇದರಿಂದ ಪೂರ್ವಗ್ರಹದಿಂದ

ವಿಜ್ಞಾನಿಯು ದೂರವಿರಬಹುದು ಎಂಬ ಸಮರ್ಥನೆಯನ್ನು ನೀಡಲಾಗುತ್ತದೆ. ಭಾಷೆಯ ಮೂಲಕವೇ ಮೌಲ್ಯಗಳು, ಪೂರ್ವಗ್ರಹಗಳು, ಮೂಢನಂಬುಗೆಗಳು ಸತ್ಯವನ್ನು ಮರೆಮಾಚುವುದರಿಂದ ಆ ಭಾಷೆಯಿಂದಲೇ ದೂರ ಹೋಗುವುದು ಒಳಿತು ಎಂಬ ಇನ್ನೊಂದು ಸಮರ್ಥನೆಯನ್ನು ನೀಡಲಾಗುತ್ತದೆ.

ಆದರೆ ತನ್ನ ಭಾಷೆಯ ಒಳಹೊರಗನ್ನು, ತಿರುವು-ನವುರುಗಳನ್ನು, ಸ್ಥೂಲ-ಸೂಕ್ಷ್ಮಗಳನ್ನು ಬಲ್ಲ ವಿಜ್ಞಾನಿಯು ತನ್ನ ಸಮಾಜವನ್ನು ಯಥಾವತ್ತಾಗಿ ಅರಿತುಕೊಳ್ಳಲು ಸಾಧ್ಯವಾದಂತೆ ಅನ್ಯ ಭಾಷಿಕನು ತಿಳಿದುಕೊಳ್ಳುವುದು ಸಾಧ್ಯವಾಗುವುದಿಲ್ಲ. ವೈಜ್ಞಾನಿಕ ವಿಧಾನ-ತಂತ್ರ- ಕೌಶಲ್ಯಗಳನ್ನು ಕರಗತ ಮಾಡಿಕೊಂಡ ವಿಜ್ಞಾನಿಯು ತನ್ನ ಭಾಷೆಯಲ್ಲಿನ ದೌರ್ಬಲ್ಯಗಳನ್ನು ಹಿಂದೆ ತಳ್ಳಿ ತನ್ನ ವೈಜ್ಞಾನಿಕ ಭಾಷೆಯ ಮೂಲಕ ತನ್ನ ಸಮಾಜವನ್ನು ಸಮರ್ಥವಾಗಿಯೇ ಅಧ್ಯಯನ ಮಾಡಲು ಸಾಧ್ಯವೆಂಬುದನ್ನು ತೋರಿಸಿಕೊಡಲಾಗುತ್ತದೆ. ಇದರಿಂದಾಗಿ ಭಾಷೆಯ ಸಾಮರ್ಥ್ಯ - ದೌರ್ಬಲ್ಯಗಳನ್ನು ನಿರ್ವ್ಯಾಜದಿಂದ ಬಲ್ಲವನು ಸಮರ್ಥ ವಿಜ್ಞಾನಿಯಾಗಿ ಬೆಳೆಯಲು ಸಾಧ್ಯವಾಗುತ್ತದೆ.

೬) ವಿಜ್ಞಾನಿಯು ಕನಿಷ್ಠ ಎರಡು ಪಾತ್ರಗಳನ್ನು ಆಡಲೇಬೇಕಾಗುತ್ತದೆ: ಒಂದು, ವಿಜ್ಞಾನಿಯ ಪಾತ್ರ ಮತ್ತು ಎರಡು, ನಾಗರಿಕನ ಪಾತ್ರ. ತನ್ನ ವಿಜ್ಞಾನವನ್ನು ತಾನು ಶ್ರದ್ಧೆಯಿಂದ ಬೆಳೆಸಬೇಕಾದದ್ದೂ ಬಹು ಮುಖ್ಯ. ಇದಕ್ಕೆ ತಕ್ಕ ಭಾಷೆಯನ್ನು ಬೆಳೆಸಬೇಕಾದದ್ದೂ ಅಷ್ಟೇ ಮುಖ್ಯ. ಅವನು ನಾಗರಿಕನೂ ಆಗಿರುವುದರಿಂದ ತನ್ನ ಸಮುದಾಯದ ಒಳಿತಿಗಾಗಿ ಅವನು ದುಡಿಯಬೇಕಾದದ್ದು ಬಹು ಮುಖ್ಯ. ಇದರಲ್ಲಿ ತಾನು ವಾಸಿಸುತ್ತಿರುವ ಸಮುದಾಯದ ಭಾಷೆಯನ್ನು ಸಂರಕ್ಷಿಸಿ, ಅದನ್ನು ಬೆಳೆಸಬೇಕಾದದ್ದೂ ಅವನ ಕರ್ತವ್ಯವಾಗುತ್ತದೆ. ಆ ಸಮುದಾಯದ ಭಾಷೆಯು ಉಳಿಯುವುದರಿಂದ ಅಲ್ಲಿನ ಸಂಸ್ಕೃತಿಯೂ ಉಳಿಯುತ್ತದೆ, ಅಲ್ಲಿನ ವಿಶಿಷ್ಟ ರಾಚನಿಕತೆಯೂ ಉಳಿಯುತ್ತದೆ. ಆದರೆ ಆಧುನಿಕತೆಯ ಲಾಭಗಳನ್ನು ಪಡೆಯಲು ಕೆಲವು ಹಿತಕರವಾದ ಬದಲಾವಣೆಗಳನ್ನು ಸಮುದಾಯದಲ್ಲಿ ತರಬೇಕಾಗುತ್ತದೆ. ಭಾಷೆಯನ್ನು ಬೆಳೆಸುವುದು ಒಂದು ಸ್ವಾಗತಾರ್ಹ ಬದಲಾವಣೆಯೂ ಹೌದು.

ಭಾಷೆಯನ್ನು ಉಳಿಸುವ ಮತ್ತು ಬೆಳೆಸುವ ಪ್ರಕ್ರಿಯೆಯಲ್ಲಿ ಶ್ರದ್ಧಾಪೂರ್ಣವಾಗಿ ದುಡಿಯುವುದರಿಂದ ವಿಜ್ಞಾನಿಯು ತನ್ನ ವಿಜ್ಞಾನವನ್ನು ಬೆಳೆಸಲೂ, ಅದನ್ನು ಜನಮುಖಿಯಾಗಿಸಲೂ ಸಾಧ್ಯವಾಗುತ್ತದೆ. ಇದು ವಿಜ್ಞಾನಿಯಾಗಿ ತಾನು ಆಡಲೇಬೇಕಾದ ಅಗತ್ಯ ಪಾತ್ರಕ್ಕೆ ದ್ಯೋತಕವಾಗುತ್ತದೆ. ನಾಗರಿಕನಾಗಿ ತನ್ನ ಜನರ ಶ್ರೇಷ್ಠ ಜೀವನ ಪದ್ಧತಿಯನ್ನು, ಭಾಷೆಯನ್ನು ಉಳಿಸಿ, ಬೆಳೆಸುವಲ್ಲಿ ಕೈಗೊಂಡ ಕ್ರಮದಿಂದ ತನ್ನ ಪ್ರಾಮಾಣಿಕ ಪಾತ್ರವನ್ನು ಅವನು ಆಡಿದಂತಾಗುತ್ತದೆ. ಹೀಗೆ ಅವನು ದ್ವಿಪಾತ್ರಗಳನ್ನು ಯಾವ ಗೊಂದಲವೂ ಇಲ್ಲದೆ, ಯಾವ ವೈರುಧ್ಯವೂ ಇಲ್ಲದೆ ಆಡಲು ಸಾಧ್ಯವಾಗುತ್ತದೆ, ಆಡಲೂ ಬೇಕಾಗುತ್ತದೆ.

**ಕೊನೆಯಲ್ಲದ ಕೊನೆಯ ಮಾತು**

ಸಾಹಿತ್ಯಕ್ಕಿಂತಲೂ ಭಾಷೆ ದೊಡ್ಡದು, ವಿಜ್ಞಾನಕ್ಕಿಂತಲೂ ಭಾಷೆ ದೊಡ್ಡದು. ವಾಸ್ತವವನ್ನು ಕಲ್ಪನೆಯ ಕುಂಚದಲ್ಲಿ ಸೃಷ್ಟಿಸುವ ಸಾಹಿತಿಗೆ ಹೇಗೆ ಭಾಷೆಯ ಅಗತ್ಯವಿದೆಯೊ ಹಾಗೆಯೇ ವಾಸ್ತವವನ್ನು ಶಾಸ್ತ್ರೀಯ ಭಾಷೆಯಲ್ಲಿ ವಿವರಿಸುವ ವಿಜ್ಞಾನಿಗೂ ಭಾಷೆಯು ಬೇಕಾಗುತ್ತದೆ. ಭಾಷೆಯಿಲ್ಲದೆ ಅಭಿವ್ಯಕ್ತಿ ಸಾಧ್ಯವಿಲ್ಲ ಎಂಬುದು ಇಬ್ಬರಿಗೂ ಗೊತ್ತು. ಅವರವರ ಶಿಸ್ತಿಗೆ ಅನುಗುಣವಾಗಿ ಭಾಷೆಯನ್ನು ವಿಶಿಷ್ಟ ರೀತಿಯಲ್ಲಿ ಬಳಸಿಕೊಳ್ಳುತ್ತಾರೆ. ಅಗತ್ಯವಾದ ಕಡೆಯಲ್ಲೆಲ್ಲಾ ಶಬ್ದಬ್ರಹ್ಮರೂ ಅವರಾಗುತ್ತಾರೆ. ಸಮಾಜ ವಿಜ್ಞಾನಿಯು ತನ್ನ ಒಳನೋಟದಿಂದ ಸಮಾಜವನ್ನು ಒಳಹೊಕ್ಕು ನೋಡಿ, ಭಾಷೆಯ ಅಂತರಂಗದ ಸತ್ವವನ್ನು ಬಳಸಿಕೊಂಡು ತಾನು ಕಂಡ ಸತ್ಯವನ್ನು ತನ್ನ ಬರೆಹದಲ್ಲಿ ವಿವರಿಸುತ್ತಾನೆ. ಅವನು ಬಳಸುವ ಭಾಷೆಯು ಆಲಂಕಾರಿಕವಲ್ಲ, ಕ್ರಿಯಾತ್ಮಕ; ಊಹಾತ್ಮಕವಲ್ಲ, ವಾಸ್ತವಾತ್ಮಕ.

**ಡಾ|| ಎಚ್. ಎಂ. ಮರುಳಸಿದ್ದಯ್ಯ**
೬೨, ಮಂಜುನಾಥ ಕಾಲನಿ, ಜೆ. ಪಿ. ನಗರ
ಬೆಂಗಳೂರು-೫೬೦ ೦೭೮

# ಮುಗ್ಗಲು ವಾಸನೆ

ಎಂದಿನಂತೆ ಬೆಳಗಾಗುತ್ತದೆ,
ಹೊಡೆದುಕೊಳ್ಳುತ್ತದೆ ಅಲಾರ್ಮ್
ಗೇಟು ಸದ್ದಾಗಿ ಹಾಲಿನವನ
ಆಗಮನ ಸಾರುತ್ತದೆ.
ಎಲ್ಲೋ ಕಾಗೆಯೊಂದು ಕೂಗಿ,
ಮಗುವೊಂದು ರಾಗ ತೆಗೆದು,
ಟ್ಯೂಷನ್ ಹುಡುಗರ ಸೈಕಲ್ಲು
ರಸ್ತೆಯ ಮೇಲೆ ಓಡತೊಡಗುತ್ತವೆ.
ಬಾಯ್ಲರಿನ ಸ್ವಿಚ್ ಒತ್ತಿ
ದಿನಚರಿಯ ಆರಂಭ.

ತರಕಾರಿ ಕೊಳ್ಳುವಾಗ
ನೆರೆಮನೆಯ ಮುದ್ದುಮಗು
'ಎತ್ತಿಕೋ..' ಎಂಬಂತೆ
ಜೊಲ್ಲಿಳಿವ ಬಾಯಲ್ಲಿ
ಸಮ್ಮೋಹಿನಿಯ ನಗೆ ನಕ್ಕು
ಕೈಮುಂದೆ ಮಾಡುತ್ತದೆ.

ಇಲ್ಲ, ಪುರುಸೊತ್ತಿಲ್ಲ,
ಕಸಮುಸುರೆ, ತಿಂಡಿ, ಅಡುಗೆ.
ಆಫೀಸು, ಸ್ಕೂಲುಗಳ,
ಒಂಟಿಕಾಲ ಗಡಿಬಿಡಿಯವರೆಗೆ
ಷೋಡಶೋಪಚಾರ.

ಮಧ್ಯಾಹ್ನದ ಚುಟುಕು ನಿದ್ರೆ,
ದೂರದರ್ಶನದ ಕರೆ
ಯಥಾಪ್ರಕಾರ ಕಾಫಿ, ತಿಂಡಿ,
ರಾತ್ರಿಯಡುಗೆಯ ರಾದ್ಧಾಂತ.
ಸೂರ್ಯ ಮುಳುಗುವ ಹೊತ್ತು,
ಹಕ್ಕಿ ಸಾಲು ಥರಥರದ

ಚಿತ್ತಾರ ಬಿಡಿಸುತ್ತಾ
ಗೂಡು ಸೇರುತ್ತವೆ.

ಆಚೆಮನೆಯ ಮಗು
ರಚ್ಚೆ ಹಿಡಿದಿದೆ,
ಮನೆಯೊಳಗೇ ಇದ್ದು ಅದಕ್ಕೂ ಬೇಜಾರಾಗಿದೆ
'ಆಯ್ಯೋ ಪಾಪ, ಬಾ'
ಎಂದು ಕರೆಯಲಿಕ್ಕೆ
ಧಾರಾವಾಹಿಯ ಅಡ್ಡಿ.

ಉದಯ, ಅಸ್ತ, ಖಗ, ಮೃಗಗಳನ್ನೆಲ್ಲಾ
ಟಿ. ವಿ. ಪರದೆಯ ಮೇಲೆ ನೋಡಿ
'ವಾವ್, ಎಷ್ಟು ಚಂದ' ಎನ್ನುವ ಉದ್ಗಾರ.
ಜಾಹೀರಾತಿನ ಮುದ್ದುಮಗು ಕಂಡು
ಉಕ್ಕಿ ಹರಿವ ಮೆಚ್ಚುಗೆ.

ಕಿಟಕಿ ತೆಗೆಯುವುದಿಲ್ಲ,
ಗಾಳಿಯೊಂದಿಗೆ ಧೂಳು, ಸೊಳ್ಳೆ.
ಬಾಗಿಲು ತೆಗೆಯುವುದಿಲ್ಲ,
ಕಳ್ಳಕಾಕರು, ಬೇಡುವ ಜನರ,
ಭಯ, ರಗಳೆ.

ಮನೆಯೊಳಗಿನ ಮುಗ್ಗಲು ವಾಸನೆಗೆ
ಹೊಂದಿಕೊಂಡಿದ್ದೇವೆ ನಾವು
ನಮ್ಮಷ್ಟಕ್ಕೆ ನಾವು.
ಲೋಕ ಸಾಯಲಿ ಅದನು
ಕಟ್ಟಿಕೊಂಡೇನು ?

**ವಸುಮತಿ ಉಡುಪ**
'ಗೌರಿ', ೩ನೇ ಕ್ರಾಸ್
ಗಾಂಧೀನಗರ, 'ಎ' ಬ್ಲಾಕ್
ಶಿವಮೊಗ್ಗ-೫೭೭೨೦೧

ಮಹಸ್ವರ್



…. ಸ್ವಲ್ಪ ತಡಿ ಮಾರಾಯ…
ಭಯೋತ್ಪಾದನೆಯ ವಿರುದ್ಧದ
ನನ್ನ ಯುದ್ಧ ಮುಗೀಲಿ….
ಮಂದಿರ
ವಿಎಚ್‌ಪಿ




ನಾನು ಹಿಂದೆ ಸರಿಯುವ ಪ್ರಶ್ನೆಯೇ ಇಲ್ಲ…
ಪಾಕಿಸ್ತಾನ
ಭಾರತ
ನಾನೂ ಅಷ್ಟೇ…




ಈ ವಿದೇಶಿ ಮಹಿಳೆಯ ಯಶಸ್ಸಿನ ಗುಟ್ಟೇನು?!
ವಿರೋಧ ಪಕ್ಷದ ನಾಯಕಿ
ಪ್ರಧಾನಿ
ಪಂಜಾಬ್ ಚುನಾವಣಾ ಫಲಿತಾಂಶ




ಇಂಡಿಯಾ ಟುಡೇ
ನಂ-1 ಮುಖ್ಯಮಂತ್ರಿ

# ಸೇಡಿಯಾಪು ನೆನಪು - ಛಾಪು

೧೯೩೯-೪೨ರ ಅವಧಿ. ನಾನಾಗ (ನನ್ನ ಜನನ ೧೯೨೬) ಮಡಿಕೇರಿ ಸೆಂಟ್ರಲ್ ಹೈಸ್ಕೂಲಿನಲ್ಲಿ ವಿದ್ಯಾರ್ಥಿ. ನಮ್ಮ ಕನ್ನಡ ಅಧ್ಯಾಪಕರು ಆದಾಗ ತಾನೇ ಬೆಳಕಿಗೆ ಬರುತ್ತಿದ್ದ ನವೋದಯ ಸಾಹಿತ್ಯಕ್ಕೆ ಮುಕ್ತ ಮನದಿಂದ ಸ್ಪಂದಿಸುತ್ತಿದ್ದುದೊಂದು ಯೋಗಾಯೋಗ. ಬೇಂದ್ರೆ, ಕುವೆಂಪು, ಕಡೆಂಗೋಡ್ಲು ಮೊದಲಾದ ನೂತನ ಮಾರ್ಗಪ್ರವರ್ತಕರ ಆಧುನಿಕ ಕವನಗಳನ್ನು ನಮಗೆ ಪರಿಚಯಿಸುವುದರಲ್ಲಿ ಅವರಿಗೆ ಅಪಾರ ಆಸಕ್ತಿ. ಸ-ರಾಗವಾಗಿಯೂ ಸುಶ್ರಾವ್ಯವಾಗಿಯೂ ಹಾಡುತ್ತಿದ್ದರು. ಹೀಗೆ ಅಂದು ನಾವು ಹರನ ಜಡೆಯಿಂದ ಇಳಿದು ಬರುವ ಗಂಗಾಸಲಿಲದಲ್ಲಿ ಮಿಂದು ಪುನೀತರಾದೆವು. ತುಂಗಾ ತೀರದ ಬಲಗಡೆಯಲ್ಲಿ ಹಿಂದಲ್ಲಿದ್ದ ಬೊಮ್ಮನಹಳ್ಳಿಯ ಮೂಕಶೋಕ ಅನುಭವಿಸಿ ನೊಂದೆವು. ಪಡವಣ ಕಡಲಿನ ತೆಂಗಿನ ಮಡಲಿನ ಮರೆಯಲಿ ಮೆರೆಯುವ ನಾಡಿನಲ್ಲಿ ಘನೀಭವಿಸಿದ್ದ ವಿರಹ ತಾಪದಿಂದ ದಗ್ಧರಾದೆವು.

ಆ ಒಂದು ದಿನ ನಮ್ಮ ಗುರುಗಳು ವೀರ್ಯವತ್ತಾಗಿ ಓದಿದ ಮೊದಲ ಪದ್ಯವೇ ನಮ್ಮನ್ನು ಪೂರ್ತಿ ವಶೀಕರಿಸಿಕೊಂಡುಬಿಟ್ಟಿತು :

*ಅಡಗುವ ರಾತ್ರಿಯನೆಬ್ಬಟ್ಟುತ ಮೂ-*
*ಡಲ ಕೆಂಪೇರುತಿರೆ*
*ಹುಲಿಬೇಟೆಗೆ ಹಯವೇರಿದ ವಿದ್ಯಾ-*
*ನಗರದ ರಾಮದೊರೆ*

ಇದನ್ನು ಬರೆದವರು ಸೇಡಿಯಾಪು ಕೃಷ್ಣಭಟ್ಟರೆಂದು (೧೯೦೨-೯೬) ನಮ್ಮ ಅಧ್ಯಾಪಕರು ಹೇಳಿದರು. ಶ್ರೀಯುತರು ಮಹಾವಿದ್ವಾಂಸರು, ಮಂಗಳೂರಿನ ಯಾವುದೋ ಶಾಲೆಯಲ್ಲಿ ಕನ್ನಡ ಅಧ್ಯಾಪಕರಾಗಿದ್ದಾರೆ ಎಂದು ಕೂಡ ತಿಳಿಸಿದರು. ''ತರುಣ ಧಮನಿ'' ಎಂಬ ಹೆಸರಿನ ಈ ಕಾವ್ಯಖಂಡ, ಬೇಂದ್ರೆ, ಕುವೆಂಪು, ಕಡೆಂಗೋಡ್ಲು ಅವರ ಹಲವಾರು ಕವನಗಳಂತೆ, ನನ್ನ ಸ್ಮೃತಿಪಟಲದಲ್ಲಿ ಶಾಶ್ವತ ಛಾಪು ಟಂಕಿಸಿತು.

೧೯೪೨ ಜೂನ್. ನಾನಾಗ ಮಂಗಳೂರು ಸೇಂಟ್ ಅಲೋಶಿಯಸ್ ಕಾಲೇಜಿನಲ್ಲಿ ಪ್ರಥಮ ಇಂಟರ್ಮೀಡಿಯೆಟ್ ತರಗತಿ ವಿದ್ಯಾರ್ಥಿ. ಪಂಡಿತ ಮುಳಿಯ ತಿಮ್ಮಪ್ಪಯ್ಯನವರು (೧೮೮೮-೧೯೫೦) ನಮ್ಮ ಕನ್ನಡ ಪ್ರಾಧ್ಯಾಪಕರು. ಸುಮಾರು ಎರಡು ದಶಕಗಳ ಹಿಂದೆ ಇವರು ನನ್ನ ತಂದೆಗೂ ಗುರುಗಳಾಗಿದ್ದವರು. ಎಂದೇ ನನ್ನ ಬಗ್ಗೆ ಇವರಿಗೆ ಹೆಚ್ಚು ಒಲವು, ಅವರಲ್ಲಿ ನನಗೆ ಸಲಿಗೆ. ಸ್ವತಃ ಪ್ರಕಾಂಡ ಪಂಡಿತರಾಗಿದ್ದ ಮುಳಿಯರು ಒಮ್ಮೆ ತರಗತಿಯಲ್ಲಿ ಸೇಡಿಯಾಪು ಅವರ ಹೆಸರನ್ನು ಉಲ್ಲೇಖಿಸುತ್ತ, ''ಪ್ರಾಚೀನ ಜ್ಞಾನವನ್ನೂ ಅರ್ವಾಚೀನ ವಿಜ್ಞಾನವನ್ನೂ ಸಮನ್ವಯಿಸಿಕೊಂಡಿರುವ ಕೆಲವೇ ಆಧುನಿಕ ವಿದ್ವಾಂಸರ ಸಾಲಿಗೆ ನಮ್ಮ ಸೇಡಿಯಾಪು ಸೇರುತ್ತಾರೆ'' ಎಂದಿದ್ದರು.

ನನ್ನ ತರುಣ ಧಮನಿಗಳಲ್ಲಿ ಮಿಂಚು ಸಂಚರಿಸಿತು. ಆ ಕ್ಷಣ ಎದ್ದು ನಿಂತು, ''ತರುಣ ಧಮನಿ ಎಂಬ ಹೆಸರಿನ ಕಾವ್ಯಖಂಡ ಬರೆದಿರುವ ಕವಿ ಅವರಲ್ಲವೇ ?'' ಎಂದು ಕೇಳಿಯೇಬಿಟ್ಟೆ!

ಗುರುಗಳು ಪ್ರಸನ್ನವದನರಾಗಿ, ''ಹೌದು ! ಅವರು ಇಲ್ಲಿಯೇ ನಮ್ಮ ಸಂಸ್ಥೆಯ ಪ್ರೌಢಶಾಲೆಯಲ್ಲಿ ಅಧ್ಯಾಪಕರಾಗಿದ್ದಾರೆ'' ಎಂದರು.

ಹಾಗಾದರೆ ನಾನು ಅವರನ್ನು ಭೇಟಿ ಮಾಡಲೇಬೇಕು, 'ತರುಣ ಧಮನಿ'ಯನ್ನು ನಾನೆಷ್ಟು ಮೆಚ್ಚಿಕೊಂಡಿದ್ದೇನೆ ಎಂದು ಅವರಿಗೆ ಹೇಳಲೇಬೇಕು, ನನ್ನ ಕಗ್ಗಗಳನ್ನು ಅವರಿಗೆ ಓದಿ ಹೇಳಿ ಅವರ ಆಶೀರ್ವಾದ ಪಡೆಯಬೇಕು ಎಂದು ಮುಂತಾಗಿ ಹಗಲುಗನಸು ಕಂಡದ್ದೇ ಕಂಡದ್ದು. ಆದರೆ ಮುನ್ನುಗ್ಗಿ ಅವರ ಪರಿಚಯ ಹಾಗಿರಲಿ ದರ್ಶನ ಕೂಡ ಪಡೆಯುವ ಧೈರ್ಯ ನನಗಿರಲಿಲ್ಲ.

ಮುಂದೊಂದು ದಿನ ನಮ್ಮ ಕಾಲೇಜಿನಲ್ಲಿ ನಡೆದ ಯಾವುದೋ ಚರ್ಚೆಗೆ ಅವರೊಬ್ಬ ನಿರ್ಣಾಯಕರಾಗಿ ಬಂದಿದ್ದರು. ಮಧ್ಯಮಗಾತ್ರ. ಶ್ವೇತ ಖಾದೀ ವಸನಧಾರಿ. ತಲೆಗೆ ಗಾಂಧೀ ತೊಪ್ಪಿ. ಗೌರವರ್ಣ-ಗಂಭೀರ ಮುಖ ಮುದ್ರೆ. ಸಮಗ್ರವಾಗಿ ಭಯಮಿಶ್ರಿತ ಗೌರವ ಪ್ರೇರಿಸುವ ರಾಜ ವ್ಯಕ್ತಿತ್ವ. ಆಗಲಾದರೂ ನಾನು ಅವರತ್ತ ಹೋಗಿ ನಮಸ್ಕರಿಸಿ ಪ್ರವರ ಹೇಳಬಹುದಿತ್ತು – ದೂರದ ಸಂಬಂಧವೂ ಇತ್ತು. ಆದರೂ ಸ್ವಭಾವ ಸಹಜ ಅಳುಕು ಅಡಿಯ ಮುಂದಿಡೆ ಬಿಡಲಿಲ್ಲ, ಎಂದೇ ಸ್ವರ್ಗ ಎಟುಕಲಿಲ್ಲ – ತದ್ದೂರೇ ತದ್ವಂತಿಕೇ !

೧೯೪೯ರಲ್ಲಿ ಮುಂದಿನ ದೃಶ್ಯ ಅನಾವರಣಗೊಂಡಿತು, ಅದೇ ಕಾಲೇಜಿನಲ್ಲಿ. ಸೇಡಿಯಾಪು ಆಗ ಕಾಲೇಜ್ ತರಗತಿಗಳಿಗೆ ಕನ್ನಡ ಟ್ಯೂಟರ್, ನಾನೋ ಮ್ಯಾತ್‌ಮೇಟಿಕ್ಸ್ ಲೆಕ್ಚರರ್ ! ಆ ನಕ್ಷತ್ರದ ಎದುರು ಕೇವಲ ಗ್ರಹವಾಗಿದ್ದ ನಾನು ಅಂತಸ್ತಿನಲ್ಲಿಯೂ ಸಂಬಳದಲ್ಲಿಯೂ ಅವರಿಗಿಂತ ಮೇಲಿನ ಮಜಲಿನವ. ಕಾರಣ: ಅವರು ಎಂ.ಎ. ಪದವೀಧರರಲ್ಲ, ನಾನು ಹೌದು ! ಆಡಳಿತಶಾಹಿಯ ಕುರುಡು ಯಂತ್ರಕ್ಕೆ ಎಂದಾದರೂ ವಿದ್ವತ್ತಿನ ಪ್ರಖರತೆಯನ್ನು ಗುರುತಿಸಿ ಪುರಸ್ಕರಿಸುವ ಯೋಗ್ಯತೆ ನಮ್ಮ ದೇಶದಲ್ಲಿದ್ದುದುಂಟೇ ?

ಆ ಕಾಲೇಜಿನಲ್ಲಿ ನಾನಿದ್ದ ನಾಲ್ಕು ವರ್ಷಗಳು, ೧೯೪೯-೫೩, ನನ್ನ ಜೀವನದ ಪರ್ವಶ್ರಾಯ : ಬಾಳ ಬಂಡಿಗೆ ಆಕಾರ, ಪಥ, ಚಾಲನೆ ಮತ್ತು ಗುರಿ ಒದಗಿದ ಅವಧಿ ಅದು. ಇವನ್ನು ಕಂಡರಿಸಿದವರು ಅಲ್ಲಿ ನನ್ನ ಹಿರಿಯ ಸಹೋದ್ಯೋಗಿಗಳಾಗಿದ್ದ ಮೂವರು ಶಿಲ್ಪಿಗಳು: ಪ್ರೊ॥ ಕೆ. ಎ. ಕೃಷ್ಣಮೂರ್ತಿ (ಗಣಿತ), ಪ್ರೊ॥ ಎಸ್. ನಾರಾಯಣ ಹೊಳ್ಳ (ಭೌತವಿಜ್ಞಾನ) ಮತ್ತು ಪಂಡಿತ ಸೇಡಿಯಾಪು ಕೃಷ್ಣಭಟ್ಟ (ಕನ್ನಡ). ಮೊದಲ ಇಬ್ಬರು ತತ್ಪೂರ್ವ ನನಗೆ ಅದೇ ಕಾಲೇಜಿನಲ್ಲಿ ಗುರುಗಳಾಗಿದ್ದವರು, ಮೂರನೆಯವರು ಪರೋಕ್ಷ ಗುರುಗಳು. ವೃತ್ತಿ ಜೀವನದ ಆರಂಭದಲ್ಲಿ ಈ ತ್ರಿಮೂರ್ತಿಗಳಿಂದ ನನಗೊದಗಿದ ಬೌದ್ಧಿಕ ಮಾರ್ಗದರ್ಶನ, ಬೋಧನಾನುಭವ, ಜೀವನದೃಷ್ಟಿ ಮತ್ತು ಕನ್ನಡದಲ್ಲಿ ವಿಜ್ಞಾನ ವಾಙ್ಮಯ ರಚನೆಗೆ ಪ್ರೇರಣೆ ಭವಿಷ್ಯ ಪಥ ಪರಿಕ್ರಮಣಕ್ಕೆ ಭವ್ಯ ಬುನಾದಿ ನಿರ್ಮಿಸಿದವು.

**ಜಿ. ಟಿ. ನಾರಾಯಣರಾವ್**

ಕೃಷ್ಣಮೂರ್ತಿ - ಸೇಡಿಯಾಪು ನಡುವೆ ನಡೆಯುತ್ತಿದ್ದ ಅನೌಪಚಾರಿಕ ಸಂವಾದಗಳಲ್ಲಿ ನಾನು ಅತಿಶಯ ಉತ್ಸಾಹದಿಂದ ಭಾಗವಹಿಸುತ್ತಿದ್ದೆ. ಪರಿಶುದ್ಧ ಗಣಿತ – ಸಾಹಿತ್ಯ ಸಂಗಮವದು, ನಿರ್ಮಲ ಜ್ಞಾನಸಲಿಲ ಸ್ರೋತಸ್ಸು. ''ನಿಖರ ವೈಜ್ಞಾನಿಕ ಮನೋಧರ್ಮವಿರುವ ಗಹನ



ಪಂಡಿತರು ನಮ್ಮ ಸೇಡಿಯಾಪು'' ಅನ್ನುತ್ತಿದ್ದರು ಪ್ರಖರ ಗಣಿತಮತಿಯ ಕೃಷ್ಣಮೂರ್ತಿ. ತಮಿಳುನಾಡಿನಿಂದ ಬಂದಿದ್ದ ಇವರು ಕನ್ನಡವನ್ನು ಸೊಗಸಾಗಿ ಓದಲು ಮತ್ತು ಮಾತಾಡಲು ಕಲಿತಿದ್ದರು. ''ಪಂಡಿತರ ಸಹವಾಸ ಲಾಭ !'' ಎಂದು ವಿನಯದಿಂದ ನುಡಿಯುತ್ತಿದ್ದರು.

ಕರ್ನಾಟಕ ಸಂಗೀತ ಪ್ರಿಯರಾದ ಕೃಷ್ಣಮೂರ್ತಿ ಒಂದು ದಿನ ಹೇಳಿದರು, ''ನಮ್ಮ ಅಭಿಜಾತ ಸಂಗೀತಾಭಿವ್ಯಕ್ತಿಗೆ ತೆಲುಗೇ ಯೋಗ್ಯ ಮಾಧ್ಯಮ.''

ಸೇಡಿಯಾಪು ಈ ವಾದವನ್ನು ಒಪ್ಪಲಿಲ್ಲ. ಅಷ್ಟೇ ಅಲ್ಲ, ಹೇಗೆ ದಕ್ಷಿಣದ ಐದು ಪ್ರಮುಖ ಭಾಷೆಗಳೂ – ಕನ್ನಡ, ತಮಿಳು, ತುಳು, ತೆಲುಗು ಮತ್ತು ಮಲೆಯಾಳ – ತೆಲುಗಿನಷ್ಟೇ ಸಮರ್ಥವಾಗಿ ಸಂಗೀತದ ಭಾಷೆ ಆಗಬಲ್ಲವು ಎಂಬುದನ್ನು ಸೋದಾಹರಣ ತೋರಿಸಿಯೂಕೊಟ್ಟರು. ಸಂಗೀತವೆಂಬ ಅಮೂರ್ತ ಭಾವದಿಂದ ಅದರ ಮೂರ್ತ ಮಾಧ್ಯಮವಾದ ಭಾಷೆಗೆ ಮಹತ್ವ ಲಭಿಸುವುದೇ ವಿನಾ ವಿಲೋಮವಾಗಿ ಅಲ್ಲ. ಹಿಮಾಲಯ ಒಂದೇ – ಗಂಗೆ, ಬ್ರಹ್ಮಪುತ್ರ, ಸಿಂಧು

ಮುಂತಾದವು ವಿವಿಕ್ತ. ''ಸಾಹಿತ್ಯವು ವಿವಿಧ ಶಾಸ್ತ್ರಗಳ, ಕಲೆಗಳ ಜ್ಞಾನದಿಂದ, ವಿವೇಕ ಸಹೃದಯತೆಗಳಿಂದ, ಮನೋಹರ ವಾದ ವಾಕ್ಚಾತುರ್ಯದಿಂದ ರಮಿಸುವ ರಸಿಕನಂತಿದೆ. ಸಂಗೀತವು ನಿರ್ಮಲ ಪಾತಿವ್ರತ್ಯದಿಂದ, ನಗೆಮೊಗದಿಂದ, ಸೌಶೀಲ್ಯದಿಂದ, ಸೌಹಾರ್ದದಿಂದ, ಪ್ರಗಾಢ ಪ್ರೇಮದಿಂದ ವಶೀಕರಿಸುವ ರಮಣಿಯಂತಿದೆ. ಇವುಗಳಲ್ಲಿ ಯಾವುದು ಹೆಚ್ಚು ಮನೋಹರ, ಯಾವುದು ಹೆಚ್ಚು ಮಧುರ? ಈ ಪ್ರಶ್ನೆಗೆ ಉತ್ತರವಾಗಿ ಸರಸ್ವತಿಯು ಒಂದು ಕೈಯಲ್ಲಿ ವೀಣೆಯನ್ನೂ ಇನ್ನೊಂದು ಕೈಯಲ್ಲಿ ಪುಸ್ತಕವನ್ನೂ ಹಿಡಿದು ಮೌನವಾಗಿ ಕುಳಿತಿರುವಳು.'' (ಸೇಡಿಯಾಪು ಕೃಷ್ಣಭಟ್ಟರ ''ವಿಚಾರ ಪ್ರಪಂಚ''ದಲ್ಲಿ 'ಸಾಹಿತ್ಯವೂ ಸಂಗೀತವೂ' ಲೇಖನ. ಪ್ರಕಾಶಕರು : ಕರ್ನಾಟಕ ಸಂಘ, ಪುತ್ತೂರು.)

ಇಂಥ ಫಲವತ್ತಾದ ಚರ್ಚೆಗಳ ಹೂರಣ ನನಗೊಂದು ನಿರ್ದಿಷ್ಟ ಸಂದೇಶ ನೀಡಿತು: ಕನ್ನಡದಲ್ಲಿ ಜನಪ್ರಿಯ ವಿಜ್ಞಾನ ವಾಙ್ಮಯ ರಚನೆಗೆ ನಾನು ಸ್ವಂತ ಮಾರ್ಗವನ್ನು ಅನ್ವೇಷಿಸಬೇಕು. ಆ ಮೊದಲು ಕನ್ನಡದಲ್ಲಿ ಕವಿತೆ, ಕಥೆ ಮುಂತಾದವನ್ನು ಸಮೃದ್ಧವಾಗಿ ಬರೆದು ಪ್ರಕಟಿಸಿ ನಾನೊಂದು ಭ್ರಮನಿರಸನ ಸ್ಥಿತಿ ಐದಿದ್ದೆ: ಈ ಪ್ರಕಾರಗಳು ನನ್ನ ಪಾನೀಯಗಳಲ್ಲ! ಜನಪ್ರಿಯ ವಿಜ್ಞಾನ ವಾಙ್ಮಯ ರಚನೆಯತ್ತ ಮನಸ್ಸು ಹೊರಳಿತು.

ಅದೆಂಥ ಪರ್ವಕಾಲ! ಆಧುನಿಕ ಭೌತ ಹಾಗೂ ಖಗೋಳ ವಿಜ್ಞಾನಗಳು ದಿನದಿನ ಹೊಸ ಹೊಸ ವಿಶ್ವ ವಿಸ್ಮಯಗಳನ್ನು ಪ್ರಕಟಿಸುತ್ತಿದ್ದುವು. ಪರಮಾಣು ಯುಗ ಆರಂಭವಾಗಿತ್ತು (೧೯೪೫); ಆಕಾಶಯುಗ ಕಕ್ಷೆಗೇರಲು (೧೯೫೭) ಉಡಾವಣತಡಿ ಸಿದ್ಧವಾಗುತ್ತಿತ್ತು; ಇತ್ತ ಐನ್‌ಸ್ಟೈನ್, ಜೀನ್ಸ್, ಗ್ಯಾಮೋ, ಎಡಿಂಗ್ಟನ್ ಮೊದಲಾದ ಹಿರಿಯ ಸಂಶೋಧನ - ವಿಜ್ಞಾನಿಗಳು ಇಂಗ್ಲಿಷಿನಲ್ಲಿ ಜನಪ್ರಿಯ ಲೇಖನ ಮತ್ತು ಪುಸ್ತಕಗಳನ್ನು ಪ್ರಕಟಿಸಿ ಆ ಭಾಷೆಗೆ ಹೊಸ ಆಯಾಮವಿತ್ತಿದ್ದರು, ನಿರೂಪಣ ಶೈಲಿಯಲ್ಲಿ ನವಕ್ರಾಂತಿಯನ್ನೇ ಪ್ರವರ್ತಿಸಿದ್ದರು. ''ಯುಗ ಯುಗಗಳ ಹಣೆ ಬರಹವ ಒರಸಿ, ನವ ಮನ್ವಂತರಗಳ ಭಾಗ್ಯವ ತೆರೆಸಿ...... ಮುಟ್ಟಿದೆ ದಿಙ್ಮಂಡಲಗಳ ಅಂಚ, ಆಚೆಗೆ ಚಾಚಿದೆ ತನ್ನಯ ಚುಂಚ'' (ಬೇಂದ್ರೆ).

*ಪೋಷಾಕು ಸಿದ್ಧವಿದೆ ಧರಿಪಾತನೆಲ್ಲಿಹನು ?*
*ವಾಸಗೃಹ ತೆರೆದಿಹುದು ಬರುವನೆಂದೊಡೆಕಾರ ?*
*ಮೂಷಿಕಾಧಿಪ ಲೆಕ್ಕಣಿಕೆ ಪಿಡಿದಿಹನು ವೇದ -*
*ವ್ಯಾಸನಾಗಮನಕ್ಕೆ – ಇದು ಸೃಷ್ಟಿ ಅತ್ರಿಸೂನು*

ಇಂಗ್ಲಿಷ್ ಕುರಿತಂತೆ 'ಪೋಷಾಕು' ಸಹಜವಾಗಿ ವಿಕಸಿಸಿ ಎಂಥ ಗಹನ ಆಧುನಿಕ ಪರಿಕಲ್ಪನೆಯನ್ನೂ ಸಮರ್ಥವಾಗಿ ಸಂವಹನಿಸಬಲ್ಲದಾಗಿತ್ತು. 'ಧರಿಪಾತ'ರೂ 'ಒಡೆಕಾರ'ರೂ ಅಲ್ಲಿಯೇ ಸಹಜವಾಗಿ ಅರಳಿದವರು. ಕನ್ನಡ ಕುರಿತಂತೆ ಉಭಯನಾಸ್ತಿ. ಪ್ರೊ॥ ಆರ್. ಎಲ್. ನರಸಿಂಹಯ್ಯ (೧೯೦೨-೬೯) ತಮ್ಮ ಲೇಖನ ಮತ್ತು ಕೃತಿಗಳಲ್ಲಿ ಕನ್ನಡಕ್ಕೆ ಈ ನೂತನ ನವ್ಯತೆಯನ್ನು – ಆಧುನಿಕ ವಿಜ್ಞಾನ ಪರಿಕಲ್ಪನೆಗಳ ಸಮರ್ಥ ಸಂವಹನ ಗುಣ – ಆವಾಹಿಸಲು ಮಾಡುತ್ತಿದ್ದ ಪ್ರಯೋಗಗಳೂ ತಂತ್ರಗಳೂ ಗಮನಾರ್ಹವಾಗಿದ್ದುವು. ಹೀಗೆ ಅಂದು ನಾನು ಎರಡು ಪ್ರಬಲ ಪ್ರಭಾವಗಳ ತುಯ್ತದಲ್ಲಿದ್ದೆ. ಇಂಗ್ಲಿಷಿನಲ್ಲಿರುವ ವಿಜ್ಞಾನ ಆಕರ ಗ್ರಂಥಗಳ ಅಧ್ಯಯನದಿಂದ ವಿಷಯ ಸ್ವಾಂಗೀಕರಣ ಮತ್ತು ಜೀನ್ಸ್ ಮೊದಲಾದವರ ಇಂಗ್ಲಿಷ್ ಶೈಲಿಯ ತೆರದಲ್ಲಿ ಕನ್ನಡವನ್ನು ಆರ್. ಎಲ್. ಎನ್. ಮಾರ್ಗದಲ್ಲಿ ಪುನಾರೂಪಿಸುವ ಪ್ರಯತ್ನ.

ಕನ್ನಡದಲ್ಲಿ ಎದುರಾಗುವ ಈ ರಾಚನಿಕ ಸಮಸ್ಯೆಯನ್ನು ಸೇಡಿಯಾಪು ಅವರ ಜೊತೆ ಆಗಾಗ ಚರ್ಚಿಸುತ್ತಿದ್ದೆ : ವಿಷಯದ ಅಮೂರ್ತ ಪರಿಕಲ್ಪನೆ ನನಗೆ ಇಂಗ್ಲಿಷ್ ಮೂಲಕ ಸ್ವಾಧೀನವಾಗಿದೆ. ಇದಕ್ಕೆ ಒಪ್ಪುವ ಕನ್ನಡ ಶೈಲಿಯ ರೂಪಣೆ ಹೇಗೆ ? ಧರಿಪಾತನಿದ್ದಾನೆ, ಪೋಷಾಕು ಎಲ್ಲಿ ? ಅಂದು ಅವರು ಮೌಖಿಕವಾಗಿ ತಿಳಿಯ ಹೇಳಿದ ಅನೇಕ ಮೂಲಭೂತ ಚಿಂತನೆಗಳು ಮುಂದೆ ಅವರ ''ಹೊಸಗನ್ನಡ ಗದ್ಯಭಾಷೆ'' ಎಂಬ ಮಾರ್ಗಪ್ರವರ್ತಕ ಲೇಖನದಲ್ಲಿ ಹರಳುಗಟ್ಟಿವೆ. ('ವಿಚಾರ ಪ್ರಪಂಚ'ದಲ್ಲಿದೆ.) ಆಯ್ದ ಭಾಗ (೧೯೫೭ರ ಬರೆಹ):

''ಇಂದಿನ ಬರೆಹಗಾರರು, ಅಧ್ಯಾಪಕರು, ವಿದ್ಯಾರ್ಥಿಗಳು, ಅಧಿಕಾರ ಸ್ಥಾನಾಪನ್ನರು ಮತ್ತು ಜನರು ಸಹ ಏನೆನ್ನುತ್ತಿದ್ದಾರೆ ? ಕನ್ನಡದಲ್ಲಿ ವೈಜ್ಞಾನಿಕ ಗ್ರಂಥಗಳನ್ನು ಬರೆಯುವುದಕ್ಕೆ ಬೇಕಾದ ಶಬ್ದಗಳಿಲ್ಲ; ಯಾವುದೊಂದು ಆಧುನಿಕ ಶಾಸ್ತ್ರ ವಿಷಯವನ್ನು ಕನ್ನಡದಲ್ಲಿ ಬೋಧಿಸಲು ಸಾಧ್ಯವಾಗುವುದಿಲ್ಲ ಅಥವಾ ಒಬ್ಬನು ಕನ್ನಡದಲ್ಲಿ ಬೋಧಿಸಿದರೂ ಅದು ಅವಗತವಾಗುವುದಿಲ್ಲ.... ನಮ್ಮ ಮನಸ್ಸಿನಲ್ಲಿರುವ ಯಾವುದೊಂದು ಅರ್ಥವನ್ನು ನಮಗೆ ಸರಿಯಾಗಿ ಹೇಳುವುದಕ್ಕೆ ಬರುವುದಿಲ್ಲವೆಂದರೆ, ಆ ಅರ್ಥವು ನಮ್ಮ ಮನಸ್ಸಿನಲ್ಲಿ ಸ್ಫುಟರೂಪದಲ್ಲಿ ಬಿಂಬಿಸಿರುವುದಿಲ್ಲವೆಂದು ತಾತ್ತ್ವಿಕವಾಗಿ ಸಿದ್ಧವಾಗುತ್ತದೆ. ಇದಕ್ಕೆ ಕೆಲವರು ಹೀಗೆ ಆಕ್ಷೇಪವೆತ್ತಬಹುದು: ಬೇರೆ ಭಾಷೆಯಲ್ಲಿ, ಉದಾಹರಣೆಗೆ ಇಂಗ್ಲಿಷಿನಲ್ಲಿ, ಅದೇ ವಿಚಾರವನ್ನು ನಾವು ಸಮಂಜಸವಾಗಿ ಹೇಳಬಲ್ಲೆವು; ಆದರೆ ಕನ್ನಡದಲ್ಲಿ ಹೇಳಲಾಗುವುದಿಲ್ಲವಲ್ಲಾ ಎಂದರೆ, ನಾವು ಹೇಳಬಲ್ಲ ವಿಚಾರವೆಲ್ಲ 'ನಮ್ಮದೇ' ಆಗಿಲ್ಲವೆಂಬುದನ್ನು ಮರೆಯಬಾರದು... ಇಂಗ್ಲಿಷಿನಲ್ಲಿ ಜ್ಞಾನವನ್ನು ಪಡೆದು ಕನ್ನಡದಲ್ಲಿ ವಿವರಿಸತೊಡಗುವವರೆಲ್ಲ, ಕನ್ನಡ ಭಾಷೆಯಲ್ಲಿ ಸಾಕಷ್ಟು ಅಭ್ಯಾಸವನ್ನು ಮಾಡುತ್ತಾರೆಯೇ ?.... ನಿಜವಾಗಿ 'ನಮ್ಮ ಭಾಷೆ'ಯನ್ನು ಬೆಳೆಯಿಸುವುದೆಂದರೆ, ನಮ್ಮ ಭಾಷೆಯಲ್ಲಿಯೇ ನಮ್ಮ ವಿಚಾರಗಳನ್ನು ಬೆಳೆಯಿಸುವುದು; ಹಾಗೆ ಬೆಳೆದ ವಿಚಾರವನ್ನು ಯಥಾವತ್ತಾಗಿ ಪ್ರಕಟಪಡಿಸುವುದು; ನಮ್ಮ ಭಾಷೆಯ ಉತ್ತಮ ಗ್ರಂಥಗಳನ್ನು ಅಧ್ಯಯನ ಮಾಡಿ ನಮ್ಮ ವಾಕ್ ಸಂಪತ್ತಿಯನ್ನು ಹೆಚ್ಚಿಸಿಕೊಂಡು, ಆಯಾ ಶಬ್ದಗಳ ಆಳವರಿತು ಪ್ರಯೋಗಿಸುವುದು.''

ಇಂಥ ಒಂದು ಅಮೂಲ್ಯ ಮಾರ್ಗದರ್ಶನ ನನ್ನ ಇಪ್ಪತ್ತ ಮೂರನೆಯ ವಯಸ್ಸಿನಲ್ಲಿ ಲಭಿಸಿದ್ದು ಪರಮಭಾಗ್ಯವೆಂದು ಭಾವಿಸಿದ್ದೇನೆ. ಈಗ (೨೦೦೨) ಅನುಭವದಿಂದ ತಿಳಿದಿದೆ. ಕನ್ನಡದಲ್ಲಿ ಆಧುನಿಕ ವಿಜ್ಞಾನ ವಾಙ್ಮಯ ಸೃಜಿಸಲು ಒಬ್ಬ ಲೇಖಕ ಅರಿತು ಅನುಷ್ಠಾನಿಸಬೇಕಾದ ಮೂರು ಪ್ರಮುಖ ಸೂತ್ರಗಳು : ೧. ಪರಿಕಲ್ಪನಾತ್ಮಕ ಸ್ಪಷ್ಟತೆ - ಆಕರ ಗ್ರಂಥಗಳ ಗಂಭೀರ ಅಧ್ಯಯನದಿಂದಲೂ ಸ್ವತಂತ್ರ ಚಿಂತನ ಮಂಥನ ಪ್ರಯೋಗ ವೀಕ್ಷಣೆಗಳಿಂದಲೂ ವಿದ್ವಜ್ಜನ ಸಂಪರ್ಕದಿಂದಲೂ ಇದು ಸಿದ್ಧಿಸುತ್ತದೆ. ೨. ಕನ್ನಡ ಭಾಷಾ ಪಾರಿಶುದ್ಧ್ಯ – ಅಭಿಜಾತ ಕನ್ನಡ ಗ್ರಂಥಗಳ ವಾಚನದಿಂದ ಇದು ಒದಗುತ್ತದೆ. ೩. ನಿರೂಪಣೋಲ್ಲಾಸ – ಇದು ವ್ಯಕ್ತಿಗತ ಶ್ರದ್ಧೆಯ ಫಲ, ತನ್ನ ಬರೆಹ ಆದಷ್ಟು ನಿಖರವಾಗಿಯೂ ಶುದ್ಧವಾಗಿಯೂ ಆಕರ್ಷಕವಾಗಿಯೂ ಇರಬೇಕೆಂಬ ಉತ್ಕಟೇಚ್ಛೆ.

ಒಮ್ಮೆ ಪ್ರಶ್ನಿಸಿದೆ, ''ಪರಂಪರೆ, ಸಂಪ್ರದಾಯ – ಏನು ಸಂಬಂಧ ಮತ್ತು ವ್ಯತ್ಯಾಸ ?''

ಸೇಡಿಯಾಪು ನುಡಿದರು ಮುತ್ತಿನ ಹಾರದಂತೆ, ''ಜೀವಂತ ಜನಾಂಗದ ಸಂತತ ಪರಿಕ್ರಮಣದಲ್ಲಿ ಹಲವಾರು ಜೀವನ ಮೌಲ್ಯಗಳು ಘನೀಭವಿಸುತ್ತವೆ. ಇವುಗಳ ಮೊತ್ತ ಸಂಸ್ಕೃತಿ. ಸಂಸ್ಕೃತಿಯ ಪ್ರವಹನ ಪರಂಪರೆ. ಪರಂಪರೆಯ ವರ್ತಮಾನ ಮುಖ ಸಂಪ್ರದಾಯ. ಹೀಗೆ ಸಂಪ್ರದಾಯ ಪ್ರಾಚೀನ ಮೌಲ್ಯಗಳ ವರ್ತಮಾನ ಮುಖವೂ ಹೌದು ವರ್ತಮಾನ ಮೌಲ್ಯಗಳ ಮಾತ್ರವೂ ಹೌದು.'' ಹಿಮಾಲಯ ಸಂಸ್ಕೃತಿ, ಗಂಗೆ ಪರಂಪರೆ, ಕಾಶಿ ಸಂಪ್ರದಾಯ !

ನಿಜ, ''ಇಚ್ಚೆಗೆದೆಯೊಪ್ಪಿ ಬಗೆ ಬಿಚ್ಚಿದರೆ, ಕಣ್ಣೆ ಮಯ್ ಎಚ್ಚುವಂದದಿ ತೀಡಿ ತಿದ್ದಿ ಬರೆವೆ.'' ಹೀಗಿದ್ದರು ನಮ್ಮ ಸೇಡಿಯಾಪು – ಬುದ್ಧಿ ಹೃದಯ ವಾಕ್ ಶುದ್ಧಿಗಳ ಪರಾಕಾಷ್ಠೆ.

ಇಪ್ಪತ್ತನೆಯ ಶತಮಾನದ ಆರಂಭದ ವರ್ಷಗಳಲ್ಲೇ ಅನಾವರಣಗೊಂಡ ಶಕಲ ಸಿದ್ಧಾಂತ (Quantum theory) ಮತ್ತು ಸಾಪೇಕ್ಷತಾ ಸಿದ್ಧಾಂತ (Theory of Relativity) ಇವುಗಳ ಜನಕರು ಅನುಕ್ರಮವಾಗಿ ಮ್ಯಾಕ್ಸ್ ಪ್ಲ್ಯಾಂಕ್ (೧೮೫೮-೧೯೪೭) ಮತ್ತು ಆಲ್ಬರ್ಟ್ ಐನ್‌ಸ್ಟೈನ್ (೧೮೭೯-೧೯೫೫). ಪ್ಲ್ಯಾಂಕರ ಷಷ್ಟಿಪೂರ್ತಿ ಸಮಾರಂಭದಲ್ಲಿ, ೧೯೧೮, ಐನ್‌ಸ್ಟೈನ್ ಮಾಡಿದ ಭಾಷಣದ ಒಂದು ಪರಿಚ್ಛೇದ, ''ವಿಜ್ಞಾನ ದೇವಾಲಯ ಹಲವಾರು ಪ್ರಾಕಾರಗಳಿಂದ ಸಂಯೋಜಿತ ವಾಗಿರುವ ಒಂದು ಸಂಕೀರ್ಣ ರಚನೆ. ಇದರ ನಿವಾಸಿಗಳ ಸ್ವಭಾವಗಳು ವಿವಿಧವಾಗಿರುವುವೊಂದೇ ಅಲ್ಲ, ಇವರು ದೇವಾಲಯದ ಒಳಗೆ ಉತ್ಪಾದಿಸುವ ಪ್ರಭಾವಗಳು ಕೂಡ ಹಾಗೆಯೇ. ಇವರ ಪೈಕಿ ಹೆಚ್ಚಿನ ಪ್ರತಿಯೊಬ್ಬನೂ ತನ್ನ ಬುದ್ಧಿ ಸಾಮರ್ಥ್ಯದ ಉತ್ಕೃಷ್ಟತೆ ಬಗ್ಗೆ ಸಂತೃಪ್ತಿ ತಳೆದವನಾಗಿದ್ದು ವಿಜ್ಞಾನ ಕ್ರಿಯಾಕಲಾಪಗಳಲ್ಲಿ ಉದ್ಯುಕ್ತನಾಗಿರುವನು. ತನ್ನ ಜೀವದ ಪ್ರಬಲ ಚಡಪಡಿಕೆಗಳು ಹೊರಹೊಮ್ಮಲು ಅವಕಾಶ ಒದಗಿಸಿ ಬಾಳ ಹಂಬಲಗಳನ್ನು ಈಡೇರಿಸಿಕೊಳ್ಳಲು ಚೆನ್ನಾಗಿ ಒಗ್ಗುವ ಕ್ರೀಡೆಯಾಗಿ ವಿಜ್ಞಾನವನ್ನು ಈತ ಕಂಡುಕೊಂಡಿದ್ದಾನೆ. ಉಪಯುಕ್ತ ಸಿದ್ಧಿಗಳನ್ನು ಗಳಿಸುವುದರತ್ತ ಮಾತ್ರ ತಮ್ಮ ಮಿದುಳ ಸಾಮಗ್ರಿಯನ್ನು ವ್ಯಯಿಸುವ ಹಲಮಂದಿಯೂ ಇದ್ದಾರೆ ನಿಜ. ಈಗ, ದೇವದೂತನೊಬ್ಬ ಧರೆಗಿಳಿದು ಬಂದು ಇವೆರಡು ವರ್ಗಗಳಿಗೂ ಸೇರಿದ ಎಲ್ಲರನ್ನೂ ದೇವಾಲಯದಿಂದ ಉಚ್ಚಾಟಿಸುವುದಾದ ಪಕ್ಷದಲ್ಲಿ ಗಮನಾರ್ಹ ಮಂದಿ ತೊಲಗಿ ಹೋಗುತ್ತಾರೆ. ಹಾಗಿದ್ದರೂ ದೇವಾಲಯದೊಳಗೆ ಈಗಿನ ಹಾಗೂ ಹಿಂದಿನ ಕೆಲವೊಂದು ಮಂದಿ ಉಳಿದೇ ಇರುತ್ತಾರೆ. ಈ ವಿರಳರ ಸಾಲಿನಲ್ಲಿ ನಾವು ನಮ್ಮ ಪ್ಲ್ಯಾಂಕರನ್ನು ಎಣಿಸುತ್ತೇವೆ. ಎಂದೇ ಇವರಿಗೆ ನಮ್ಮ ತುಂಬು ಹೃದಯದ ಅಭಿನಂದನೆ, ಅಭಿವಂದನೆ ಮತ್ತು ಪ್ರೀತಿ ಸಲ್ಲುತ್ತವೆ.''

ಮೇಲಿನ ನಿರೂಪಣೆಯಲ್ಲಿ ''ವಿಜ್ಞಾನ''ದ ಬದಲು ''ವಾಙ್ಮಯ'' ಎಂದೂ ''ಪ್ಲ್ಯಾಂಕ್'' ಬದಲು ''ಸೇಡಿಯಾಪು'' ಎಂದೂ ಓದಿಕೊಂಡರೆ ಸೇಡಿಯಾಪು ಕೃಷ್ಣಭಟ್ಟರನ್ನು ಕುರಿತ ನುಡಿ ಚಿತ್ರಣ ಮತ್ತು ನಮನ ಪೂರ್ತಿ ಆಗುತ್ತವೆ.

*ಸೇಡಿಯಾಪೆಂಬವರು ಧೀಶಕ್ತಿ - ಹೃದಯವನಿ*
*ಗಾಢ ಸಂಲಗ್ನತೆಯ ಪರಮಫಲ, ಶತಕಗಳ*
*ಮೂಢನಂಬಿಕೆಗಳಂ ತರಿದೊಗೆವ ಶುಚಿಮತಿ ನಿ -*
*ಗೂಢತೆಗೆ ಕೀಲಿ ಕಾಣೀ ಬದುಕು ಅತ್ರಿ ಸೂನು*

ಜಿ. ಟಿ. ನಾರಾಯಣರಾವ್
೮ 'ಅತ್ರಿ', ಕಾಮಾಕ್ಷಿ ಆಸ್ಪತ್ರೆ ರಸ್ತೆ, ಸರಸ್ವತಿಪುರ, ಮೈಸೂರು-೯

# ಆಂಥ್ರ್ಯಾಕ್ಸ್ ಭೀತಿ

**ಡಾ|| ಪ್ರಕಾಶ್ ಸಿ. ರಾವ್**

ಅಕ್ಟೋಬರ್ ೫, ೨೦೦೧ ರಂದು ಅಮೆರಿಕಾದ ಫ್ಲೋರಿಡಾ ನಗರದ ಮಾಧ್ಯಮದ ಕಛೇರಿಯಲ್ಲಿ ಕಂಡು ಹಿಡಿಯಲಾದ ಆಂಥ್ರ್ಯಾಕ್ಸ್ ರೋಗದ ಅಂಕುರ ಬೀಜ (SPORES), ಈ ಶತಮಾನದ ಮೊದಲನೇ ಜೈವಿಕ ಭಯೋತ್ಪಾದನೆಯ ದಾಳಿಯನ್ನು ಸೂಚಿಸುತ್ತದೆ ಎಂಬುದನ್ನು ಸೆಪ್ಟೆಂಬರ್ ೧೧ರ ವಿಶ್ವ ವ್ಯಾಪಾರ ಕೇಂದ್ರದ ಮೇಲೆ ನಡೆದ ದುರ್ಘಟನೆಯ ಹಿನ್ನೆಲೆಯಲ್ಲಿ ಹೇಳಲಾಗುತ್ತಿದೆ. ೨೦ನೇ ಶತಮಾನದಲ್ಲಿ ಆಂಥ್ರ್ಯಾಕ್ಸ್ ಭಯೋತ್ಪಾದಕ ದಾಳಿಯಲ್ಲಿ ಒಬ್ಬನೇ ಅಮೆರಿಕನ್ನನು ಮೃತಪಟ್ಟಿದ್ದರೂ, ಜೈವಿಕ ಭಯೋತ್ಪಾದನೆಯನ್ನು ಅನೇಕ ಬಾರಿ (೧೯೭೨, ೮೦, ೮೬, ೯೦, ೯೪) ಪ್ರಯತ್ನಿಸಲಾಗಿದೆ. ಈ ಬಾರಿಯ ಆಂಥ್ರ್ಯಾಕ್ಸ್ ಭಯೋತ್ಪಾದನಾ ದಾಳಿ ಜನರಲ್ಲಿ ಭಯ, ಭೀತಿ ಮೂಡಿಸಿದೆ.

ಜೈವಿಕ ಪದಾರ್ಥಗಳನ್ನು ಉಪಯೋಗಿಸಿ ಜೈವಿಕ ಯುದ್ಧದಲ್ಲಿ ತೊಡಗಲು ಹಲವಾರು ದೇಶಗಳು ಮುಂದಾಗುತ್ತಿರುವ ಸಮಯದಲ್ಲಿ ಅನೇಕ ಸಂಘಟನೆಗಳು ಜೈವಿಕ ಭಯೋತ್ಪಾದನೆಯಿಂದ ಭೀತಿ ಹುಟ್ಟಿಸಲು ಮುಂದಾಗಿವೆ. ಜೈವಿಕ ತಂತ್ರಜ್ಞಾನದ ಸಂಶೋಧನೆಯಿಂದ ಅಮೆರಿಕಾ, ರಶಿಯಾ, ಇಂಗ್ಲೆಂಡ್, ಜಪಾನ್, ಫ್ರಾನ್ಸ್, ಜರ್ಮನಿಯಲ್ಲಿ ಈಗಾಗಲೇ ಜೈವಿಕ ಭಯೋತ್ಪಾದನೆಯ ಅಸ್ತ್ರವನ್ನು ತಯಾರಿಸಲಾಗಿದೆ. ೧೯೪೪ರಲ್ಲಿ ಬ್ರಿಟನ್ನಿನ ಪ್ರಧಾನಿ ವಿನ್‌ಸ್ಟನ್ ಚರ್ಚಿಲ್, ೫ಲಕ್ಷ ಪೌಂಡ್ ಆಂಥ್ರ್ಯಾಕ್ಸ್ ಅಂಕುರ ಬೀಜವನ್ನು ತಯಾರಿಸಿ ಯುದ್ಧದಲ್ಲಿ ಉಪಯೋಗಿಸಲು ಅನುಮತಿ ನೀಡಿದ್ದನು. ಅಮೆರಿಕಾದ ಅಧ್ಯಕ್ಷ ನಿಕ್ಸನ್ ಜೈವಿಕ ಅಸ್ತ್ರದ ತಯಾರಿಕೆ ಹಾಗೂ ಉಪಯೋಗವನ್ನು ನಿಲ್ಲಿಸಲು ಪ್ರಯತ್ನಿಸಿದನು! ಅಂತರರಾಷ್ಟ್ರೀಯ ಮಟ್ಟದಲ್ಲಿ ೧೯೭೨ರಿಂದ ಜೈವಿಕ ಅಸ್ತ್ರದ ಉಪಯೋಗವನ್ನು ನಿಷೇಧಿಸಲಾಯಿತು. ಆದರೆ ಈ ನಿಷೇಧ ಕೇವಲ ಪೇಪರಿನಲ್ಲಿ ಮಾತ್ರ ಉಳಿದಿದೆ. ಸಂಶೋಧನೆಯ ಹೆಸರಿನಲ್ಲಿ ಈ ಅಸ್ತ್ರದ ತಯಾರಿಕೆ ಮುಂದುವರೆದಿದೆ. ೨೦೦೧ರ ಜುಲೈನಲ್ಲಿ ನಡೆದ ಜೈವಿಕ ಅಸ್ತ್ರದ ಉಪಯೋಗವನ್ನು ತಡೆಯಲು ರಾಷ್ಟ್ರಗಳು ಪಾಲಿಸಬೇಕಾದ ಶಿಸ್ತು, ಕ್ರಮದ ಚರ್ಚೆಯಲ್ಲಿ ಹಲವಾರು ದೇಶಗಳು ಪಾಲುಗೊಂಡವು ಹಾಗೂ ಸಹಿ ಹಾಕಿದವು. ಆದರೆ ಅಮೆರಿಕಾ ಈ ಚರ್ಚೆಯಲ್ಲಿ ಪಾಲುಗೊಳ್ಳಲಿಲ್ಲ. ಕಾಕತಾಳೀಯವಾಗಿ ಇದೇ ಅಕ್ಟೋಬರ್‌ನಲ್ಲಿ ಅಮೆರಿಕಾ ಜೈವಿಕ ಭಯೋತ್ಪಾದನೆಗೆ ಗುರಿಯಾಗಿರುವುದು ವಿಪರ್ಯಾಸದ ಸಂಗತಿ.

ಭಯೋತ್ಪಾದನೆಯಲ್ಲಿ ರಾಸಾಯನಿಕ, ವಿಕಿರಣ ಹಾಗೂ ಅಣ್ವಸ್ತ್ರಗಳಿಗಿಂತ ಜೈವಿಕ ಅಸ್ತ್ರಗಳು ಹೆಚ್ಚು ಪರಿಣಾಮಕಾರಿಯಾಗಿವೆ. ಜೈವಿಕ ಅಸ್ತ್ರಗಳಲ್ಲಿ ಸೂಕ್ಷ್ಮಜೀವಿಗಳಾದ ಬೆಕ್ಟೀರಿಯಾ, ರಿಕೆಟ್ಸಿಯಾ ವೈರಸ್, ಕ್ಲೆಮಿಡಿಯಾ ಹಾಗೂ ಅಣಬೆಗಳನ್ನು ಬಳಸಲಾಗುತ್ತದೆ. ಈ ರೋಗಾಣುಗಳು ಉಸಿರು, ಆಹಾರ ಹಾಗೂ ಚರ್ಮದ ಮೂಲಕ ದೇಹವನ್ನು ಸೇರಿ ರೋಗ ಉಂಟುಮಾಡುವುದಲ್ಲದೆ, ಸಾವನ್ನೂ ಉಂಟುಮಾಡಬಹುದಾಗಿದೆ. ಸಾವಿರಾರು ಟನ್ ರಾಸಾಯನಿಕ ಅಸ್ತ್ರಗಳನ್ನು ಶೇಖರಿಸಿಡುವ ಬದಲು, ಕೇವಲ ಕೆಲವೇ ಕಿ.ಲೋ.ಗ್ರಾಂಗಳಷ್ಟು ಆಂಥ್ರ್ಯಾಕ್ಸ್ ಅಂಕುರ ಬೀಜವನ್ನು ಉಪಯೋಗಿಸಿ ಹೆಚ್ಚು ಜನರನ್ನು ಸಾಯಿಸಬಹುದಾಗಿದೆ. ಜೈವಿಕ ಅಸ್ತ್ರವನ್ನು ಕಳ್ಳ ಸಾಗಾಣಿಕೆ ಮಾಡಿ, ಬಚ್ಚಿಡಲು ಸಾಧ್ಯವಾಗುವು ದರಿಂದ, ಜೈವಿಕ ಭಯೋತ್ಪಾದನೆ ಸಾಧಿಸಲು ಸುಲಭವಾಗುತ್ತದೆ. ಶೈತ್ಯಾಗಾರದಲ್ಲಿ ಒಣಗಿಸಿದ ಅಂಕುರ ಬೀಜಗಳನ್ನು ಅಂಚೆ ಮೂಲಕ ದೇಶದಿಂದ ದೇಶಕ್ಕೆ ಸಾಗಿಸಬಹುದಾಗಿದೆ. ಈ ವಿಧಾನ ಸಿಂಪಡಿಸುವ ವಿಧಾನಕ್ಕಿಂತ ಅಷ್ಟೇನೂ ಪರಿಣಾಮಕಾರಿಯಲ್ಲದಿದ್ದರೂ, ಭಯೋತ್ಪಾದನೆ ಸಾಧಿಸಲು ಪರಿಣಾಮಕಾರಿಯಾಗಿದೆ. ಮಾಧ್ಯಮಗಳು ಅಮೆರಿಕಾದ ವೈಟ್ ಹೌಸ್ ಹಾಗೂ ಭಾರತ ಸರ್ಕಾರದ ಗೃಹಮಂತ್ರಿಗಳ ಕಛೇರಿಗಳು ಸ್ವೀಕರಿಸಿದ ಅಂಚೆಗಳ ಬಗ್ಗೆ ವರದಿ ಮಾಡಿ, ಭಯೋತ್ಪಾದನೆಗೆ ಅನಗತ್ಯ ಪ್ರಚಾರ ಕೊಡುವ ಪ್ರಯತ್ನ ಮಾಡಿವೆ. ಅದೇ ಮಾಧ್ಯಮಗಳು ಅಫ್ಘಾನಿಸ್ತಾನದಲ್ಲಿ ಅಮೆರಿಕನ್ ಬಾಂಬ್ ದಾಳಿಗಳಲ್ಲಿ ಮೃತಪಟ್ಟ ಸಾವಿರಾರು ಮಕ್ಕಳು ಹಾಗೂ ಮಹಿಳೆಯರ ಬಗ್ಗೆ ವರದಿ ಮಾಡದೆ ಇರುವುದು ಮಾಧ್ಯಮಗಳ ಪಕ್ಷಪಾತ ಧೋರಣೆಯನ್ನು ತೋರಿಸುತ್ತದೆ. ಜೈವಿಕ ಭಯೋತ್ಪಾದನೆಯನ್ನು ಪತ್ತೆ ಹಚ್ಚುವುದು ಅಷ್ಟೇನೂ ಸುಲಭವಲ್ಲ. ಕಾರಣ, ಈ ಪದಾರ್ಥಗಳನ್ನು ತಯಾರಿಸಲು ಔಷಧಿ ಉದ್ಯಮ, ಪ್ರಯೋಗಾಲಯಗಳನ್ನು ಬಳಸಬಹುದಾಗಿದೆ. ಈ ಅಸ್ತ್ರಗಳನ್ನು ತಯಾರಿಸಲು ಅಷ್ಟೇನೂ ಖರ್ಚಾಗುವುದಿಲ್ಲ. ಅಲ್ಲದೆ ವಿಶೇಷ ತಂತ್ರಜ್ಞಾನದ ಅವಶ್ಯಕತೆಯೂ ಇಲ್ಲ.

ಆಂಥ್ರ್ಯಾಕ್ಸ್ ಸಾಕುಪ್ರಾಣಿಗಳ ರೋಗ; ಅದು ಮಾನವನಿಗೆ ತಗುಲಿದಾಗ ಸಾವು ಉಂಟಾಗಲು ಸಾಧ್ಯ. ಆಂಥ್ರ್ಯಾಕ್ಸ್ ರೋಗಾಣು ಒಂದು ಬೆಕ್ಟೀರಿಯಂ. ಈ ರೋಗಾಣು ಅಂಕುರ ಬೀಜದ ರೂಪ ತಾಳಿ, ಹಲವಾರು ದಶಕಗಳವರೆಗೆ ಸುಪ್ತಸ್ಥಿತಿಯಲ್ಲಿ ಜೀವಂತವಿದ್ದು, ನಂತರ ಬೆಕ್ಟೀರಿಯಂ ರೂಪ ತಾಳಿ ರೋಗ ಉಂಟುಮಾಡುತ್ತದೆ. ಈ ಗುಣವಿರುವುದರಿಂದಲೇ ಈ ರೋಗಾಣುವನ್ನು ಜೈವಿಕ ಅಸ್ತ್ರದಂತೆ ಉಪಯೋಗಿಸಲು ಸಾಧ್ಯವಾಗುತ್ತದೆ. ಈ ಗುಣ ಇತರೆ ಅನೇಕ ಬೆಕ್ಟೀರಿಯಂಗೆ ಇರುವುದಿಲ್ಲ. ಈ ರೋಗ ಸಸ್ಯಾಹಾರಿ ಪ್ರಾಣಿಗಳಲ್ಲಿಯಲ್ಲದೆ(ಕುರಿ, ಹಸು, ಆಡು) ರೈತರಲ್ಲಿ, ಪ್ರಾಣಿವಧೆ ಮಾಡುವವರಲ್ಲಿ, ಉಣ್ಣೆ ತಯಾರಿಸುವವರಲ್ಲಿ ಕಂಡುಬರುತ್ತದೆ. ಇತ್ತೀಚೆಗೆ ಈ ರೋಗ ಪ್ರಾಣಿಗಳಲ್ಲೂ ವಿರಳವಾಗಿದೆ. ಈ ರೋಗಾಣು ಮಾನವನ ಚರ್ಮ, ಮೂಗು, ಗಂಟಲು ಮೂಲಕ ದೇಹ ಸೇರಿ ಧ್ವನಿ ಪೆಟ್ಟಿಗೆ, ಪುಪ್ಪಸ ಹಾಗೂ ಕರಳಿನಲ್ಲಿ ವರ್ಧಿಸಿ, ರಕ್ತ ಸೇರಿ, ನಂತರ ಮಿದುಳು ಹಾಗೂ ಇನ್ನೂ ಅನೇಕ ಅಂಗಾಂಗಗಳಿಗೆ ಹರಡುತ್ತದೆ.

ರೋಗ ಉಂಟಾಗಲು ಕೆಲವು ದಿವಸಗಳಾಗಬಹುದು. ಚರ್ಮದಲ್ಲಿ ನೋವುರಹಿತ ಕುರ ಉಂಟಾಗುತ್ತದೆ. ಕ್ರಮೇಣ ರೋಗಿಗೆ ಜ್ವರ ಬಂದು, ನಂಜಿನಿಂದ ಸಾವನ್ನಪ್ಪುತ್ತಾನೆ.

ರೋಗಾಣು ಉಸಿರೆಳೆತದಿಂದ ಪುಪ್ಪಸ ಸೇರಿ ನಿಮೋನಿಯಾ ಹಾಗೂ ನಂಜು ಉಂಟಾಗುತ್ತದೆ. ಈ ಮಾರ್ಗದಿಂದ ಉಂಟಾದ ರೋಗ ಮರಣಾಂತಿಕವಾಗಿ ಪರಿಣಮಿಸಬಹುದು. ಅನ್ನನಾಳದ ಮಾರ್ಗವಾಗಿ ರೋಗಾಣು ದೇಹ ಸೇರಿ ವಾಂತಿ ಭೇದಿ ಉಂಟುಮಾಡುತ್ತದೆ. ಈ ಮಾರ್ಗದಿಂದ ಉಂಟಾಗುವ ರೋಗ ಅಷ್ಟೇನೂ ಸಾಮಾನ್ಯವಲ್ಲ. ಈ ರೋಗ ಬೆಕ್ಟೀರಿಯಂ ಅಲ್ಲದೆ, ಸುಮಾರು ೨೫೦೦ ಅಂಕುರ ಬೀಜದ ಸೇವನೆಯಿಂದಲೂ ಉಂಟಾಗಬಹುದು.

(೩೬ನೇ ಪುಟಕ್ಕೆ)



# ಮೂಳೆ ಚಿಕಿತ್ಸೆಯಲ್ಲಿ ಮೂಢನಂಬಿಕೆಗಳು

ಡಾ॥ ಎಸ್. ಎಸ್. ಪಾಟೀಲ

ಅನಕ್ಷರತೆ, ಬಡತನ, ಅವಿದ್ಯೆಯಿಂದ ನಲುಗುತ್ತಿರುವ ನಮ್ಮ ದೇಶದಲ್ಲಿ ವೈಜ್ಞಾನಿಕ ಮನೋಭಾವನೆಯ ಕೊರತೆ ಹೇರಳವಾಗಿ ಬೇರೂರಿದೆ. ಆರೋಗ್ಯದತ್ತ ಗಮನ ಹರಿಸಿದಾಗ ಇದು ಸ್ಪಷ್ಟವಾಗಿ ಕಾಣುತ್ತದೆ. ದೇಹ ರಚನೆಯ ಬಗ್ಗೆ, ದೇಹಾಂಗಗಳ ಕಾರ್ಯ ಚಟುವಟಿಕೆಗಳ ಬಗ್ಗೆ, ರೋಗಗಳ ಉತ್ಪತ್ತಿಯ ಬಗ್ಗೆ ವೈಜ್ಞಾನಿಕ ತಿಳಿವಳಿಕೆ ಸಾಕಷ್ಟು ಲಭ್ಯವಿದ್ದರೂ ಅದನ್ನು ತತ್ವಶಃ ಪಾಲಿಸುವ ಮನಸ್ಸು ನಮಗಿಲ್ಲ.

ಮೂಢನಂಬಿಕೆಯಲ್ಲಿಯ ಮೂಢತ್ವಕ್ಕೆ ಅಜ್ಞಾನವೇ ಕಾರಣ. ರೋಗ ಬಂದಾಗ ವಿಭೂತಿ ಹಚ್ಚಿದರೆ, ತಾಯಿತ ಕಟ್ಟಿದರೆ, ಮಂತ್ರ ಹಾಕಿದರೆ ರೋಗ ಹೋಗಬಹುದೇ ? ರೋಗದ ಲಕ್ಷಣ ತಿಳಿದುಕೊಳ್ಳಬೇಕು, ರೋಗವನ್ನು ಖಚಿತಪಡಿಸಿಕೊಳ್ಳಬೇಕು, ರೋಗ ಕಡಿಮೆಯಾಗುವಂತೆ ಉಪಚರಿಸಬೇಕು, ಸಾಧ್ಯವಾದರೆ ಆ ರೋಗ ಮತ್ತೆ ಮರುಕಳಿಸದಂತೆ ಪ್ರಯತ್ನಿಸಬೇಕು.

ರೋಗದ ಬಗ್ಗೆ, ಅದು ಹುಟ್ಟಿ ಹರಡುವ ಬಗ್ಗೆ, ಅದರ ಚಿಕಿತ್ಸೆಯ ಬಗ್ಗೆ ನಮ್ಮಲ್ಲಿ ಸಾಕಷ್ಟು ಮೂಢನಂಬಿಕೆಗಳಿವೆ. ಮಗು ಸದಾ ಅಳುತ್ತಿದ್ದರೆ, ಅದರ ಮೈ ಕಾವೇರುತ್ತಿದ್ದರೆ, ಮೇಲಿಂದ ಮೇಲೆ ಭೇದಿಯಾಗುತ್ತಿದ್ದರೆ ವೈದ್ಯರ ಹತ್ತಿರ ಹೋಗದೆ ಒಣಗಿದ ಕೆಂಪು ಮೆಣಸಿನಕಾಯಿ ಇಳಿಸಿ ಉಪ್ಪಿನೊಂದಿಗೆ ಬೆರೆಸಿ ಬೆಂಕಿಯಲ್ಲಿ ಹಾಕುವುದು, ಪೊರಕೆಯಿಂದ ದೃಷ್ಟಿ ಇಳಿಸುವುದು, ಸ್ವಾಮಿಗಳ ಪಾದದ ಮೇಲೆ ಮಗುವನ್ನು ಹಾಕಿ ಅವರು ಕೊಟ್ಟ ಬೂದಿ ಲೇಪಿಸುವುದು, ಮಂತ್ರಿಸಿದ ನೀರು ಕುಡಿಸುವುದು ಇಂದಿನ ದಿನಗಳಲ್ಲೂ ನೋಡುತ್ತಿದ್ದೇವೆ. ರೋಗಾಣುಗಳ ಸಂಖ್ಯೆ, ಪ್ರಖರತೆ ಕಡಿಮೆ ಇದ್ದು ಮಗುವಿನ ಸ್ವರಕ್ಷಣಾ ಸಾಮರ್ಥ್ಯ ಹೆಚ್ಚಾದರೆ ಮಗು ಬದುಕುಳಿಯಬಹುದು. ಇಲ್ಲವಾದರೆ ಅದು ದೇವರಿಗೆ ಪ್ರಿಯವಾಗುತ್ತದೆ !



### ಪುರಾಣದ ಅಷ್ಟಾವಕ್ರ

ಅಷ್ಟಾವಕ್ರನು ಎಂಟು ಕಡೆ ಡೊಂಕಾಗಿ ಇದ್ದುದು ಮೂಳೆಗಳ ವಿಕಾರದಿಂದ. ಅವನಿಗೆ ವಿಕಾರತೆ ಬಂದಿದ್ದು ಬಹುಶಃ ಸಂಜಾತ ಮೂಳೆ ದೋಷದಿಂದ. 'ಎಲುಜನಕ ನ್ಯೂನತೆ' (Osteogenesis Imperfecta) ಎಂಬ ಸಂಜಾತ ರೋಗದಲ್ಲಿ ಮೂಳೆಗಳು ಮೆತ್ತಗಿರುತ್ತವೆ. ಎಲುಕಣಗಳು ಎಲುಬನ್ನು ಗಟ್ಟಿಯಾಗಿ ರಚಿಸುವಲ್ಲಿ ವಿಫಲಗೊಳ್ಳುತ್ತವೆ. ಈ ರೋಗದಿಂದ ಬಳಲುವ ಮಕ್ಕಳ ಮೂಳೆಗಳು ಶಿಶು ಅವಸ್ಥೆಯಿಂದಲೇ ಅಲ್ಪಸ್ವಲ್ಪ ಪೆಟ್ಟಿನಿಂದಾಗಿ ಮುರಿಯುತ್ತವೆ. ಮುರಿದದ್ದು ಕೆಡುಕೂಡುತ್ತವೆ. ಒಂದು ಕಡೆ ಕೂಡುತ್ತಿರುವಾಗಲೇ ಮತ್ತೊಂದು ಕಡೆ ಮುರಿಯುತ್ತವೆ. ಕೆಲವು ಮಕ್ಕಳು ಬದುಕುಳಿಯುವುದಿಲ್ಲ. ಬದುಕುಳಿದವರಲ್ಲಿ ಎಲುಬುಗಳು ಸಹಜ ಶಕ್ತಿ ಪಡೆಯುತ್ತವೆ. ಹೀಗಾಗಿ ಪ್ರಾಯಕ್ಕೆ ಬಂದಂತೆ ವ್ಯಕ್ತಿಯ ಎಲುಬುಗಳು ಮುರಿಯುವುದು ಕಡಿಮೆಯಾಗುತ್ತದೆ. ಆದರೆ ಮೊದಲು ಮುರಿದು ಕೆಡುಕೂಡಿದ ವಿಕಲತೆಗಳು ಹಾಗೆಯೇ ಉಳಿಯುತ್ತವೆ. ತೋಳು, ಮುಂಗೈ, ಅಂಗೈ, ತೊಡೆ, ಮುಂಗಾಲು, ಪಾದ, ಕತ್ತು ಹಾಗೂ ಸೊಂಟ ವಿಕಲಗೊಂಡಿದ್ದರೆ, ಅಷ್ಟಾವಕ್ರಗಳು ದೇಹ ಅಳಿಯುವವರೆಗೆ ಉಳಿಯುತ್ತವೆ. ಮೂಳೆ ವಕ್ರಗೊಂಡರೂ ಮಿದುಳು ಸಹಜವಿರುವುದರಿಂದ ಅವರ ಬುದ್ಧಿ ಬೆಳವಣಿಗೆಯಲ್ಲಿ ಕೊರತೆ ಕಾಣುವುದಿಲ್ಲ. ಇವರು ಎಲ್ಲರಂತೆ ಸಹಜವಾಗಿರುತ್ತಾರೆ. ಕೆಲವೊಮ್ಮೆ ಅಷ್ಟಾವಕ್ರನಂತೆ ಕುಶಾಗ್ರಮತಿಗಳಾಗಿರಬಹುದು. 'ಎಲುಜನಕ ನ್ಯೂನತೆ' ರೋಗದ ಕಾರಣ ಸ್ಪಷ್ಟ ತಿಳಿದಿಲ್ಲವಾದುದರಿಂದ ಅದನ್ನು ತಡೆಗಟ್ಟುವುದು ಸಾಧ್ಯವಾಗುತ್ತಿಲ್ಲ. ವಿಕಲಗೊಂಡ ಮೂಳೆಗಳನ್ನು ಸುರೂಪಿಕ ಶಸ್ತ್ರಕ್ರಿಯೆಯಿಂದ ಉಪಚರಿಸಿ ಸಹಜತೆ ಪಡೆಯಬಹುದು. ಪಾಪ ಅಥವಾ ಶಾಪದ ಫಲವೆಂದು ಚಿಕಿತ್ಸೆಯಿಂದ ವಂಚಿತಗೊಂಡ ಮಕ್ಕಳು ಜೀವನವನ್ನು ದುಃಖದಲ್ಲಿಯೇ ಕಳೆಯಬೇಕಾಗುತ್ತದೆ.

ಕೀಲು ನೋವು, ಬೆನ್ನು ನೋವು, ಸೊಂಟ ನೋವುಗಳು ಮಧ್ಯ ವಯಸ್ಸಿನ ನಂತರ ಅನೇಕರನ್ನು ಕಾಡುತ್ತವೆ. ಇವುಗಳ ಕಾರಣ ಕಂಡುಕೊಂಡು ತಕ್ಕ ಚಿಕಿತ್ಸೆ ಪಡೆದು, ಹಿತಮಿತ ವ್ಯಾಯಾಮ ಮಾಡುತ್ತಿದ್ದರೆ ನೋವಿನ ಪ್ರಮಾಣ ತಗ್ಗಿಸಿ, ಮಾನಸಿಕ ಸ್ಥೈರ್ಯದಿಂದ ಸಹಜ ಜೀವನ ನಡೆಸಲು ಸಾಧ್ಯವಾಗುತ್ತದೆ. ಕೀಲು ವಾಯು ಎಂದು ತಾಯಿತ ಕಟ್ಟಿಸಿಕೊಂಡರೆ, ಉಂಗುರ, ಪಿಡೆ ಇಲ್ಲವೆ ಬಳೆ ಹಾಕಿಸಿಕೊಂಡರೆ, ಅಮಾವಾಸ್ಯೆಗೊಮ್ಮೆ ಗುಂಡಿಯಲ್ಲಿ ಮುಳುಗೆದ್ದರೆ ಸಮಸ್ಯೆ ಪರಿಹಾರವಾಗಲಾರದು. ತಾತ, ಮುತ್ತಾತ ಮಾಡುತ್ತಿದ್ದ ಚಿಕಿತ್ಸೆಯನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದೆ, ಸಂಭವಿಸಬಹುದಾದ ಅನರ್ಥಗಳ ಬಗ್ಗೆ ತಲೆಕಡಿಸಿಕೊಳ್ಳದೆ, ವೈದ್ಯರೆಂದು ಕರೆಯಿಸಿಕೊಳ್ಳುವ ಹುಂಬರಿಂದ ಚಿಕಿತ್ಸೆ ಪಡೆಯುವ ಅಮಾಯಕರ ಸ್ಥಿತಿ ಚಿಂತಾನಜನಕವಾಗುವುದರಲ್ಲಿ ಸಂಶಯವಿಲ್ಲ. ಇಂತಹವುಗಳನ್ನು ಅಲ್ಲಗಳೆಯುವುದಕ್ಕೆ ಉದಾಸೀನ ಮಾಡುವ ಸಂಬಂಧಿಸಿದ ವೈದ್ಯವಿಜ್ಞಾನಿಗಳ ಕರ್ತವ್ಯವಿಮುಖತೆ ಮೂಢನಂಬಿಕೆಗಳು ಅಂತೆಯೇ ಉಳಿದು ಬದುಕುವಲ್ಲಿ ಸಹಕಾರಿಯಾಗುತ್ತಿವೆ.

ಕೀಲು ಉಳುಕಿದಾಗ, ಮೂಳೆ ಮುರಿದಾಗ, ಕೀಲು ಸರಿದಾಗ ನೋವಾಗುವುದು ಸಹಜ. ವ್ಯಕ್ತಿ ನೋವಿನ ಶಮನ ಬಯಸುತ್ತಾನೆ. ಆಗ ಮೂಳೆ ಚಿಕಿತ್ಸಕರು ನೆನಪಿಗೆ ಬರುತ್ತಾರೆ. ನಮ್ಮ ಹಳ್ಳಿಗಳಲ್ಲಿ 'ಎಲುಕಟ್ಟು'ವವನು ಇದ್ದೇ ಇರುತ್ತಾನೆ. ಪುತ್ತೂರು, ಬದ್ರಾಪೂರ, ಕಾಳಗಿಯಂತಹ ಕೇಂದ್ರಗಳು ಬಹುಶಃ ಜಿಲ್ಲೆಗೊಂದರಂತೆ ಕಾಣಬಹುದು. ಇಲ್ಲಿ ಎಲುವು ಮುರಿತಕ್ಕೆ, ಕೀಲು ಸರಿತಕ್ಕೆ ಉಪಚಾರ ಸಿಗುತ್ತದೆ. ಉಪಚಾರ ಮಾಡುವುದಕ್ಕೆ ತಳಹದಿ ಮನೆತನದ ಕಸುಬು ಮತ್ತು ಅನುಭವವಾಗಿರುತ್ತದೆ. ಉಜ್ಜುವುದು, ಲೇಪಿಸುವುದು, ತಪ್ಪಲು ಸವರುವುದು, ಬಿದಿರು ಪಟ್ಟಿಗಳಿಂದ ಬಿಗಿದು ಕಟ್ಟುವುದು, ಬಟ್ಟೆ ಸುತ್ತುವುದು, ಕುಡಿಯಲು ಕಷಾಯ ಇಲ್ಲವೆ ಹಾಲಿನಲ್ಲಿ ಬೆರೆಸುವ ಮದ್ದು ಕೊಡುವುದು.... ಹೀಗೆ ನಾನಾ ವಿಧದ ಉಪಚಾರ ಇವರಲ್ಲಿ ಲಭ್ಯ. ಮೂಳೆ ಮುರಿದು ಅಂಗ ಡೊಂಕಾದಾಗ ಅಥವಾ ಕೀಲು ಸರಿದಿದೆಯೆಂಬ ಅನುಮಾನದಲ್ಲಿ ರೋಗಿಯನ್ನು ಬಲವಾಗಿ ಹಿಡಿದು ಅಂಗಭಾಗ ಜೊಗ್ಗಿ ಸರಿಪಡಿಸುವುದು; ಪೆಟ್ಟಾದ ಭಾಗದಲ್ಲಿ ಒತ್ತಿ ಒತ್ತಿ ಎಣ್ಣೆ ಸವರಿ ತಿಕ್ಕುವುದನ್ನೂ ಕಾಣುತ್ತೇವೆ. ಇವರಲ್ಲಿ ಮೂಳೆ ಮುರಿದಿದೆ, ಕೀಲು ಸರಿದಿದೆಯೆಂದು ಖಚಿತಪಡಿಸಿ ಕೊಳ್ಳುವ ಸಾಧನಗಳು ಇಲ್ಲ. ತಮ್ಮ ಚಿಕಿತ್ಸೆಯಿಂದ ಎಂತೆಂಥಹ ಅನಾಹುತಗಳು ಸಂಭವಿಸಬಹುದೆಂಬ ಕಲ್ಪನೆ ಇವರಿಗೆ ಇಲ್ಲ. ಅಹಿತಕರವಾದದ್ದು ಉದ್ಭವಿಸಿದಾಗ ಅದನ್ನು ಸರಿಪಡಿಸುವ ವಿಧಾನ ಗೊತ್ತಿಲ್ಲ. ತನ್ನಲ್ಲಿ ಅತಿಯಾದ ನಂಬಿಕೆ ಇಟ್ಟುಕೊಂಡು ಇಂತಹ ಚಿಕಿತ್ಸೆ ನೀಡುತ್ತಾನೆ. ಇಂತಹವರಲ್ಲಿ ನಂಬಿಕೆ ಇಟ್ಟು ಜನ ಚಿಕಿತ್ಸೆ ಪಡೆಯುತ್ತಾರೆ. ಕಾರ್ಯ ಕಾರಣ ಸಂಬಂಧ ವಿಚಾರಿಸದೆ, ಚಿಕಿತ್ಸೆ ನೀಡುವವನ ವಿದ್ಯಾರ್ಹತೆಯ ಬಗ್ಗೆ ತಿಳಿದುಕೊಳ್ಳದೆ ಬರೀ 'ಜನದಟ್ಟಣೆ'ಯ ಆಧಾರಿತ ನಂಬುಗೆಯ ಮೇಲೆ ಉಪಚಾರ ಪಡೆಯುವುದಕ್ಕೆ ಮೂಢನಂಬಿಕೆ ಎನ್ನಲೇಬೇಕಾಗುತ್ತದೆ. ಜನರ ಈ ಮುಗ್ಧ ನಂಬಿಕೆಯು ದುರ್ಬಳಕೆಯಾಗುವ ಸಾಧ್ಯತೆಗಳೇ ಹೆಚ್ಚು.

ಮುರಿದೆಲಬುಗಳು ಕೂಡಿಕೊಳ್ಳುವುದು ನಿಸರ್ಗ

ನಿಯಮ. ಮುರಿದ ತುಂಡುಗಳನ್ನು ಸಹಜಸ್ಥಿತಿಗೆ ಅಲುಗಾಡದಂತೆ ಹಿಡಿದಿಡುವುದು ವೈದ್ಯನ ಕರ್ತವ್ಯ. ಮುರಿದೆಲುವುಗಳು, ಬೇಗ ಕೂಡಿಕೊಳ್ಳುವಂತೆ ಮಾಡುವ ಔಷಧಗಳು ಇಲ್ಲವೇ ಇಲ್ಲ. ಕ್ಯಾಲ್ಸಿಯಂ, ವಿಟಾಮಿನ್ಸ್, ಪ್ರೋಟೀನ್‌ಗಳೆಲ್ಲ ವ್ಯಕ್ತಿಯ ಸಾಮಾನ್ಯ ಶಕ್ತಿ ಹೆಚ್ಚಿಸುವಲ್ಲಿ ಸಹಕಾರಿಗಳಾಗಬಹುದು.

ಉಜ್ಜುವುದು, ತಿಕ್ಕುವುದು, ಲೇಪಿಸುವುದು ಮುರಿತದ ಚಿಕಿತ್ಸೆಯಲ್ಲಿ ಅನಾವಶ್ಯಕವಷ್ಟೇ ಅಲ್ಲ, ಇವೆಲ್ಲ ಚಿಕಿತ್ಸೆಗಳು ಅಪಾಯಕಾರಿಯಾಗಬಹುದು. ಅಂಗಭಾಗ ಬಿಗಿಯಾಗಿ ಕಟ್ಟುವುದರಿಂದ ಕೆಳಭಾಗದ ಅಂಗಕ್ಕೆ ರಕ್ತಚಲನೆ ಇಲ್ಲವಾಗಿ ಅದು ಕೊಳೆಯಬಹುದು. ಕೊಳೆತ ಅಂಗಭಾಗ ಕತ್ತರಿಸಿ ತೆಗೆಯದಿದ್ದರೆ ಜೀವಕ್ಕೆ ಅಪಾಯವೊದಗಬಹುದು.

ಕತ್ತು (ಗೋಣು) ಮುರಿಯುವುದು, ಸೊಂಟ ಮುರಿಯುವುದು, ಕೈಕಾಲುಗಳನ್ನು ಜೋರಾಗಿ ತಿರುಗಿಸುತ್ತ ಸೆಟೆಸುವುದು (manipulation) ನೋವಿನ ಶಮನಕ್ಕಾಗಿ ಅನುಸರಿಸುವುದು ಅಪಾಯಕಾರಿ. ಅನುಭವ ಪಡೆದ ತಜ್ಞ ವೈದ್ಯರು ಅರಿವಳಿಕೆಯ ಸಹಾಯದಿಂದ ನಾಜೂಕಾಗಿ manipulation ಮಾಡಬಹುದು. ಗೋಣು ಮುರಿಯುವುದರಿಂದ ವ್ಯಕ್ತಿ ಪಾರ್ಶ್ವವಾಯುವಿಗೆ ತುತ್ತಾಗಬಹುದು, ಇಲ್ಲವೇ ಪ್ರಾಣಹರಣವಾಗಬಹುದು.

ಆಧುನಿಕ ವೈದ್ಯವಿಜ್ಞಾನ ಮೂಳೆಗಳ ಚಿಕಿತ್ಸೆಯಲ್ಲಿ ಕ್ರಾಂತಿಕಾರಕ ಬದಲಾವಣೆಗಳನ್ನು ತಂದಿದೆ. ಹಗ್ ಒವನ್ ಥೊಮಾಸ, ರಾಬರ್ಟ್ ಜೋನ್ಸ್, ಸರ್ ಚಾರ್ನ್ಲೆ, ವಾಟ್ಸನ್ ಜೋನ್ಸ್‌ರಂತಹ ತಜ್ಞ ವೈದ್ಯರು ಅಂತರ ರಾಷ್ಟ್ರೀಯ ಮಟ್ಟದಲ್ಲಿ; ಎಂ.ವಿ. ಸಂತ, ಎ. ಕೆ. ತಲವಾಲ್ಕರ್, ಢೋಲೊಕಿಯಾ, ಮುಖ್ಯೋಪಾಧ್ಯಾಯ ರಂಥ ತಜ್ಞರು ರಾಷ್ಟ್ರ ಮಟ್ಟದಲ್ಲಿ ಹಾಗೂ ಹೆಚ್. ಕೆ. ಶ್ರೀನಿವಾಸ ಮೂರ್ತಿ, ಎಂ. ವೈ. ರಾಯರಂತಹ ತಜ್ಞರು ರಾಜ್ಯಮಟ್ಟದಲ್ಲಿ ಅಸ್ಥಿಶಾಸ್ತ್ರವನ್ನು ವೈಜ್ಞಾನಿಕವಾಗಿ ಬೆಳಕಿಗೆ ತರುವಲ್ಲಿ ಅಪರಿಮಿತವಾಗಿ ಶ್ರಮಿಸಿದ್ದನ್ನು ನೆನಪಿಸಿಕೊಳ್ಳಬೇಕು.

ಅಸ್ಥಿಶಾಸ್ತ್ರವು ಮೂಳೆಗಳ ವಿಕಲತೆಗಳನ್ನು ತಡೆಗಟ್ಟಲು ಪ್ರಯತ್ನಿಸುತ್ತ ಸಂಬಂಧಿಸಿದ ವಿಕಲತೆಗಳನ್ನು ಚಿಗುರಾವಸ್ಥೆಯಲ್ಲೇ ಸರಿಪಡಿಸುವತ್ತ ದಾಪುಗಾಲು ಹಾಕಿದೆ. ಪೋಲಿಯೋ ರೋಗದಿಂದ ಉದ್ಭವಿಸುವ ವಿಕಲತೆಗಳನ್ನು, ರಸ್ತೆ ಅಥವಾ ಯಾಂತ್ರಿಕ ಅಪಘಾತಗಳಿಂದಾಗುವ ಘೋರ ವಿಕಲತೆಗಳನ್ನು ಸಮರ್ಥವಾಗಿ ಉಪಚರಿಸುವಲ್ಲಿ ದಿಟ್ಟ ಹೆಜ್ಜೆ ಇಟ್ಟಿದೆ. ಎಲುವುಗಳು ಮುರಿದಾಗ ಪಟ್ಟಿ ಕಟ್ಟಿಸಿಕೊಂಡು ಮನೆಯಲ್ಲಿ ಹಾಸಿಗೆ ಹಿಡಿಯುವ ದಿನಗಳು ಇನ್ನಿಲ್ಲ. ಶಸ್ತ್ರಕ್ರಿಯೆಯ ಮೂಲಕ ಮುರಿದೆಲುವುಗಳನ್ನು ಒಳಹಿಡಿತದಿಂದ ಗಟ್ಟಿಯಾಗಿ ಹಿಡಿದಿಟ್ಟು, ಕೆಲವೇ ದಿನಗಳಲ್ಲಿ ವ್ಯಕ್ತಿ ಅಲ್ಪ ಸ್ವಲ್ಪ ಸಹಾಯದಿಂದ ಓಡಾಡುತ್ತ ತನ್ನ ದೈನಂದಿನ ಕೆಲಸಗಳನ್ನು ತಾನೇ ಮಾಡಿಕೊಳ್ಳಲು ಸಾಧ್ಯವಾಗಿದೆ. ಅನಗತ್ಯವಾಗಿ ಆಸ್ಪತ್ರೆಯಲ್ಲಿ ದಿನಗಳನ್ನು ಕಳೆಯುತ್ತ ಕೊಳೆಯುವುದು ಕೊನೆಗೊಂಡು ತನ್ನ ಕೆಲಸಕ್ಕೆ ಬೇಗ ಮರಳುವುದರಿಂದ ಆರ್ಥಿಕ ಸೋರಿಕೆ ಕಡಿಮೆಯಾಗಿ, ಮಾನಸಿಕ ಹಿಂಸೆ ಇಲ್ಲವಾಗಿ ಸಮಾಜದ ಮೇಲೆ ಬೀಳುವ ಭಾರ ಕಡಿಮೆಗೊಳಿಸುವಂತಾಗಿದೆ.

ವೈದ್ಯವಿಜ್ಞಾನ ವೈಜ್ಞಾನಿಕವಾಗಿ ಬೆಳೆಯುತ್ತಿರುವುದು ನಿಜ. ಆದರೆ ಅದು ನಮ್ಮ ಬಡ ಜನರಿಗೆ ತಲುಪುತ್ತಿಲ್ಲ. ಹೊಸ ಹೊಸ ಸಂಶೋಧನೆಗೆ ಕೋಟಿಗಟ್ಟಲೆ ದುಡ್ಡು ಖರ್ಚಾಗುವುದರಿಂದ ಆ ಖರ್ಚನ್ನು ಜನರಿಂದ ಮರಳಿ ಪಡೆಯಲು ಪ್ರಯತ್ನಿಸುವುದರಿಂದ ಚಿಕಿತ್ಸೆಯ ಬೆಲೆ ಗಗನಕ್ಕೇರಿದೆ. ಕೈಗೆ ಎಟುಕದ 'ಹೈಟೆಕ್' ಚಿಕಿತ್ಸೆಯನ್ನು ಸರಕಾರ ಬಡವರಿಗೆ ಒದಗಿಸುವಲ್ಲಿ ವಿಫಲವಾಗಿದೆ. ಪಂಚತಾರಾ ಹೋಟೆಲಿನ ಅನುಕೂಲಗಳನ್ನು ನೀಡುವ ನೆಪದಲ್ಲಿ ಹಣ ದೋಚುವ ಸುವ್ಯವಸ್ಥಿತ ಕುತಂತ್ರವನ್ನು ಅಲ್ಲಗಳೆಯುವಂತಿಲ್ಲ. ಹೀಗಾಗಿ ಬಡವರು ಜಾತ್ರೆ ಉಪಾದಿಯಲ್ಲಿ ಪುತ್ತೂರಿನ/ಭದ್ರಾಪೂರದ/ಕಾಳಗಿಯ ಚಿಕಿತ್ಸೆಗೆ ಅನಿವಾರ್ಯವಾಗಿ ಮೊರೆ ಹೋಗಬೇಕಾಗುತ್ತದೆ. ಸಮರ್ಥ ಚಿಕಿತ್ಸೆ ಸಿಗದೆ, ಕೆಡುಕೂಡಿದ ಮುರಿದೆಲುವುಗಳಿಂದ ಉಂಟಾಗುವ ವಿಕಲತೆಗಳನ್ನು ಹೊತ್ತುಕೊಂಡು, ಆರ್ಥಿಕ ಮುಗ್ಗಟ್ಟಿನಿಂದ ಮನೆಯವರಿಗೆ ಭಾರವಾಗಿ, ಸಮಾಜಕ್ಕೆ ಬೇಡವಾಗಿ, ಅನುಕಂಪದ ಅಸಹಾಯ ಜೀವನ ಸಾಗಿಸುತ್ತಿರುವ ಅನೇಕರನ್ನು ಕಂಡು ಮರುಕಪಡುತ್ತೇವೆ. ಇಂತಹ ಸ್ಥಿತಿ ಸುಧಾರಿಸಬೇಕಾದರೆ ಪ್ರತಿಯೋರ್ವನು ಅಕ್ಷರಸ್ಥನಾಗಿ ತನ್ನ ಕರ್ತವ್ಯ ಅರಿತು ಜವಾಬ್ದಾರಿಯಿಂದ ಜೀವನ ಸಾಗಿಸುವಂತಾದರೆ ಮಾತ್ರ ಸಾಧ್ಯ.


ಡಾ॥ ಎಸ್. ಎಸ್. ಪಾಟೀಲ

ಅಸ್ಥಿತಜ್ಞರು, ಸಿದ್ಧ-ರತ್ನ, ಧನ್ವಂತರಿ ಬಡಾವಣೆ

ಗುಲಬರ್ಗಾ-೫೮೫ ೧೦೫


(೩೫ನೇ ಪುಟದಿಂದ)

ಅಂಕುರ ಬೀಜಗಳಿಗೆ ದೇಹದಲ್ಲಿ ವೃದ್ಧಿಹೊಂದಲು ಸರಿಯಾದ ವಾತಾವರಣವಿರುವುದರಿಂದ, ಅಂಕುರ ಬೀಜಗಳು ಬೆಕ್ಟೀರಿಯಂಗಳಾಗಿ ಮಾರ್ಪಟ್ಟು ಕೂಡಲೆ ರೋಗ ಉಂಟುಮಾಡುತ್ತವೆ. ಈ ರೋಗಾಣು ಸಂಪರ್ಕ ಬಂದ ಶೇ. ೫೦ರಷ್ಟು ಜನರು ಸಾವನ್ನಪ್ಪುತ್ತಾರೆ. ಈ ರೋಗ ಕಂಡುಹಿಡಿಯುವುದನ್ನು ತಡಮಾಡಿದಲ್ಲಿ ನಿಶ್ಚಿತವಾಗಿ ಸಾವು ಉಂಟಾಗಬಹುದು. ಚಿಕಿತ್ಸೆಗೆ ಆಂಟಿಬಯಾಟಿಕ್‌ಗಳನ್ನು ಬಳಸಬಹುದಾಗಿದೆ.

೫೦ ಕೆ. ಜಿ. ಅಂಕುರ ಬೀಜವನ್ನು ೫ಲಕ್ಷ ಜನಸಂಖ್ಯೆ ಇರುವ ಸ್ಥಳದ ಮೇಲೆ ಸಿಂಪಡಿಸಲಾಗಿ, ಒಂದು ಲಕ್ಷ ಜನರು ಮರಣ ಹೊಂದಬಹುದೆಂದು ವಿಶ್ವ ಆರೋಗ್ಯ ಸಂಸ್ಥೆ ಅಂದಾಜುಮಾಡಿದೆ. ಅಂದರೆ ಇದು ಹೈಡ್ರೋಜನ್ ಬಾಂಬಿಗಿಂತ ಹೆಚ್ಚು ಘೋರವಾಗಿ ಪರಿಣಾಮಕಾರಿಯೆಂದು ಹೇಳಬಹುದು !

ಈ ರೋಗ ತಡೆಗಟ್ಟಲು ಲಸಿಕೆಯನ್ನು ಬಳಸಬಹುದಾಗಿದೆ. ಈಗ ಅಮೆರಿಕದ ಒಂದೇ ಕಂಪನಿ ಅಮೆರಿಕದ ಶಸ್ತ್ರಾಸ್ತ್ರಪಡೆಗೆ ಲಸಿಕೆಯನ್ನು ತಯಾರಿಸುತ್ತಿದೆ. ಲಸಿಕೆ ತಯಾರಿಸುವ ತಂತ್ರಜ್ಞಾನ ಭಾರತದಲ್ಲಿಲ್ಲ. ಆದರೂ ಸರಕಾರದ ಪ್ರಕಾರ ಮುಂದಿನ ವರ್ಷದ ಕೊನೆಯ ಹೊತ್ತಿಗೆ ಭಾರತದಲ್ಲಿ ಲಸಿಕೆ ತಯಾರಾಗುವ ಸಂಭವವಿದೆ. ಆದ್ದರಿಂದ ಈಗ ನಮಗಿರುವ ಒಂದೇ ಸಾಧ್ಯತೆಯೆಂದರೆ ರೋಗವನ್ನು ಪತ್ತೆ ಹಚ್ಚಿ ಚಿಕಿತ್ಸೆಮಾಡುವುದು. ಭಾರತದಲ್ಲಿ ವೈದ್ಯಕೀಯ ವ್ಯವಸ್ಥೆಯ ಲಭ್ಯತೆ ಪ್ರಶ್ನಾತೀತವಾಗಿರುವುದರಿಂದ ಆಂಥ್ರ್ಯಾಕ್ಸ್‌ನಿಂದ ನಾವು ಹೇಗೆ ಸಾವುಗಳನ್ನು ತಡೆಗಟ್ಟಬಹುದೆಂಬುದನ್ನು ಊಹಿಸಬಹುದಾಗಿದೆ.

ಇತ್ತೀಚೆಗೆ ಅಮೆರಿಕಾದಲ್ಲಿ ಆಂಥ್ರ್ಯಾಕ್ಸ್‌ಗೆ ಚಿಕಿತ್ಸೆ ಮಾಡುವ ಔಷಧಿಯ ಕೊರತೆ ಕಂಡುಬಂದಾಗ, ಕೆನಡಾ ದೇಶದ ಕಂಪನಿಯನ್ನು ಔಷಧಿ ಪೂರೈಸಲು ಕೇಳಿಕೊಳ್ಳಲಾಯಿತು. ಆದರೆ ಔಷಧಿಯ ಪೇಟೆಂಟ್ ಅಮೆರಿಕದ ಬಾಯರ್ ಕಂಪನಿಯ ಹತ್ತಿರವಿದ್ದುದರಿಂದ,




ಕೆನಡಾ ದೇಶದ ಕಂಪನಿ ಔಷಧಿಯನ್ನು ತಯಾರು ಮಾಡುವಂತಿರಲಿಲ್ಲ. ಆದರೂ ಈ ಪೇಟೆಂಟ್ ಕಾನೂನನ್ನು ಉಲ್ಲಂಘಿಸಿ ಔಷಧಿ ತಯಾರಿಸಲು ಕೆನಡಾದ ಕಂಪನಿ ಮುಂದೆಬಂದಿತು. ಇಂದು ಈ ಪೇಟೆಂಟ್ ವ್ಯವಸ್ಥೆ ಸಾವು ತಪ್ಪಿಸಲು ಎಂತಹ ಆತಂಕ ತಂದೊಡ್ಡಿದೆ ಎಂದು ಇದರಿಂದ ತಿಳಿಯಬಹುದಾಗಿದೆ. ಹಾಗೂ, ಮುಂದುವರಿದ ರಾಷ್ಟ್ರಗಳೇ ಇಂತಹ ಪರಿಸ್ಥಿತಿ ಎದುರುಸುತ್ತಿರುವಾಗ, ಭಾರತದಂತಹ ದೇಶಗಳು ಎಂತಹ ಪರಿಸ್ಥಿತಿಯನ್ನು ಎದುರಿಸಬೇಕಾಗುತ್ತದೆ ಎಂಬುದನ್ನು ಊಹಿಸಬಹುದು. ಆಂಥ್ರ್ಯಾಕ್ಸ್ ರೋಗ ಭೀತಿ ಇಂದು ಭ್ರಮೆಯಲ್ಲ, ಆಂಥ್ರ್ಯಾಕ್ಸ್ ರೋಗ ಹತೋಟಿಗೆ ವೈದ್ಯರಿಗೆ ತರಬೇತಿ, ಔಷಧಿಗಳು, ಲಸಿಕೆ, ಚಿಕಿತ್ಸಾ ವ್ಯವಸ್ಥೆ ಮುಂತಾದವುಗಳ ಅವಶ್ಯಕತೆ ಇದೆ. ಆದರೆ ಹೀಗೆ ಹಬ್ಬುತ್ತಿರುವ ಭಯೋತ್ಪಾದನೆಗೆ ಕಾರಣವೇನು ಎಂಬುದನ್ನು ಗುರುತಿಸಿ ಸರಿಪಡಿಸುವುದು ಇನ್ನೂ ಹೆಚ್ಚು ಅಗತ್ಯವಾಗುತ್ತದೆ. ಅಮೆರಿಕಾದ ಸಾಮ್ರಾಜ್ಯಶಾಹಿ ನೀತಿಯನ್ನು ಮಾಧ್ಯಮಗಳು ತಪ್ಪು ರೀತಿಯಲ್ಲಿ ಪ್ರಚಾರಮಾಡುತ್ತಾ ಬಂದು, ಜನರ ಮನಸ್ಸಿನಲ್ಲಿ ಭಯೋತ್ಪಾದಕರೇ ನಿಜವಾದ ವೈರಿಗಳೆಂಬ ಭ್ರಮೆ ಹುಟ್ಟಿಸಿವೆ, ಜನರನ್ನು ತಪ್ಪು ದಾರಿಗೆ ಎಳೆಯುತ್ತಿವೆ. ಆಂಥ್ರ್ಯಾಕ್ಸ್ ಭೀತಿ ತಡೆಗಟ್ಟಲು, ನಿಜವಾದ ವೈರಿ ಯಾರೆಂದು ಕಂಡುಹಿಡಿಯಬೇಕಾಗಿದೆ.


ಡಾ॥ ಪ್ರಕಾಶ್ ಸಿ. ರಾವ್

ಕ್ಲಿನಿಕ್ ಅಪರ್ಣ, ೧ನೇ ಮುಖ್ಯರಸ್ತೆ, ೪ನೇ ಅಡ್ಡರಸ್ತೆ

ಯಶವಂತಪುರ, ಬೆಂಗಳೂರು - ೫೬೦ ೦೨೨




ರಘುನಾಥ ಚ. ಹ.

> ಯಾರಾದರೂ ತಪಸ್ಸಿಗೆ ಕೂತರೆಂದರೆ ದೇವೇಂದ್ರ ಅದುರಿ ಬೀಳುತ್ತಿದ್ದನಂತೆ. ದೇವೇಂದ್ರನ ಸಂತಾನಗಳೇ ಆದ ನಮ್ಮ ಸರ್ಕಾರಗಳು ಚಳವಳಿ ಎಂದರೆ ಹತ್ತಿಕ್ಕು ಅನ್ನುತ್ತವೆ. ಚಳವಳಿಯೊಂದನ್ನು ಜನಪರವಾಗಿ ದುಡಿಸಿಕೊಳ್ಳುವ ಸಾಧ್ಯತೆಗಳ ಬಗ್ಗೆ ಸರ್ಕಾರ ಯಾಕೆ ಚಿಂತಿಸುವುದಿಲ್ಲ ?

'ನಿಮ್ಮ ಕೆಲಸವನ್ನು ನೀವೇ ಮಾಡಿಕೊಳ್ಳಿ. ನಿಮಗೆ ಬೇಕಾದುದನ್ನು ನೀವೇ ಉತ್ಪಾದಿಸಿಕೊಳ್ಳಿ. ಇದಕ್ಕೂ ಮುನ್ನ ಸರಳವಾಗಿರುವುದನ್ನು ಕಲಿತುಕೊಳ್ಳಿ. ಇದರಿಂದಾಗಿ ಸುಮ್ಮಸುಮ್ಮನೆ ಇತರರನ್ನು ಅವಲಂಬಿಸುವುದು ತಪ್ಪುತ್ತದೆ'. ಫಕೀರನಂತೆ ಕಾಣುತ್ತಿದ್ದ ಗಾಂಧಿ ಎನ್ನುವ ಅರೆಬೆತ್ತಲೆ ಮನುಷ್ಯ ಈ ಮಾತುಗಳನ್ನು ಹೇಳಿದಾಗ ದೇಶ ಅದನ್ನು ಗಂಭೀರವಾಗಿ ಪರಿಗಣಿಸಲಿಲ್ಲ. ಈ ದೇಶ - ಜನತೆಯ ಉದ್ಧಾರಕ್ಕೆ ಈ ಫಕೀರ ಹೇಳುವುದು ಸರಿಹೊಂದುವುದಿಲ್ಲ, ಕೈಗಾರಿಕೆಗಳೇ ದೇಶದ ಪ್ರಗತಿಯ ಜೀವನಾಡಿಗಳು ಎನ್ನುವ ಸಿದ್ಧಾಂತವನ್ನು ಅಧಿಕಾರದ ಸೂತ್ರಗಳನ್ನು ಹಿಡಿದಿದ್ದವರು ಪ್ರತಿಪಾದಿಸಿದರು. ಈ ಆಕರ್ಷಕ ಮಾತುಗಳನ್ನು ಜನ ನಂಬಿದರು. ದೇಶದಲ್ಲಿ ಬೃಹತ್ ಉದ್ದಿಮೆ – ಕೈಗಾರಿಕೆಗಳು ಶುರುವಾದವು. ಪರಿಣಾಮವಾಗಿ ಗುಡಿ ಕೈಗಾರಿಕೆಗಳು ನೆಲ ಕಚ್ಚಿದವು ಅಥವಾ ನಗಣ್ಯವಾದವು. ಕೈಗಾರಿಕೀಕರಣದ ಭ್ರಮೆಗಳನ್ನು ಬಿತ್ತಿ ಅರ್ಧ ಶತಮಾನವಾಯಿತು. ದೇಶ ಮಾತ್ರ ಇದ್ದ ಸ್ಥಿತಿಯಿಂದ ಎದ್ದುನಿಂತಿಲ್ಲ. ಅಂದರೆ, ಅರ್ಧ ಶತಮಾನದಲ್ಲಿ ಯಾವುದೇ ಸಾಧನೆಗಳಾಗಿಲ್ಲ ಎಂದರ್ಥವಲ್ಲ.

ತಮಾಷೆಯ ಸಂಗತಿಯೆಂದರೆ – ಈಗಲೂ ಕೂಡ ದೇಶದ ಚುಕ್ಕಾಣಿ ಹಿಡಿದಿರುವ ಪ್ರಮುಖರು ಅವೇ ಕನಸುಗಳನ್ನೇ ಈಗಲೂ ಬಂಡವಾಳವಾಗಿಸಿಕೊಂಡಿದ್ದಾರೆ, ಅವುಗಳನ್ನೇ ಬಿತ್ತುತ್ತಿದ್ದಾರೆ. ದೇಶದಲ್ಲಿ ಹೊಸ ಉದ್ದಿಮೆಗಳು ತಲೆ ಎತ್ತುತ್ತಲೇ ಇವೆ. ಅದೇ ಅವಧಿಯಲ್ಲಿ ಭಾರೀ ಉದ್ಯಮಗಳು ನೆಲ ಕಚ್ಚುತ್ತಿವೆ. ಪ್ರತಿಯೊಂದು ಕಾಮಗಾರಿಗೂ ವಿದೇಶದತ್ತಲೇ ಮುಖ ಮಾಡುವ ಅಭ್ಯಾಸದಲ್ಲೂ ಬದಲಾವಣೆಯಾಗಿಲ್ಲ. 'ಗಾಂಧಿ ಹೇಳಿದ್ದು ಈಗಲೂ ಪ್ರಸ್ತುತ, ಗಾಂಧಿಯೇ ನಮಗೆ ಬೆಳಕು' ಎನ್ನುವ ಸಣ್ಣ ದನಿಗಳಿಗೆ ಯಾವ ಬೆಂಬಲವೂ ಇಲ್ಲ.

ಕಪ್ಪೆಗಳನ್ನು ತಕ್ಕಡಿಯಲ್ಲಿ ಹಿಡಿದಿಟ್ಟಂತೆ ಹದಿನಾಲ್ಕು ಪಕ್ಷಗಳನ್ನು ಒಟ್ಟುಮಾಡಿ ದೇಶದ ಚುಕ್ಕಾಣಿ ಹಿಡಿದಿರುವ ಭಾರತೀಯ ಜನತಾ ಪಕ್ಷದ ನೀತಿಗಳ ರೂಪಾಂತರ ಅತ್ಯಂತ ಕುತೂಹಲಕರ. ಗದ್ದುಗೆ ಏರುವ ಮುನ್ನ 'ಸ್ವದೇಶಿ' ಜಪ ಪಾರಾಯಣ ಮಾಡುತ್ತಿದ್ದ ಭಾಜಪ, ಆನಂತರದ ದಿನಗಳಲ್ಲಿ ಜಾಗತೀಕರಣಕ್ಕೆ ಜೋತುಬಿದ್ದದ್ದು ಸಿದ್ಧಾಂತ ರಹಿತ ಪ್ರಚಲಿತ ರಾಜಕಾರಣಕ್ಕೊಂದು ಉತ್ತಮ ಉದಾಹರಣೆ.

ನಮ್ಮ ರಾಜಕಾರಣಿಗಳ ಭೋಳೇತನ ಯಾವ ಮಟ್ಟಕ್ಕೆ ಮುಟ್ಟಿದೆಯೆಂದರೆ – ವಿದೇಶಿ ಬಂಡವಾಳ ಹಾಗೂ ತಂತ್ರಜ್ಞಾನದ ಹೊರತು ಅವರ ಪಾಲಿಗೆ ಹಿತ್ತಲಿನ ಹುಲ್ಲು ಅಲ್ಲಾಡುವುದೂ ಸಾಧ್ಯವಿಲ್ಲ. ಪರಸ್ಪರ ಅವಲಂಬನೆಯೇ ಈ ಶತಮಾನದ ನೀತಿ ಅನ್ನುವುದನ್ನು ಒಪ್ಪೋಣ. ಆದರೆ, ನಮ್ಮಿಂದಲೇ ಏನಾದರೂ ಸಾಧ್ಯವಾಗಬಹುದಾದ ಪರಿಸ್ಥಿತಿಗಳಲ್ಲಿ ನಾವು ಯಾಕೆ ಹಿಂಜರಿಯಬೇಕು ? ಯಶಸ್ಸು ಗಳಿಸುತ್ತೇವೋ ಇಲ್ಲವೋ, ಯಾಕೆ ಪ್ರಯತ್ನ ಮಾಡಬಾರದು ? ಒಂದು ಉದಾಹರಣೆ ಗಮನಿಸಿ – ವೀರಪ್ಪನ್ ಸಿಕ್ಕುವುದಿಲ್ಲ ಎನ್ನುವುದು ಗೊತ್ತಿದ್ದರೂ, ಕಾರ್ಯಾಚರಣೆಗೆ ಕೋಟಿಗಟ್ಟಲೆ ರೂಪಾಯಿ ಖರ್ಚು ಮಾಡುವ ಸರ್ಕಾರ ಗುಡಿ ಕೈಗಾರಿಕೆಯೊಂದರ ಅಭ್ಯುದಯಕ್ಕೆ ಸಂಪನ್ಮೂಲಗಳ ಕೊರತೆ ಎನ್ನುವ ನೆಪ ತೆಗೆಯುತ್ತದೆ. ಸದ್ಯ, ವೀರಪ್ಪನ್‌ನನ್ನು ಹಿಡಿಯಲು ಎಫ್. ಬಿ. ಐ.ಗೆ ಕೋರಿಕೆ ಕಳಿಸಿಲ್ಲ !

ಚನ್ನಪಟ್ಟಣದಲ್ಲಿ ನಡೆದ ರೈತರು ಹಾಗೂ ಪೊಲೀಸರ ನಡುವಿನ ಘರ್ಷಣೆ ನಮ್ಮ ರಾಜಕಾರಣಿಗಳ ಭೋಳೇತನಕ್ಕೆ ತಾಜಾ ನಿದರ್ಶನ. ತೆಂಗಿನ ಮರಗಳಿಂದ ನೀರಾ ಇಳಿಸದಿದ್ದರೆ ಬೀದಿ ಪಾಲಾಗುತ್ತೇವೆ ಎನ್ನುತ್ತಿದ್ದರು ರೈತರು. ಏನೇ ಆಗಲಿ, ನೀರಾ ಇಳಿಸುವುದಕ್ಕೆ ಅನುಮತಿ ನೀಡುವುದಿಲ್ಲ ಎನ್ನುತ್ತಿತ್ತು ಸರ್ಕಾರ.

ನೀರಾ ವಿದ್ಯಮಾನಗಳನ್ನು ರೈತರ ಸಮಯಸಾಧಕತನ ಹಾಗೂ ಸರ್ಕಾರದ ಹಟಮಾರಿತನ ಎಂದು ಸುಲಭವಾಗಿ ತಳ್ಳಿಹಾಕುವಂತಿಲ್ಲ. ನೀರಾ ವಿದ್ಯಮಾನಗಳಿಗೆ ಬೇರೆ ರೀತಿಯ ಆಯಾಮಗಳೂ ಇವೆ. ಅವುಗಳನ್ನು ಪರಿಶೀಲಿಸೋಣ: ರಾಜ್ಯದಲ್ಲಿ ಸುಮಾರು ೫ ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ ತೆಂಗು ಕೃಷಿ ನಡೆಯುತ್ತಿದ್ದು, ೭ ಕೋಟಿಗೂ ಹೆಚ್ಚಿನ ತೆಂಗಿನ ಮರಗಳಿವೆ. ತೆಂಗಿನ ಮರಗಳನ್ನು ನಂಬಿಕೊಂಡೇ ಬದುಕು ಸಾಗಿಸುವ ರೈತರ ಸಂಖ್ಯೆಯೂ ದೊಡ್ಡದು. ಕಳೆದ ನಾಲ್ಕೈದು ವರ್ಷಗಳಿಂದ ಕಾಡುತ್ತಿರುವ ನುಸಿ ರೋಗ ತೆಂಗು ಮರಗಳಿಗೆ ಬಂಜೆತನ ತಂದಿದೆ. ನುಸಿ ಹೋಗದ ಹೊರತು ತೆಂಗು ರೈತನಿಗೆ ದಕ್ಕುವಂತಿಲ್ಲ. ನುಸಿ ಹೋಗುವುದು ಹೇಗೆ ? ಯಾವಾಗ ? ಎನ್ನುವುದು ಯಾರಿಗೂ ಗೊತ್ತಿಲ್ಲ.

ನುಸಿ ನಾಶಗೊಳ್ಳಲು ಈವರೆಗೆ ಪ್ರಯೋಗಿಸಿದ ಎಲ್ಲ ಔಷಧಿಗಳೂ ವಿಫಲವಾಗಿವೆ. ರಾಸಾಯನಿಕಗಳಿಗೆ ನುಸಿ ಬಗ್ಗುವುದಿಲ್ಲ, ಬದಲಾಗಿ ರಾಸಾಯನಿಕಗಳ ಪ್ರಯೋಗಗಳಿಂದ ಜೈವಿಕ ಸಮತೋಲನ ಏರುಪೇರಾಗುತ್ತದೆ ಎನ್ನುವ ಅಭಿಪ್ರಾಯ – ಎಚ್ಚರಿಕೆಯನ್ನು ಕೆಲವು ವಿಜ್ಞಾನಿಗಳು ವ್ಯಕ್ತಪಡಿಸಿದ್ದಾರೆ. ಈವರೆಗಿನ ಅನುಭವ ವಿಜ್ಞಾನಿಗಳ ಅನಿಸಿಕೆಗೆ ಪೂರಕವಾಗಿಯೇ ಇದೆ. ಇಂಥ ಸಂದರ್ಭದಲ್ಲಿ ರೈತ ಏನು ಮಾಡಬೇಕು ?

ಸದ್ಯಕ್ಕೆ ನುಸಿ ನಿಯಂತ್ರಣಕ್ಕೆ ರೈತನಿಗೆ ಕಾಣುತ್ತಿರುವ ಏಕೈಕ ಪರಿಹಾರವೆಂದರೆ ಹೊಂಬಾಳೆ ಕತ್ತರಿಸುವುದು. ಹೊಂಬಾಳೆಯಿಂದಲೇ ಜೀವಂತವಾಗಿರುವ ನುಸಿ, ಹೊಂಬಾಳೆಯೇ ಇಲ್ಲದಿದ್ದರೆ ನಾಶವಾಗುತ್ತದೆ. ಆದರೆ, ಹೊಂಬಾಳೆ ಕತ್ತರಿಸಿದರೆ ಕಾಯಿ ಬಿಡುವುದಿಲ್ಲ. ಆ ಕಾರಣದಿಂದಲೇ ನೀರಾ ಇಳಿಸುವುದು ಅನಿವಾರ್ಯ ಎನ್ನುತ್ತಾರೆ ನೀರಾ ಚಳವಳಿ ರೂಪಿಸಿದ ರಾಜ್ಯ ರೈತಸಂಘದ ಮುಖಂಡರು.

ನೀರಾ ಇಳಿಸಿದರೆ ಸರ್ಕಾರಕ್ಕೇನು ಬಾಧೆ ಎನ್ನುವ ಪ್ರಶ್ನೆ ಕುತೂಹಲಕರ. ಸರ್ಕಾರ ವಾದ ಮಂಡಿಸುತ್ತದೆ, ಕೇಳಿ –

೧. ನೀರಾ ಇಳಿಸುವುದು ಅಬಕಾರಿ ಕಾನೂನಿಗೆ ವಿರುದ್ಧ.

೨. ಸೂರ್ಯೋದಯದ ನಂತರ ನೀರಾ ಹೆಂಡವಾಗುತ್ತದೆ. ಕ್ಲೋರೈಡ್ ಇತ್ಯಾದಿಗಳನ್ನು ಬೆರೆಸಿ ಮಾರಾಟ ಮಾಡುವ ವಿಷಯದಲ್ಲಿ ಸರ್ಕಾರ ಮೂಕ ಪ್ರೇಕ್ಷಕನಾಗಿರಲು ಸಾಧ್ಯವಿಲ್ಲ.

೩. ಸಮಾಜದ ಕೆಳಸ್ತರದಲ್ಲಿರುವವರು ನೀರಾ ಚಟಕ್ಕೆ

ಬಲಿಯಾಗುತ್ತಾರೆ. ದುರ್ಬಲ ವರ್ಗದವರ ಹಿತಾಸಕ್ತಿ ರಕ್ಷಣೆಗೆ ಸರ್ಕಾರ ಬದ್ಧ. ಆದ್ದರಿಂದಲೇ ಸರ್ಕಾರ ನೀರಾ ಇಳಿಸುವುದರ ವಿರುದ್ಧ.

೪. ನೀರಾ ಇಳಿಕೆ ಹಾಗೂ ಮಾರಾಟ ಅಂಥ ಲಾಭಕರ ಉದ್ಯಮವೂ ಅಲ್ಲ.

ಸರ್ಕಾರದ ವಾದಗಳನ್ನು ಗಮನಿಸಿದರೆ, ಅಲ್ಲಿ ಸಾರ್ವಜನಿಕ ಕಾಳಜಿಗಿಂತ ಹೆಚ್ಚಾಗಿ ಕದನ ಕಾತುರವೇ ಎದ್ದುಕಾಣುತ್ತದೆ. ರೈತರಿಗೂ ನೀರಾ ಇಳಿಸುವುದು ಕಾನೂನುಬದ್ಧ ಅಲ್ಲವೆನ್ನುವುದು ಗೊತ್ತಿದೆ. ಆ ಕಾರಣದಿಂದಲೇ ಅವರು ಅನುಮತಿ ಕೋರಿದ್ದು. ಅಂತೆಯೇ ನೀರಾ ಲಾಭಕರ ಹೌದೋ ಅಲ್ಲವೋ ಎನ್ನುವುದನ್ನು ನಿರ್ಧರಿಸಬೇಕಾದುದು ರೈತರೇ ಹೊರತು, ಸರ್ಕಾರವಲ್ಲ.

ಎರಡನೆಯದಾಗಿ, ದುರ್ಬಲ ವರ್ಗದವರ ಹಿತಾಸಕ್ತಿ ರಕ್ಷಣೆ ಎನ್ನುವ ಮಾತೇ ಹಾಸ್ಯಾಸ್ಪದ. ಬೀದಿ ಬೀದಿಗಳಲ್ಲಿ ಶರಾಬು ಅಂಗಡಿಗಳಿಗೆ ಅನುಮತಿ ನೀಡಿರುವ ಸರ್ಕಾರಕ್ಕೆ ಇಂಥ ಮಾತುಗಳು ಆಡಲು ನೈತಿಕತೆ ಎಲ್ಲಿದೆ ? ತಜ್ಞರು ಹೇಳುವ ಪ್ರಕಾರ ನೀರಾ ಹಾನಿಕರವೂ ಅಲ್ಲ. ಸಾರಾಯಿಯಲ್ಲಿ ಪ್ರತಿಶತ ೩೦ರಷ್ಟು ಆಲ್ಕೋಹಾಲ್ ಇದ್ದರೆ, ನೀರಾದಲ್ಲಿ ಆಲ್ಕೋಹಾಲ್ ಪಾಲು ಶೇ. ೩ ಮಾತ್ರ. ಪ್ರೊಟೀನ್, ವಿಟಮಿನ್ ಸಿ ಹಾಗೂ ಶರ್ಕರ ಪಿಷ್ಟಗಳೂ ನೀರಾದಲ್ಲುಂಟು ಎನ್ನುತ್ತದೆ ತಜ್ಞರ ವರದಿ. ನೀರಾದಿಂದ ಬೆಲ್ಲ, ಸಕ್ಕರೆ, ಕಲ್ಲುಸಕ್ಕರೆ ಇತ್ಯಾದಿಗಳ ತಯಾರಿಕೆಯೂ ಸಾಧ್ಯ. ಇದೆಲ್ಲ ಕೃಷ್ಣ ಬಳಗಕ್ಕೆ ಗೊತ್ತಿಲ್ಲದ್ದೇನೂ ಅಲ್ಲ.

ನೀರಾ ಸೂರ್ಯೋದಯದ ನಂತರ ಹೆಂಡ ವಾಗುತ್ತದೆ ಎನ್ನುವುದು ನಿಜ. ಆದರೆ ಕನಿಷ್ಠ ೬ ತಿಂಗಳ ಕಾಲ ನೀರಾವನ್ನು ಕೆಡದಂತೆ ರಕ್ಷಿಸುವ ತಂತ್ರಜ್ಞಾನ ಶ್ರೀಲಂಕಾದಲ್ಲಿದೆ. ಇಂಡೋನೇಷಿಯಾದಲ್ಲಿ ಕೂಡ ನೀರಾ ತಂತ್ರಜ್ಞಾನ ಸಾಕಷ್ಟು ಮುಂದುವರಿದಿದೆ. ಈ ತಂತ್ರ ಜ್ಞಾನವನ್ನು ಸರ್ಕಾರ ಯಾಕೆ ಆಮದು ಮಾಡಿಕೊಳ್ಳ ಬಾರದು ಎನ್ನುತ್ತದೆ ರೈತಸಂಘ. ಐ.ಟಿ.ವಿಷಯದಲ್ಲಿ ಉದಾರ ಮನೋಭಾವ ತೋರಿ ದಿಡ್ಡಿ ಬಾಗಿಲುಗಳನ್ನು ತೆರೆದಿರಿಸುವ ಸರ್ಕಾರ ನೀರಾ ವಿಷಯದಲ್ಲಿ ಹಟಕ್ಕೆ ಬೀಳುವುದೇಕೆ ?

ಮತ್ತೊಂದು ವ್ಯಾಪಕ ಅಭಿಪ್ರಾಯದ ಪ್ರಕಾರ ಅಬಕಾರಿ ಆದಾಯಕ್ಕೆ ಖೋತಾ ಉಂಟಾಗಬಹುದೆನ್ನುವ ಭಯದಿಂದ ನೀರಾಗೆ ಅನುಮತಿಸಲು ಸರ್ಕಾರ ಹಿಂದುಮುಂದು ನೋಡುತ್ತಿತ್ತು. ೧೭೫ ತಾಲ್ಲೂಕುಗಳಲ್ಲಿ ನಡೆಯುವ ಸಾರಾಯಿ ಟೆಂಡರ್ ಮೂಲಕ ಸರ್ಕಾರಕ್ಕೆ ೧೧೦೦ ಕೋಟಿ ರೂಪಾಯಿ ವಾರ್ಷಿಕ ವರಮಾನವಿದೆ. ಇದನ್ನು ಕಳೆದುಕೊಳ್ಳಲು ಸರ್ಕಾರಕ್ಕೆ ಮನಸ್ಸಿಲ್ಲ. ಆದರೆ, ವಾಸ್ತವ ಸಂಗತಿ ಇದಲ್ಲ. ಸರ್ಕಾರ ಅಬಕಾರಿ ದೊರೆಗಳ ಹಂಗಿಗೆ ಬಿದ್ದಿದೆ. ಮದ್ಯೋದ್ಯಮಿಗಳ ಹಿತಾಸಕ್ತಿ ರಕ್ಷಿಸುವುದಕ್ಕೋಸ್ಕರ ರೈತರ ಹಿತಾಸಕ್ತಿ ಬಲಿಕೊಡಲು ಮುಂದಾಗಿದೆ ಎಂದಿದ್ದಾರೆ ರೈತಸಂಘದ ಪ್ರಧಾನ ಕಾರ್ಯದರ್ಶಿ ಕೋಡಿಹಳ್ಳಿ ಚಂದ್ರಶೇಖರ್. ಅವರು ಹೇಳುವ ಲೆಕ್ಕಚಾರ ಇದು: ರಾಜ್ಯದಲ್ಲಿ ೭ ಕೋಟಿ ತೆಂಗಿನ ಮರಗಳಿವೆ ಎಂದುಕೊಳ್ಳುವ. ಪ್ರತಿ ಮರಕ್ಕೆ ಸರ್ಕಾರ ೨೦೦ ರೂಪಾಯಿ ಸುಂಕ ವಿಧಿಸಿದರೂ ೧೪೦೦ ಕೋಟಿ ರೂಪಾಯಿ ವಾರ್ಷಿಕ ತೆರಿಗೆ ಸರ್ಕಾರದ ಬೊಕ್ಕಸಕ್ಕೆ ಸೇರುತ್ತದೆ.

ನೀರಾ ಇಳಿಸಿ ಮಾರಾಟ ಮಾಡಲು ಹೊರಟ ಸರ್ಕಾರದ ಧೋರಣೆಯಲ್ಲಿ ಅದರ ಚಿಂತನೆ ದೋಷ ಎದ್ದುಕಾಣುತ್ತದೆ. ನೀರಾ ಚಳವಳಿ ಯಾವುದೋ ಉತ್ಸಾಹದ ಭರದಲ್ಲಿ ಅಥವಾ ಲಾಭಬಡುಕರ ಸ್ವಾರ್ಥದ ಮೂಸೆಯಲ್ಲಿ ಮೊಳೆತದ್ದಲ್ಲ ಎನ್ನುವುದನ್ನು ಗಮನಿಸಬೇಕು. ನೀರಾ ಚಳವಳಿಯ ಹಿಂದೆ ರೈತರ ಹಿತಾಸಕ್ತಿಯನ್ನು ಕಾಯುವ ಉದ್ದೇಶವಿದೆ. ಜನಪರವಾದ ಸರ್ಕಾರದ ಪ್ರಯತ್ನಗಳು ಇಂಥ ಚಳವಳಿಗಳ ಲಾಭ ಪಡೆಯುವತ್ತ ಇರಬೇಕೇ ಹೊರತು, ಹತ್ತಿಕ್ಕುವ ಕುರಿತಾಗಿಯಲ್ಲ.

೨

ಗಾಂಧೀಜಿ ಕೂಡಾ ನೀರಾವನ್ನು ಮೆಚ್ಚಿದ್ದರು. ನೀರಾ ಆರೋಗ್ಯಕರ ಪೇಯ ಎನ್ನುವುದು ಗಾಂಧಿ ನಿಲುವು. ಗೃಹ ಕೈಗಾರಿಕೆಗೆ ನೀರಾ ಅವಕಾಶ ಕಲ್ಪಿಸುತ್ತದೆ. ಕಬ್ಬಿನಿಂದ ತಯಾರಿಸಿದ ಬೆಲ್ಲಕ್ಕಿಂತ ನೀರಾ ಬೆಲ್ಲ ಹೆಚ್ಚು ರುಚಿಕರ ಹಾಗೂ ಆರೋಗ್ಯಕರ ಎಂದು ಗಾಂಧಿ ಹೇಳುತ್ತಿದ್ದರು.

ತಮಿಳುನಾಡಿನ ಗ್ರಾಮೀಣರು ಈಗಲೂ ಕೂಡ ನೀರಾ ಇಳಿಸುವುದನ್ನು ಆದಾಯದೊಂದು ಮೂಲವನ್ನಾಗಿ ಮಾಡಿಕೊಂಡಿದ್ದಾರೆ. ಮನೆಯ ಗಂಡಸರು ಬೆಳಗ್ಗೆ ತಮ್ಮ ಜಮೀನುಗಳಲ್ಲಿನ ತಾಳೆಯ ಮರಗಳಿಂದ ನೀರಾ ಇಳಿಸಿ ತಂದರೆ, ಹೆಂಗಸರು ಬೆಲ್ಲ ತಯಾರಿಸುತ್ತಾರೆ. ಈ ಬೆಲ್ಲ(ಪನೆಬೆಲ್ಲ)ವನ್ನು ಸಂತೆಗಳಲ್ಲಿ ಮಹಿಳೆಯರೇ ಮಾರಿ ಪುಡಿಗಾಸು ಸಂಪಾದಿಸುತ್ತಾರೆ. ಇದಕ್ಕೆ ಕಾನೂನಿನ ರಕ್ಷೆಯಿಲ್ಲ ಅನ್ನುವುದು ಬೇರೆಯ ಮಾತು.

ನೀರಾ ಚಳವಳಿ ರೈತರ ಹಿತಾಸಕ್ತಿ ಉದ್ದೇಶ ಹೊಂದಿದೆಯಾದರೂ, ಅಲ್ಲಿ ಒಳನೋಟಗಳು ಕಡಿಮೆ. ಸರಿ ಸುಮಾರು ೧೮ ಕೋಟಿ ಲೀಟರ್ ಮದ್ಯಕ್ಕೆ ರಾಜ್ಯದಲ್ಲಿ ವಾರ್ಷಿಕ ಬೇಡಿಕೆಯಿದೆ. ರೈತರು ನೀರಾ ತಯಾರಿಸುತ್ತಾರೆ



*ನೀರಾ ಚಳವಳಿ ನಿಂತಿಲ್ಲ; ವಿಫಲವಾಗಿದೆ. ಸ್ವಾತಂತ್ರ್ಯ ಚಳವಳಿ ಹಾಗೂ ಸ್ವಾತಂತ್ರ್ಯ ನಂತರದ ಪರಿಸ್ಥಿತಿಯನ್ನು ನಾವು ಮತ್ತೆ ಕಾಣುತ್ತಿದ್ದೇವೆ. ಸ್ವಾತಂತ್ರ್ಯ ಸಿಕ್ಕ ಸಂಭ್ರಮದಲ್ಲಿ ಜವಾಬ್ದಾರಿಯನ್ನು ಮರೆತ ರಾಜಕಾರಣ – ಜನತೆಯೇ ಇವತ್ತೂ ಇದ್ದಾರೆ. ಒತ್ತಡಗಳಿಗೆ ಮಣಿದ ಸರ್ಕಾರ 'ನೀರಾ' ಇಳಿಸಲು ಪರವಾನಗಿ ನೀಡಿತೇ ಹೊರತು, ಅದನ್ನು ಜನಪರವಾಗಿ ರೂಪಿಸುವಲ್ಲಿ ಕೈಚೆಲ್ಲಿತು. ಇದೇ ನಡವಳಿಕೆ ವಿರೋಧ ಪಕ್ಷಗಳದು ಕೂಡ. ಲಾಭದ ಕನಸು ಕಾಣುತ್ತಿದ್ದ ರೈತರು ನಿರಾಶರಾಗಿದ್ದಾರೆ.*

*ನೀರಾ ಚಳವಳಿಯ ವೈಫಲ್ಯ ತುಂಬಾ ನಿರಾಶೆ ಉಂಟುಮಾಡುವಂಥದು. ನಮ್ಮ ಬದುಕನ್ನು ಎಲ್ಲ ದಿಕ್ಕುಗಳಿಂದಲೂ ಆಕ್ರಮಿಸಿಕೊಳ್ಳುತ್ತಿರುವ ಜಾಗತೀಕರಣಕ್ಕೆ 'ನೀರಾ ಚಳವಳಿ' ಕರ್ನಾಟಕದ ಒಂದು ದಿಟ್ಟ ಉತ್ತರವಾಗಿತ್ತು. ಆದರೆ ಜಾಗತೀಕರಣದ ಕಬಂಧ ಬಾಹುಗಳ ವಿಸ್ತಾರ ದೊಡ್ಡದು. ಜಾಗತೀಕರಣವಿಂದು ಕೇವಲ ಹೊರಗಿನಿಂದ ಹೇರಲಾಗುತ್ತಿಲ್ಲ; ನಮ್ಮ ನಡುವೆಯೇ ಬೆಳೆಯತೊಡಗಿದೆ.*

*ಒಟ್ಟನಲ್ಲಿ ನೀರಾ ನೀರುಪಾಲಾಯಿತು. ಈ ಮೂಲಕ ಜಾಗತೀಕರಣದ ವಿರುದ್ಧ ಸೆಟೆದು ನಿಲ್ಲಬಹುದಾಗಿದ್ದ ಅಪರೂಪದ ಅವಕಾಶ ತಪ್ಪಿ ಹೋಯಿತು. ಈ ಅವಕಾಶ ಪ್ರಜ್ಞಾ ಪೂರ್ವಕವಾಗಿ ಸೃಷ್ಟಿಯಾಗಿರಲಿಲ್ಲ ಎನ್ನುವುದನ್ನೂ ಕೂಡ ನಾವು ಮರೆಯಬಾರದು. ನೀರಾ ಚಳವಳಿ ವಿಫಲವಾಗುವಲ್ಲಿ ನಮ್ಮ ಬುದ್ಧಿಜೀವಿಗಳ ಪಾತ್ರವೂ ಇದೆ.*

ಎಂದುಕೊಳ್ಳೋಣ. ಮರವೊಂದಕ್ಕೆ ೨ ಲೀಟರ್ ನೀರಾದಂತೆ ೭ ಕೋಟಿ ಮರಗಳಿಂದ ಪ್ರತಿದಿನ ೧೪ ಕೋಟಿ ಲೀಟರ್ ನೀರಾ ಉತ್ಪತ್ತಿಯಾಗುತ್ತದೆ. ಇಷ್ಟೊಂದು ಭಾರೀ ಪ್ರಮಾಣದ ನೀರಾ ಏನು ಮಾಡುವುದು ? ಸರ್ಕಾರದ ಮಧ್ಯ ಪ್ರವೇಶ ಅಗತ್ಯವಾಗುವುದೇ ಇಂಥ ಸಂದರ್ಭಗಳಲ್ಲಿ.

ಪ್ರಸ್ತುತ ನಮ್ಮ ಮುಂದಿರುವ ಸಾಧ್ಯತೆಗಳನ್ನು ಗಮನಿಸಿದರೆ ನೀರಾದ ಉಪಯೋಗವನ್ನು ಎರಡು ರೀತಿಗಳಲ್ಲಿ ಪಡೆಯಬಹುದು. ಮೊದಲನೆಯದಾಗಿ ಪೆಪ್ಸಿ, ಕೋಲಾಗಳ ಮಾದರಿಯಲ್ಲಿ ನೀರಾ ಅಭಿವೃದ್ಧಿಪಡಿಸಿ ಮಾರಾಟ ಮಾಡುವುದು. ಇದರಿಂದಾಗಿ ಮದ್ಯ ಮಾರಾಟಕ್ಕೆ ನೀರಾ ಸ್ಪರ್ಧಿಯಾಗುವುದು ತಪ್ಪುತ್ತದೆ. ನಂತರದ್ದು – ಸಕ್ಕರೆ, ಬೆಲ್ಲಗಳ ಉತ್ಪಾದನೆಗೆ ನೀರಾ ಬಳಸಿಕೊಳ್ಳುವುದು.

ನೀರಾದಿಂದ ಸಕ್ಕರೆ, ಬೆಲ್ಲ ತಯಾರಿಸುವುದನ್ನಾಗಲೀ ಅಥವಾ ನೀರಾವನ್ನು ಲಘುಪಾನೀಯವಾಗಿ ರೂಪಿಸುವ ಕೈಗಾರಿಕೆಯನ್ನಾಗಲೀ ಜನತೆಗೇ ಬಿಟ್ಟು ಸರ್ಕಾರ ಸುಮ್ಮನಿರುವಂತಿಲ್ಲ. ನೀರಾ ಮಾರಾಟವನ್ನು ರೈತರಿಗೇ ಬಿಟ್ಟು ಸರ್ಕಾರ ಸುಮ್ಮನಿದ್ದರೆ, ಸರ್ಕಾರದ ಅಂಜಿಕೆಯಂತೆ ನೀರಾ ಮದ್ಯವಾಗಿ ಬಳಕೆಯಾಗುವುದರಲ್ಲಿ ಯಾವುದೇ ಸಂಶಯವಿಲ್ಲ. ಸಂಪನ್ಮೂಲ ಅಥವಾ ಪ್ರಬಲ ಸಂಘಟನೆ ಹೊಂದಿಲ್ಲದ ರೈತರಿಗೆ ನೀರಾ ಇಳಿಸಲಿಕ್ಕೆ ಮಾತ್ರ ಸರ್ಕಾರ ಅನುಮತಿ ನೀಡಬೇಕು. ಉಳಿದಂತೆ ನೀರಾ ಮಾರಾಟ ಮತ್ತು ಬಳಕೆ ಕುರಿತಂತೆ ಸಂಪೂರ್ಣ ಅಧಿಕಾರ, ನಿಯಂತ್ರಣ ಸರ್ಕಾರದ್ದಾಗಿರಬೇಕು. ಈ ನಿಟ್ಟಿನಲ್ಲಿ ಕರ್ನಾಟಕ ಹಾಲು ಮಹಾಮಂಡಳಿಯನ್ನು ಸರ್ಕಾರ ಆದರ್ಶವನ್ನಾಗಿ ಅನುಸರಿಸಬಹುದು. ನೀರಾ ಸಂಗ್ರಹಣೆ, ಬಳಕೆ ಕುರಿತಂತೆ ಕೆಎಂಎಫ್ ರೀತಿಯಲ್ಲಿ ನೀರಾ ಒಕ್ಕೂಟವನ್ನು ಸರ್ಕಾರ ಸ್ಥಾಪಿಸಬಹುದು.

ನೀರಾ ಚಳುವಳಿ ರಾಜ್ಯದಲ್ಲಿ ಉಂಟುಮಾಡಿರುವ ಕೆಲವು ಪರಿಣಾಮಗಳನ್ನು ಇಲ್ಲಿ ಗಮನಿಸಬೇಕು. ಅವುಗಳಲ್ಲಿ ಮುಖ್ಯವಾದುದು ಗುಡಿ ಕೈಗಾರಿಕೆಯೊಂದು; ಇನ್ನೊಂದು, ಗುಡಿ ಕೈಗಾರಿಕೆಯನ್ನು ಉತ್ತೇಜಿಸಿರುವುದು. ಪತ್ರಿಕೆಯಲ್ಲಿನ ವರದಿಯೊಂದು ಹೇಳುವಂತೆ – ನೀರಾ ಚಳವಳಿ ತೀವ್ರವಾಗಿರುವ ಪ್ರದೇಶಗಳಲ್ಲಿ ಮಣ್ಣಿನ ಗಡಿಗೆಗಳಿಗೆ ಬೇಡಿಕೆ ಯದ್ವಾತದ್ವಾ ಏರಿದೆಯಂತೆ. ಪರಿಣಾಮವಾಗಿ ಕುಂಬಾರಣ್ಣನ ಚಕ್ರ ವೇಗವಾಗಿ ತಿರುಗುತ್ತಿದೆ. ಬಹುಶಃ ಇಂಥ ದಿನಗಳನ್ನು ಕುಂಬಾರರು ನಿರೀಕ್ಷಿಸಿರಲಾರರು.

ಕೇವಲ ಜನಾಂಗವೊಂದರ ಕುಲಕಸುಬಾಗಿದ್ದ ನೀರಾ/ಹೆಂಡ ಇಳಿಸುವುದು ಈಗ ಜಾತಿಯ ಪೊರೆ ಕಳಕೊಂಡು ಸಾರ್ವತ್ರಿಕವಾಗುತ್ತಿರುವುದೂ ಕೂಡ ಗಮನಾರ್ಹ. ಈ ಹಿನ್ನೆಲೆಯಲ್ಲಿ ನೀರಾ ಚಳವಳಿ ಜಾಗತೀಕರಣಕ್ಕೆ ಕರ್ನಾಟಕದ ಉತ್ತರವಲ್ಲದೆ ಬೇರೆಯೇನೂ ಅಲ್ಲ.

೩

ನೀರಾ ಚಳವಳಿಯನ್ನು ಜನಮುಖಿಯಾಗಿ ಸರ್ಕಾರ ಬಳಸಿಕೊಳ್ಳಬಹುದಾದ ಕುರಿತಾದ ಇಲ್ಲಿನ ಯೋಚನೆಗಳು ಪೂರ್ಣಪ್ರಮಾಣದಲ್ಲಿ ಕಾರ್ಯಸಾಧ್ಯ ಹಾಗೂ ಲಾಭಕರ ಎಂದೇನಲ್ಲ. ಇಲ್ಲಿನ ಯೋಚನೆಗಳು – ಚಳವಳಿಯೊಂದು ರೂಪುಗೊಂಡಾಗ ಸರ್ಕಾರ ಮುಕ್ತವಾಗಿ ಆಲೋಚಿಸಬಹುದಾದ ಅಗತ್ಯವನ್ನು ಕುರಿತು ಹೇಳುವಂಥದ್ದಾಗಿದೆ ಹಾಗೂ ಏಕಾಏಕಿ ಚಳವಳಿಯನ್ನು ಹತ್ತಿಕ್ಕಲು/ಪ್ರೋತ್ಸಾಹಿಸಲು ರಾಜಕಾರಣಿಗಳು ಮುಂದಾಗುವ ಬದಲು ತುಸು ಭಿನ್ನವಾಗಿ ಯೋಚಿಸಿ, ವರ್ತಿಸಬೇಕೆನ್ನುವುದಾಗಿದೆ.

ಯಾವುದೇ ಒಂದು ಚಳವಳಿ ರೂಪುಗೊಂಡಾಗ ಗಾಬರಿ ಬೀಳುವುದನ್ನು ಏಕೋ ಏನೋ ನಮ್ಮ ಸರ್ಕಾರಗಳು ರೂಢಿಯಾಗಿಸಿಕೊಂಡಿವೆ. ಸರ್ಕಾರದಲ್ಲಿರುವವರಿಗೆಲ್ಲ ತಾವು ದೇವತೆಗಳೆನ್ನುವ ಭ್ರಮೆ. ಯಾರಾದರೂ ತಪಸ್ಸಿಗೆ ಕೂತಾಗ ಕುರ್ಚಿಗೆ ಸಂಚಕಾರ ಬಂದೀತೆಂದು ದೇವೇಂದ್ರ ತಪಸ್ಸನ್ನು ಕೆಡಿಸಲು ಮುಂದಾಗುತ್ತಿದ್ದನಂತೆ. ನಮ್ಮ ಸರ್ಕಾರಗಳೂ ಹೀಗೇ. ಚಳವಳಿ ಎಂದರೆ ಹತ್ತಿಕ್ಕು ಅನ್ನುವುದು ಅವರ ನೀತಿ. ಇದಕ್ಕೆ ವಿರುದ್ಧವಾಗಿ ವಿರೋಧ ಪಕ್ಷಗಳು ಚಳವಳಿಗಳನ್ನು ಪ್ರೋತ್ಸಾಹಿಸುತ್ತವೆ. ಈ ಮೂಲಕ ಸರ್ಕಾರವನ್ನು ತೆಗಳುವ ಹಾಗೂ ತಮ್ಮ ಜನಪರತೆಯನ್ನು ತೋರಿಸುವ ಅವಕಾಶವಾದಿ ರಾಜಕಾರಣ ಅವುಗಳದ್ದು. ವಿಷಾದದ ಸಂಗತಿಯೆಂದರೆ – ಚಳವಳಿಯ ಮೂಲ ಉದ್ದೇಶಗಳನ್ನು ಹಾಗೂ ಚಳವಳಿ ರೂಪುಗೊಂಡ ಬಗೆಯನ್ನು ಈ ಜನ ಅರ್ಥ ಮಾಡಿಕೊಳ್ಳಲು ಪ್ರಯತ್ನಿಸುವುದೇ ಇಲ್ಲ. ನೀರಾ ಚಳವಳಿಯೂ ಇದಕ್ಕೆ ಹೊರತಲ್ಲ.

ನೀರಾ ಇಳಿಸುವುದು ರಾಜ್ಯಕ್ಕೆ ಹೊಸ ಸಂಪ್ರದಾಯವೇನೂ ಅಲ್ಲ. ಗೃಹಕೈಗಾರಿಕೆಯನ್ನು ರೂಪಿಸುವ ಉದ್ದೇಶದಿಂದ ಅರವತ್ತರ ದಶಕದಲ್ಲಿ ಖಾದಿ ಬೋರ್ಡ್ ಆಶ್ರಯದಲ್ಲಿ ನೀರಾ ಇಳಿಸಲಾಗುತ್ತಿತ್ತು. ನೀರಾದಿಂದ ಬೆಲ್ಲ, ಸಕ್ಕರೆಯನ್ನೂ ಅಲ್ಪ ಪ್ರಮಾಣದಲ್ಲಿ ತಯಾರಿಸಲಾಗುತ್ತಿತ್ತು. ಆನಂತರ ಪಾನನಿರೋಧ ರದ್ದಾದಾಗ ನೀರಾ ಇಳಿಸುವುದಕ್ಕೆ ನಿಷೇಧ ಹೇರಿ, ಹೆಂಡ ಇಳಿಸಲು ಅನುಮತಿ ನೀಡಲಾಯಿತು. ರಾಜ್ಯದಲ್ಲಿ ಈಚಲು ಮರಗಳ ಸಂಖ್ಯೆ ಕಡಿಮೆಯಾಗಿದೆಯೆಂದು, ದಕ್ಷಿಣ ಕನ್ನಡ ಹಾಗೂ ರಾಯಚೂರು ಜಿಲ್ಲೆಗಳನ್ನು ಹೊರತುಪಡಿಸಿ ಉಳಿದ ಜಿಲ್ಲೆಗಳಲ್ಲಿ ಹೆಂಡ ಇಳಿಸುವುದನ್ನು ಕೂಡ ನಿಷೇಧಿಸಲಾಯಿತು. ಬಹುಶಃ ತೆಂಗಿಗೆ ನುಸಿ ಬರದೆ ಹೋದಲ್ಲಿ ಈಗ ಕೂಡ ನೀರಾ ನೆನಪಿಗೆ ಬರುತ್ತಿರಲಿಲ್ಲವೇನೋ ?

* * *

ನೀರಾ ಚಳವಳಿ ಯಶಸ್ವಿಯಾಯಿತೋ ಇಲ್ಲವೋ ಬೇರೆಯ ಮಾತು. ಇಷ್ಟಕ್ಕೂ ಎಷ್ಟು ಚಳವಳಿಗಳು ಯಶಸ್ವಿಯಾಗಿವೆ, ಹೇಳಿ. ಅಂದಮಾತ್ರಕ್ಕೆ ಯಾವುದೇ ಜನಮುಖಿ ಚಳವಳಿ ಯಶಸ್ವಿಯಾಗದಿದ್ದರೆ, ಅದು ಚಳವಳಿಯ ಸೋಲೆಂದು ಭಾವಿಸಬೇಕಿಲ್ಲ. ನೀರಾ ಚಳವಳಿ ಉಂಟುಮಾಡುವ ಜಾಗೃತಿ ದೀರ್ಘಕಾಲಿಕವಾದದ್ದು. ಅಧಿಕಾರ ಕಳೆದುಕೊಂಡ ನಂತರ ಅದು ನಮ್ಮ ರಾಜಕಾರಣಿಗಳಿಗೆ ಅರ್ಥವಾಗುತ್ತದೆ.

**ರಘುನಾಥ ಚ. ಹ.**
ಶ್ರೀರಂಗ ನಿಲಯ, ಬೋವಿ ಕಾಲೊನಿ, ನಾಗಶೆಟ್ಟಿಹಳ್ಳಿ
ಬೆಂಗಳೂರು - ೫೬೦ ೦೯೪

# ಹೈಕು - ಹಂದರ



ಕಡಾಯಿ ಬಿಸಿಯಲ್ಲಿ
ರಾಗಿ ಹೂವಾಗಿ ಅರಳೆ
ನಾನಿಂತಿರುವೆ ಮಂಕಾಗಿ ಮರುಳೆ !

ಬೀಳುವ ನಯಾಗರಕ್ಕೆ
ಸೋಲೆಂಬುದಿಲ್ಲ
ಎಲ್ಲ ಭೋರ್ಗರೆವ ಜಯವೆ !

ಮನವು ನಿಂತಿದೆ
ಬೆರಳ ತುಟ್ಟತುದಿಯಲ್ಲಿ
ಆಗಸವು ಎಟಕದೆ ಕೈಗೆ ?

ಇದೇನಾಶ್ಚರ್ಯ !
ಹುಲ್ಲುಗಾವಲ ಮೇಲೆ
ಆಡುತಿದೆ ಹಸಿರುಸೂರ್ಯ !

ಬೆಟ್ಟದ ಬೆನ್ನು
ವಿನಯದಿ ಬಗ್ಗಿದೆ
ಸೂರ್ಯ ಬೆಳಗಲೆಂದು

ಕೆರೆಯ ಜೀವಿಗಳಲಿ
ನನ್ನ ನೆರಳು ಕಲಿಯುತಿದೆ
ಸಹ ಜೀವನದ ಸೂತ್ರ

ಮಿಂಚುಹುಳು
ಮಣ್ಣಿನ ಹುಳುಗೆ
ಹಿಡಿದಿದೆ ದಾರಿದೀಪ !

ಬುವಿಯ ಹಸಿರು
ಬಾನಿನ ನೀಲಿ
ದೈವದ ಉಸಿರು

**ಜಿ. ಆರ್. ಪರಿಮಳ ರಾವ್**
೧೦೦೩, "ಗರ್ಗೇಶ್ವರಿ", ೨೭ 'ಎ' ಮುಖ್ಯ ರಸ್ತೆ, ೯ನೇ ಬ್ಲಾಕ್
ಜಯನಗರ, ಬೆಂಗಳೂರು - ೫೬೦ ೦೬೯



# ಕನಕನ ಕಿಂಡಿಯ ಮೂಲಕ ಕಂಡ ಮಾಧ್ವ ಮತ

ಪ್ರೊ॥ ಶಿವರಾಮಯ್ಯ

ಉಡುಪಿ ಕ್ಷೇತ್ರ ಶ್ರೀ ಕೃಷ್ಣನಿಂದ ಎಷ್ಟು ಜನಪ್ರಿಯವಾಗಿದೆಯೋ ಅವನ ಭಕ್ತನಾದ ಕನಕದಾಸ ನಿಂದಲೂ ಅಷ್ಟೇ ಪ್ರಸಿದ್ಧಿ ಪಡೆದಿದೆಯಷ್ಟೆ. ಕನಕನ ಭಕ್ತಿಗೆ ಮೆಚ್ಚಿದ ಶ್ರೀ ಕೃಷ್ಣ ಹಿಂದೆ ತಿರುಗಿ ಗೋಡೆಯ ಒಂದು ಕಿಂಡಿಯ ಮೂಲಕ ಆ ಶೂದ್ರ ಭಕ್ತನಿಗೆ ದರ್ಶನ ನೀಡಿದ ಎಂಬುದು ಒಂದು ಐತಿಹ್ಯ. ಇದು ಕಥೆಯೋ ? ಕಲ್ಪನೆಯೋ ? ಚರಿತ್ರೆಯೋ ? ಎಂಬ ಜಿಜ್ಞಾಸೆ ಇಲ್ಲಿ ವ್ಯರ್ಥ. ಯಾಕೆಂದರೆ ಐತಿಹ್ಯವನ್ನು ವಾಸ್ತವವಾಗಿ ನಡೆದುದು ಎಂಬಂತೆ ಹೇಳಲಾಗುತ್ತದೆ. ಪುರಾಣದ ಸತ್ಯತೆ ಅದರ ಪಾತ್ರಧಾರಿಗಳಾದ ದೇವತೆಗಳ ಬಗೆಗೆ ಕೇಳುಗರಿಗಿರುವ ನಂಬಿಕೆಯನ್ನು ಆಧರಿಸಿರುತ್ತದೆ. ಆದ್ದರಿಂದ ಕನಕದಾಸ ನಂತಹ ಭಕ್ತನನ್ನು ಕೃಷ್ಣ ಸನ್ನಿಧಿಗೆ ಬಾರದಂತೆ ಮಡಿವಂತಿಕೆ ನಿರ್ಬಂಧಿಸಿದಾಗ ಆ ಕಟ್ಟುಪಾಡಿನ ಅಡ್ಡಗೋಡೆಯನ್ನು ಕುಟ್ಟಿ ಒಡೆದು ಆ ಕಿಂಡಿಯ ಮೂಲಕ ದೈವ ಕಾಣಿಸಿಕೊಂಡನೆಂದು ಹೇಳಿದ್ದನ್ನು ಕೃಷ್ಣ ಭಕ್ತರು ಇವತ್ತಿಗೂ ಶ್ರದ್ಧಾಭಕ್ತಿಯಿಂದ ನಂಬಿದ್ದಾರೆ. ಮಾಧ್ವ ಮತಸ್ಥರಲ್ಲಿಯೇ ಯಾವುದೋ ಒಂದು ದೊಡ್ಡ ಮನಸ್ಸು ಇಂಥ ಒಂದು ವ್ಯವಸ್ಥೆಯನ್ನು ಏರ್ಪಡಿಸಿ, ಇತ್ತ ಸ್ವಮತೀಯರ ಮಡಿವಂತಿಕೆಯನ್ನೂ ಕಾಪಾಡಿ, ಅತ್ತ ಶೂದ್ರವರ್ಗಕ್ಕೆ ಒಂದು ರೀತಿಯ ಮನ್ನಣೆಯನ್ನೂ ನೀಡಿ, ಸಾಮಾಜಿಕ ಸಹಬಾಳ್ವೆಗೆ ಸಹಕರಿಸಿದೆ. ಎಂದರೆ ಆ ಹಿರಿಯ ತಲೆಮಾರಿನವರ ಆ ಕಾಲದ ಸೀಮಿತ ಸಾಮಾಜಿಕ ನ್ಯಾಯಕ್ಕೆ ಒಂದು ಜ್ವಲಂತ ಮಾದರಿ ಕನಕನ ಕಿಂಡಿ ಎಂದಾಯಿತು.

ವಿಷಯ ಇಷ್ಟು ಸರಳವಿರುವಾಗ ಕನಕನ ಈ ಕಿಂಡಿಯ ಬಗೆಗೆ ಆಧುನಿಕರಲ್ಲಿ ಆಗಾಗ ಗೊಂದಲಗಳೂ ವಾದ ವಿವಾದಗಳೂ ಮೂಡುತ್ತಲೇ ಬಂದಿವೆ. ಈ ವಿವಾದಗಳ ಹಿಂದೆ ಕಾಲ ಧರ್ಮಕ್ಕನುಗುಣವಾದ ಹಿತಾಸಕ್ತಿಗಳು ಕೆಲಸ ಮಾಡುತ್ತಿರುತ್ತವೆ. ಪ್ರಸ್ತುತ ಬನ್ನಂಜೆ ಗೋವಿಂದಾ ಚಾರ್ಯರು ಇಂತಹ ಒಂದು ಹಿತಾಸಕ್ತಿಯ ಸಂದೇಶವನ್ನು ಕೊಟ್ಟಿದ್ದಾರೆ. ಮಂಗಳೂರಿನಿಂದ ಪ್ರಕಟವಾಗುವ ಕ್ಷ-ಕಿರಣವೆಂಬ ಪತ್ರಿಕೆ ಗುರ್ತಿಸಿರುವ 'ಬುದ್ಧಿವಂತರ ಪಟ್ಟಿ'ಯಲ್ಲಿ ಅಗ್ರಸ್ಥಾನ ಪಡೆದಿರುವ ಆಚಾರ್ಯರು ಉಡುಪಿ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನದಿಂದ ಹೇಳಿದ ಸಂದೇಶ ವಾಕ್ಯಗಳೆಂದರೆ, ''ಕೃಷ್ಣ ತಿರುಗಿದರೂ ದೊಡ್ಡವನೇ, ತಿರುಗದಿದ್ದರೂ ದೊಡ್ಡವನೇ. ಕನಕನಿಗೆ ಕೃಷ್ಣ ಒಲಿದದ್ದು ನಿಜ ಅನ್ನುವುದಕ್ಕೆ ಸಾಕ್ಷ್ಯಾಧಾರಗಳು ಇಲ್ಲ. ನಿಜವಾಗಿ ನಡೆದದ್ದೇನೆಂದರೆ (ರನ್ನಿಂಗ್ ಕಾಮೆಂಟ್ರಿಯೆ ?) ಭೂಕಂಪದಿಂದ ಉಂಟಾದ ಗೋಡೆಯ ಬಿರುಕನ್ನು ವಾದಿರಾಜರು ಕಿಂಡಿಯಾಗಿ ಪರಿವರ್ತಿಸಿ ಅದಕ್ಕೆ 'ಕನಕನ ಕಿಂಡಿ' ಎಂದು ಹೆಸರಿಟ್ಟರು ಮತ್ತು ಆ ಮೂಲಕ ಕನಕನಿಗೂ ಕೃಷ್ಣನಿಗೂ ಒಂದು ನಂಟನ್ನು ಏರ್ಪಡಿಸಿದರು.'' ಜಾಣ ಮಾಧ್ವ ಬ್ರಾಹ್ಮಣನಿಗೆ ಉಚಿತ ನುಡಿಗಟ್ಟುಗಳು ! ದ್ವೈತ ಎಂದರೆ ಎರಡು; ವಿಕಾರಾತ್ಮಕ, ಅಸಮತ್ವ, ಬ್ರಹ್ಮ ಮತ್ತು ಜೀವಿಗಳು ಬೇರೆ ಬೇರೆ ಎಂದು ಪ್ರತಿಪಾದಿಸುವುದು ಇತ್ಯಾದಿ ಅದಕ್ಕೆ ಅರ್ಥಗಳುಂಟು. ಅದ್ವೈತವನ್ನು ಮಧ್ವಾ ಚಾರ್ಯರು ಎರಡಾಗಿ ಸೀಳಿದ್ದರಿಂದ ಇದು ಮಾಧ್ವಮತ ವಾಯಿತು ಎನ್ನುವವರಿಗೂ ಕೊರತೆಯಿಲ್ಲ. ಆದ್ದರಿಂದ ದ್ವೈತವೆಂದರೆ ಬುದ್ಧಿವಂತಿಕೆ, ಕುತಂತ್ರ, ಎಲ್ಲದರಲ್ಲೂ ಎರಡಿರಬೇಕೆಂಬ ನಿಯಮವೆಂದೂ ಅರ್ಥೈಸಬೇಕೆ ? ಸಕಾರಾತ್ಮಕವಾಗಿ ನೋಡಿದರೆ ಈ ಮಾಧ್ವ ಸಿದ್ಧಾಂತ ವೈಜ್ಞಾನಿಕವೇ. ಆದರೆ ಬನ್ನಂಜೆಯವರಂತೆ ಸಮಾಜದ ಸೌಹಾರ್ದತೆಯನ್ನು ಮೇಲಿನಂತೆ ಸೀಳಿ, ಬ್ರಾಹ್ಮಣರ ಮೇಲ್ಮೈಯನ್ನು ಮತ್ತೆ ಸಂಸ್ಥಾಪಿಸಲು ಕನಕನ ಕಿಂಡಿಯ ಐತಿಹ್ಯವನ್ನೂ ತಿರುಚಿ ಬಳಸಿಕೊಳ್ಳುವುದಾದರೆ ಈ ಸಿದ್ಧಾಂತ ವನ್ನು ಅವೈಜ್ಞಾನಿಕವೆಂದು ದೂರ ಸರಿಸಬೇಕಾಗುತ್ತದೆ.

ಇಲ್ಲವೆಂದಾದರೆ ಬನ್ನಂಜೆಯವರ ಮಾತಿನ ಉದ್ದೇಶವೇನು ? ಇಲ್ಲಿ ಯಾವ ಸಂದೇಶ ಪ್ರಚಾರಕ್ಕೆ ಬರುತ್ತಿದೆ ? ಇದಕ್ಕೂ ಇವತ್ತಿನ ಧರ್ಮ-ರಾಜಕಾರಣಕ್ಕೂ ಏನಾದರೂ ಸಂಬಂಧವುಂಟೆ ? ಈಗಾಗಲೇ ರಾಜಾರಾಮ ತೋಳ್ಪಾಡಿಯವರು ಸರಿಯಾಗಿಯೇ ಊಹಿಸಿರುವಂತೆ 'ಬನ್ನಂಜೆಯವರ ಉದ್ದೇಶ ಸಂಸ್ಕೃತಿಯ ಮೇಲೆ ಬ್ರಾಹ್ಮಣರ ಏಕಸ್ವಾಮ್ಯವನ್ನು ಊರ್ಜಿತದಲ್ಲಿಡುವುದು.' ನಿಜ, ಇಂಥವರು ಅಯೋಧ್ಯೆಯಲ್ಲಿ ರಾಮನ ಜನನಪತ್ರವನ್ನು ನೋಂದಾಯಿಸಿ ದಾಖಲೆ ಎತ್ತಬಲ್ಲರು; ಹುಬ್ಬಳ್ಳಿಯ ಈದ್ಗಾ ಮೈದಾನದಲ್ಲಿ ನಿಂತು ಗದ್ದಲ ಎಬ್ಬಿಸಬಲ್ಲರು; ಬಾಬಾ ಬುಡನ್‌ಗಿರಿ ಹತ್ತಿ ತಣ್ಣಗೆ ಮಲಗಿರುವ ದರ್ಗಾಗಳನ್ನು ನಡುಗಿಸಬಲ್ಲರು; ಪುರಿಯ ಜಗನ್ನಾಥ ದೇವಾಲಯಕ್ಕೆ ಇಂದಿರಾ ಗಾಂಧಿ ಪ್ರವೇಶಿಸದಂತೆ ನಿರ್ಬಂಧಿಸಬಲ್ಲರು; ಶಿಕ್ಷಣದಲ್ಲಿ ಕೇಸರಿ ಬಣ್ಣ ಬೆರೆಸಬಲ್ಲರು; ಒಟ್ಟಾರೆ ದೇಶವನ್ನು ಶತಮಾನಗಳ ಹಿಂದಕ್ಕೆ ಎಂದರೆ, ಮಧ್ಯಯುಗಕ್ಕೆ ಕೊಂಡೊಯ್ಯಬಲ್ಲರು; ಅವಕಾಶ ದೊರೆತರೆ ಕನಕನ ಕಿಂಡಿಯನ್ನೇ ಮುಚ್ಚಬಲ್ಲರು. ಮುಚ್ಚಿಕೊಳ್ಳಲಿ, ಯಾರಲ್ಲಿ ಇಣುಕಬೇಕು ! ವಾಸ್ತವವಾಗಿ ಉಡುಪಿಯ ರಥ ಬೀದಿ, ಅಷ್ಟ ಮಠಗಳ ಆವರಣವೆಲ್ಲ ದನಕರುಗಳ ಸಗಣ-ಗಂಜಲಗಳಿಂದ, ಪ್ರವಾಸಿಗರ ಉಚ್ಚಿಷ್ಟಗಳಿಂದ ಈಗಾಗಲೇ ದುರ್ನಾತ ಹತ್ತಿದೆ. ಅದರ ಸಫಾಯಿ ಕೆಲಸವನ್ನೂ ಕಡೆಗಣಿಸಿರುವ ಸ್ವಾಮಿಗಳು ತಮ್ಮದೇ ಆದ

(ಆಳನೇ ಪುಟಕ್ಕೆ )

# ವೈಷ್ಣವ ಮಾನಭಂಗ

*(ಬೀದಿ ನಾಟಕ)*



[**ಸೂತ್ರಧಾರ** ದೊಂಬರವನ್ನು ಬಾರಿಸುತ್ತ ಬಯಲು ಸುತ್ತುಹಾಕುತ್ತಿರುತ್ತಾನೆ. 'ಕೇಳಿ ಕೇಳಿ' ಎಂದು ಕೂಗುತ್ತಾನೆ. ಅವನದೇ ಸಂಗಾತಿಯೊಬ್ಬ ಅವನನ್ನು ತಡೆದು ಮಾತಾಡಿಸುತ್ತಾನೆ]

**ಸಂಗಾತಿ:** ಎಲ್ಲೆ ಸೂತ್ರಧಾರಾ ನಿಲ್ಲು ನಿಲ್ಲು, ಹೀಗೆ ಮಾತಾಡದೇ ಒಂದೇ ಸಮನೆ ಡೊಂಬರು ಬಡಿಯುತ್ತ ಬಯಲು ಸುತ್ತುತ್ತಿದ್ದರೆ ಕೂಡಿದಂಥ ಜನಗಳು, ನೋಡುವಂಥ ಮಕ್ಕಳು, ಸೇರಿದಂಥ ಅಧಿಕಾರಿಗಳು, ಮತ್ತುಳಿದ ಚಿಲ್ಲರೆ, ಅಲ್ಲಲ್ಲ, ಮಹಾ ಮಹಾ ಜನಗಳು ಏನೆಂದು ತಿಳಿಯಬೇಕು ? ಹೇಳುವಂತವನಾಗು: ನಿನಗೇನು ದೆವ್ವ ಹಿಡಿದಿದೆಯೋ ? ಅಥವಾ ಸುತ್ತು ಹೆಚ್ಚು ಕಮ್ಮಿ ಆಗಿದೆಯೋ ?

**ಸೂತ್ರಧಾರ:** ಸಂಗಾತಿ ಕೇಳುವಂತವನಾಗು. ನೀನೇ ನನ್ನ ಉದ್ದೇಶ ತಿಳಿಸಲಿ ಎಂದು ಕೇವಲ ಡೋಳು ಬಡಿಯುತ್ತಿದ್ದೇನೆ. ಆದರೆ ನೀನೇ ಕೇಳಿದ್ದರಿಂದ...

**ಸಂಗಾತಿ:** ಹೇಳುವಂತವನಾಗು.

**ಸೂತ್ರಧಾರ:** ಬಂದಂಥಾ ಜನರೆದುರು, ಕೂಡಿದಂಥ ಪರಸೆಯ ಮಧ್ಯೆ, ಒಂದು ನಾಟಕಾ ಆಡ್ಬೇಕಂತಿದ್ದೇನೆ.

**ಸಂಗಾತಿ:** ನಾಟಕ ! ಅಯ್ಯಾ ಗೆಳೆಯಾ, ನಾಟ್ಕಾ ಅಂತ ಹೇಳ್ತೀಯ, ಎಲ್ಲಿದೆ ಪಿಯಾನ್ ಪೆಟ್ಟಿಗೆ, ಬಣ್ಣದ ಪೆಟ್ಗೆ, ಪಾತ್ರಧಾರರು ಎಲ್ಲಿದ್ದಾರೆ ?

**ಸೂತ್ರಧಾರ:** ಅಪಾ ಕೇಳು ನಾಟಕ ಅಂದರೆ...

**ಸಂಗಾತಿ:** ರಂಗನಾಟಕ, ರಂಗಸ್ಥಳ, ಪರದೆ ಗಿರದೆ .. ಅಥವಾ ಸೆಟಿಂಗ್ಸ್.

**ಸೂತ್ರಧಾರ:** ಅಂಥಾದ್ದೇನೂ ನಮ್ಮಲ್ಲಿ ಇಲ್ಲವಲ್ಲಾ.

**ಸಂಗಾತಿ:** ಹಾಗಾದರೆ ಎಂತಾ ನಾಟಕಾಪ್ಪ ಅದು !

**ಸೂತ್ರಧಾರ:** ಬೀದಿ ನಾಟಕ.

**ಸಂಗಾತಿ:** ಬೀದಿ ನಾಟಕ ?

**ಸೂತ್ರಧಾರ:** ಹೌದು, ಹೌದು, ಬೀದಿ ನಾಟಕ, ಬೀದಿ ನಾಟ್ಕಾ. ಬೀದಿ...

**ಸಂಗಾತಿ:** ಯಾವ ವಿಷಯವಾಗಿ ?

**ಸೂತ್ರಧಾರ:** 'ವೈಷ್ಣವ ಗರ್ವಭಂಗಂ' ಎಂಬಂತಾ ಪೌರಾಣಿಕ ನಾಟಕ. (ಇಬ್ಬರೂ) ನಾಟಕಾ ನಾಟಕಾ, ಬೀದಿ ನಾಟಕ - ಕೇಳಿರಿ ಕೇಳಿರಿ ಬೀದಿ ನಾಟ್ಕಾ.

**ಸೂತ್ರಧಾರ:** ಮಹಾಜನಗಳೇ, ನಿಮ್ಮ ಸಹಕಾರ ನಮ್ಮೊಟ್ಟಿಗಿರಲಿ. ಒಂದು ಸಲ ಜೋರಿನಿಂದ ಚಪ್ಪಾಳೆ ಹೊಡೆದು ನಾಟಕ ಶುರುಮಾಡಲು ಅಪ್ಪಣೆ ಕೊಡಿ.... (ಚಪ್ಪಾಳೆ)...

ಅರೇರೇರೇ ಇದೇನಪಾ ಅಂತಂದ್ರೆ, ಯಾರೊ ಇಬ್ಬರು ಮಹಾಶಯರು ನಮ್ಮ ಕಡೆಗೆ ಧಾವಿಸಿ ಬರುತ್ತಿದ್ದಾರಲ್ಲಾ ! ನಡೆಯುವ ಧಾಟಿ ನೋಡಿದರೆ ಏನೋ ವಿಶೇಷ ಇರುವಂತಿದೆ. ಮೊದಲು ಈ ಆಗಂತುಕರನ್ನು ಮಾತನಾಡಿಸಿ ಸಮಾಚಾರ ತಿಳಕೋತೇನೆ.

**ನಾರದ:** ನಾರಾಯಣ ನಾರಾಯಣ (ಕೊರಳಿಗೆ ಜಪಮಣಿ, ಲುಂಗಿ ಮತ್ತು ಜುಬ್ಬ.)

**ವಿಷ್ಣು:** (ಕಚ್ಚೆಪಂಚೆ, ಶರ್ಟು ಧರಿಸಿದ್ದಾರೆ) ನಾರದಾ ನಿಲ್ಲು, ನಿಲ್ಲಿಸು ನಿನ್ನ ಸ್ತುತಿ. ನಾವು ಎಲ್ಲಿಂದ ಬಂದಿದ್ದೇವೆ ? ಯಾವ ವೇಷ ತೊಟ್ಟಿದ್ದೇವೆ ಎಂದೆಲ್ಲಾ ನೆನೆಸಿಕೊ, ದ್ವಾಪರ ಯುಗದಲ್ಲಿಯಂತೆ ಸದಾ ನಾರಾಯಣ ನಾರಾಯಣ ಅಂತ ಚಿಟಿಕಿ ಹೊಡೆಯ ಬೇಡ. ನಮ್ಮ ಕೆಲಸಕ್ಕೆ ಬಾರಿ ಹುಚುಕು.

**ನಾರದ:** ಹೌದಲ್ಲಾ, ಇರಲಿ ಇರಲಿ, ಇಲ್ಲಿ ಮುಂದೆ ಬರುವ ವ್ಯಕ್ತಿಯನ್ನೇ ವಿಚಾರಿಸಿ ಮುಂದಡಿಯಿಡುವ.

**ಸೂತ್ರಧಾರ:** ಮಹಾಶಯರೇ ಧಾವಿಸಿಬಂದಂಥ ನೀವು ನನ್ನ ನೋಡಿದ ಕೂಡಲೇ ಏಕೋ ನಿಂತುಬಿಟ್ಟಿರಲ್ಲ ? ಎಲ್ಲಿಂದ ಬಂದದ್ದು, ಏನು ಅವಸರ ? ಏನು ಕೆಲಸ? ಎಲ್ಲಿಗೆ ಹೋಗಬೇಕು ? ತಮ್ಮ ನಾಮಾಂಕಿತ ಯಾವುದು ? ಸ್ಥಳನಾಮ...

**ನಾರದ:** ಇವರು ವಿಷ್ಣು. ವಿಷ್ಣುಮೂರ್ತಿ ಅಂತ ಕರೀತಾರೆ ಭೂಲೋಕದಲ್ಲಿ.

**ಸೂತ್ರಧಾರ:** ಇದೇ ಸ್ವಾಮಿ ಭೂಲೋಕ.

**ನಾರದ:** ಅದೇ ಅದೇ ಇಲ್ಲಿ ವಿಷ್ಣುಮೂರ್ತಿ ಅಂತ.

**ಸೂತ್ರಧಾರ:** ಎಲ್ಲೋ ಕೇಳಿದ ಹಾಗಿದೆ..

**ಸಂಗಾತಿ :** ವಿಷ್ಣು , ವಿಷ್ಣುಮೂತ್ರಿ.

**ವಿಷ್ಣು:** ಮೂತ್ರಿ ಅಲ್ಲಪಾ ಮೂರ್ತಿ, ವಿಷ್ಣುಮೂರ್ತಿ.

**ಸಂಗಾತಿ:** ಇರಬೌದು ಬಿಡಿ, ಊರು ಕೇರಿಯಲ್ಲಿ ಎಷ್ಟೊಂದು ಮೂರ್ತಿಗಳು. ಆದರೆ ಇವರ ಹೆಸರು ?

**ವಿಷ್ಣು:** ನಾರದ.

**ನಾರದ:** ಹಂ ಹಂ. ನಾರದಾಚಾರ್ಯ

**ಸೂತ್ರಧಾರ:** ನಾರದಾಚಾರ್ಯ, ನಾರದ, ದೇವಲೋಕ.

**ನಾರದ:** ಹೌದೌದು, ನಾನು ಮೂರುಲೋಕ ಸಂಚಾರಿ.

**ವಿಷ್ಣು:** ನಾನು ದಶಾವತಾರಿ.

**ಸಂಗಾತಿ:** ಮಹಾಶಯರೆ, ಒಟ್ಟಾರೆಯಾಗಿ ನಮಗೆ ಗ್ರಹಚಾರ ಸರಿಯಿಲ್ಲವೆಂದೇ ತೋರುತ್ತದೆ. ಇರಲಿ ನೀವು ಬಂದಿದ್ದು ಎಲ್ಲಿಂದ ?

**ನಾರದ:** ದೇವಲೋಕದಿಂದ.

**ಸೂತ್ರಧಾರ:** ದೇವಲೋಕ ? ಆಕಾಶ ?

**ವಿಷ್ಣು:** ಹೌದೌದು. ದೇವಲೋಕಕ್ಕೂ ಭೂಲೋಕಕ್ಕೂ ಮೊದಲಿನಿಂದಲೂ ನಂಟು. ನಾವು ಆಗಾಗ ಭೂಮಿಗೆ ಬಂದದ್ದುಂಟು. ನಿಮ್ಮ 'ಶಕುಂತಲೆ'ಯ ತಾಯಿ ಮೇನಕಾಮ್ಮ ಅಂತ ಇದ್ದಳಲ್ಲ ಅವಳು ನಮ್ಮೂರಿನವಳೇ. ಅಲ್ಲದೆ ನಿಮ್ಮ ಕಾರ್ಕಂತರ 'ಗರ್ಭಗುಡಿ' ನಾಟಕದಲ್ಲಿ

**ಸೂತ್ರಧಾರ:** ಕಾರ್ಕಂತ ಅಲ್ಲ ಸ್ವಾಮಿ ಕಾರಂತ, ಕಾರಂತರ 'ಗರ್ಭಗುಡಿ' ನಾಟಕ.

**ನಾರದ:** ಹೌದೌದು, ನಾನೇ ಗೋಕರ್ಣದವರೆಗೂ ಬಂದಿದ್ದೆ. ಆಗ ಇವರು, ವಿಷ್ಣುಮೂರ್ತಿಗಳು ಇರಲಿಲ್ಲ.

**ವಿಷ್ಣು:** ಆದರೆ ನಾವಿಬ್ಬರೂ ಒಟ್ಟಾಗಿ ಒಂದ್ಸಲ ಕುಪ್ಪಳ್ಳಿ ಕಡೆ ಬಂದಿದ್ದೆವಪ್ಪ. ಆ ಬೆಟ್ಟದಲ್ಲಿ ನಡೆವಾಗ ಉಂಬುಳ ಕಚ್ಚಿ ರಕ್ತ ಹರಿದಿದ್ದೇ ಹರಿದದ್ದು.

**ಸಂಗಾತಿ:** ಕುಪ್ಪಳ್ಳಿಗೆ ?

**ವಿಷ್ಣು:** ಹೌದೌದು, ಅದೇ ಅದೇ 'ಧನ್ವಂತರಿ ಚಿಕಿತ್ಸೆ'ಗಾಗಿ ನಾವಿಬ್ಬರೂ ಹಹಹ.

**ಸೂತ್ರಧಾರ:** ಸರಿ, ನಾನು ಮೊದಲು ಎಣಿಸಿದ್ದೇ ಸರಿ. ಯಾವುದೋ ಹುಚ್ಚಾಸ್ಪತ್ರೆಯಿಂದ ತಪ್ಪಿಸಿಕೊಂಡು ಬಂದಿದ್ದಾರೆ. ಮಹಾಶಯರೇ, ನಮಗೆ ಬೇರೆ ಕೆಲಸ ಉಂಟು. ನಮ್ಮಿಂದ ನಿಮಗೇನಾಗಬೇಕು ? ಬೇಗ ಹೇಳಿ ಬೇಗ ನಮ್ಮನ್ನು ಮೋಕಳೀಕ ಮಾಡಿ. ನಮಗೆ ಒಂದು ನಾಟಕ ಆಡುವುದಿದೆ. ಜನ ಸೇರಿದ್ದಾರೆ.

**ನಾರದ:** ಅರರೇ, ನೀವು ಆತಂಕ [illegible] ನಮ್ಮನ್ನೂ ನಿಮ್ಮ ನಾಟಕದಲ್ಲಿ ಹಾಕಿಕೊಳ್ಳಿ. ನಮಗೂ ರಂಗಭೂಮಿಯ ಪರಿಚಯ ಚೆನ್ನಾಗಿದೆ. ಇವರಾದರೆ ದಶಾವತಾರರು; ಜೀವನ ನಾಟಕ ಸೂತ್ರಧಾರರು.

**ಸೂತ್ರಧಾರ:** [illegible] ?

**ವಿಷ್ಣು:** [illegible] ನಾರದರು.

---

ಆರ್. ವಿ. ಭಂಡಾರಿ

---

**ಸೂತ್ರಧಾರ:** ಸಂಗಾತಿ ಮುಂದಿನ ಕತೆ ಏನಪಾ ?

**ಸಂಗಾತಿ:** ಅವರು ಹೇಳಿದ ಹಾಗೇ ಆಗಲಿ. ಆದರೆ ಇವರ ಡ್ರೆಸ್ ಬದಲಿಸಬೇಕು.

**ನಾರದ ಮತ್ತು ವಿಷ್ಣು:** ಏನಾಗಬೇಕು ಹೇಳಿ, ಮೇಕಪ್ ಮಾಡಲು ನಮಗೇ ಗೊತ್ತಿದೆ. ಇವರು ಒಂದು ಸಲ ಮೋಹಿನಿ ಪಾತ್ರ ಮಾಡಿದ್ದರು.

**ಸೂತ್ರಧಾರ:** ನಾರದರೆ, ನಿಮ್ಮ ಕೊರಳ ಜಪಸರ ತೆಗೆದು ಬ್ಯಾಗಿನಲ್ಲಿ ತುರುಕಿಕೊಳ್ಳಿ. ವಿಷ್ಣುಮೂರ್ತಿಯವರೆ, ನಿಮ್ಮ ಈ ಕಚ್ಚೆಪಂಚೆ ಆಗದು. ನೀವಿಬ್ಬರೂ ಒಳ್ಳೆಯ ಸೂಟು-ಬೂಟು ಹಾಕಿಕೊಳ್ಳಿ. ಬೇಕಾದರೆ ಹಣೆಯ ಮೇಲೆ ಒಂದೊಂದು ಕುಂಕುಮದ ಬೊಟ್ಟು ಇರಲಿ. ಕೂಡಲೇ ಸನ್ನದ್ಧರಾಗಿ ಬನ್ನಿ.

ಸಂಗಾತಿ, ನಾವು ಈ ಕೂಡಲೇ ಹಸ್ತಿನಾವತಿ ನಗರಕ್ಕೆ ವರ್ಗಾಯಿಸಬೇಕಾಗಿದೆ. ಯಾಕೋ ನಮ್ಮ ಆಲೋಚನೆಗಳೆಲ್ಲಾ ತಲೆಕೆಳಗಾಗುತ್ತಿವೆ, ಇರಲಿ. ಹೊರಡೋಣವೇ ?

**ಸಂಗಾತಿ:** ಹಾಗೇ ಆಗಲಿ. (ಇಬ್ಬರೂ ದೊಂಬರ ಬಡಿದು ಎರಡು ಸುತ್ತು ಬರುತ್ತಾರೆ)

**ಸೂತ್ರಧಾರ:** ಆಹಾ ! ಇಲ್ಲೇ ಇಲ್ಲೇ ಇದೇ ಹಸ್ತಿನಾವತಿ. ಎಲ್ಲಾ ಸಿದ್ಧತೆ ನಡೆಯಲಿ.

**ಸಂಗಾತಿ:** ಎಂತೆಂಥ ಸಿದ್ಧತೆಯಾಗಬೇಕು ಸೂತ್ರಧಾರಾ ?

**ಸೂತ್ರಧಾರ:** ಹಸ್ತಿನಾವತಿ ಅರಮನೆಯ ಒಳದೃಶ್ಯ ಇರಲಿ. ರಕ್ಷಣಾ ಇಲಾಖೆಯ ಕೇಂದ್ರ ಕಛೇರಿ.

**ಸಂಗಾತಿ:** ಅದನ್ನು ಹೇಗೆ ಮಾಡೋಣ ?

**ಸೂತ್ರಧಾರ:** 'ಹಸ್ತಿನಾವತಿ ರಾಜ್ಯದ ರಕ್ಷಣಾ ಇಲಾಖೆಯ ಕೇಂದ್ರ ಕಛೇರಿ' ಎಂದು ಒಂದು ಬೋರ್ಡ್ ಬರೆಸಿ ಹಾಕು. ಅಲ್ಲಿ ಬೇಕಾದ ಆಫೀಸ್‌ಗಳನ್ನೆಲ್ಲ ಸಿದ್ಧಪಡಿಸು.

**ಸಂಗಾತಿ:** ಒಂದು ಕಡೆ...

**ಸೂತ್ರಧಾರ:** ಹೌದು, ಒಂದು ಕಡೆ; ಒಬ್ಬರ ಮುಖ ಒಬ್ಬರಿಗೆ ಕಾಣದ ಹಾಗೆ, ಗೋಳವಾಗಿ, ಎಲ್ಲರ ಬೆನ್ನು ಹಿಂದುಗಡೆಯೇ ಬರುವಂತೆ.

**ಸಂಗಾತಿ:** ಬೆನ್ನು ಇರುವುದೇ ಹಿಂದುಗಡೆಯಲ್ಲವೇ ಸೂತ್ರಧಾರ?

**ಸೂತ್ರಧಾರ:** ಆದರೆ ಒಬ್ಬರ ಬೆನ್ನು ಒಬ್ಬರಿಗೆ ಕಾಣದ ಹಾಗೆ ಕುರ್ಚಿ ಹಾಕಿ...

**ಸಂಗಾತಿ:** ಎಲ್ಲಿಂದ ತರುವುದು ನಾಲ್ಕಾರು ಕುರ್ಚಿ ?

**ಸೂತ್ರಧಾರ:** ಹೌದಲ್ಲ ಸಂಗಾತಿ... ಹಂ ಹೀಗೆ ಮಾಡುವ, ಎಲ್ಲದಕ್ಕೂ ಸೂತ್ರಧಾರನೊಡನೆ ಪರಿಹಾರ ಇರುತ್ತದೆ. ಒಬ್ಬ ಮನುಷ್ಯನ ಬೆನ್ನು ಬಗ್ಗಿಸಿ ನಿಲ್ಲಿಸು ಮತ್ತು ಅವನ ಬೆನ್ನ ಮೇಲೆ ಒಬ್ಬ ಅಧಿಕಾರಿಯ ಕುಂಡೆ ಕೂಡ್ರಿಸು.

(ಹಾಗೆ ವ್ಯವಸ್ಥೆ ಮಾಡುವನು)

**ಸೂತ್ರಧಾರ:** ಹ್ವಾಹ್ವಾ ! ದಿಲ್ಲಿ ಎಂದರೆ ದಿಲ್ಲಿ !

**ಸಂಗಾತಿ:** ದಿಲ್ಲಿ ? ಇದು ಪೌರಾಣಿಕ ನಾಟಕ.

**ಸೂತ್ರಧಾರ:** ಆದ್ರೂ ಜನ ಅಷ್ಟು ದಡ್ಡರಲ್ಲ ಸಂಗಾತಿ. ಅವರಿಗೆ ತಿಳಿದೇ ತಿಳಿಯುತ್ತದೆ, ನಮ್ಮ ಸಮಾಜ ಹಾಗೆ ಜರ್‍ರSSಂತ ಬದಲಾವಣೆ ಆಗುವುದಿಲ್ಲ ಅಂತ.

**ಸಂಗಾತಿ:** ಆದರೂ ಬೆನ್ನು ಕೊಟ್ಟ ಜನ ಜರ್‍ರSSಂತ ಎದ್ದು ನಿಂತರೂ ಅಂದರೆ...

(ಹಹಹ : ಇಬ್ಬರೂ ನಗೆಯಾಡುತ್ತಾರೆ)

**ಸೂತ್ರಧಾರ:** ನೋಡು, ನಮ್ಮ ವಿಷ್ಣು ಮತ್ತು ನಾರದರು ಬರುತ್ತಿದ್ದಾರೆ. ಹೇಗಿದೆ ವೇಷ ?

**ನಾರದ:** ನಾರಾಯಣ ನಾರಾಯಣ...

**ಸೂತ್ರಧಾರ:** ಅಯ್ಯ ನಾರದಾಚಾರ್ಯರೇ, ಇಲ್ಲಿ ಇನ್ನು ನಾರಾಯಣ ಕೂಡದು. ಮತ್ತೂ ಒಂದು ಹೇಳಿಬಿಡ್ತೇನೆ. ಆ ನಿಮ್ಮ ಹಳೇ ಪುರಾಣಗಳ ಕಂತೆ, ದೇವಲೋಕ-ಗೀವಲೋಕ, ಮೇನಕೆ, ತಿಲೋತ್ತಮೆ ಅಂತೆಲ್ಲ ಹರಟಬೇಡಿ. ಸಮಯ ಸಂದರ್ಭ ಎಲ್ಲಾ ಗಮನಿಸಿಯೇ ಮಾತಾಡಿ. ಇದು ರಕ್ಷಣಾ ಇಲಾಖೆಯ ಕೇಂದ್ರ ಕಛೇರಿ. ಅಲ್ಲಿ ನೋಡಿ ಕಾವಲು ನಿಂತಿದ್ದಾರೆ ಸೈನಿಕರು. ಎಲ್ಲರ ಕೈಯ್ಯಲ್ಲಿ ಗನ್ನು.

**ವಿಷ್ಣು:** ಗನ್ನು ಎಂದರೆ ?

**ನಾರದ:** ಗನ್ನು ಎಂದರೆ ಕೋವಿ.

**ಸೂತ್ರಧಾರ:** ಹಂ, ಹಂ, ನೋಡಿ, ನಾರದಾಚಾರ್ಯರಿಗೆ ಎಲ್ಲಾ ಗೊತ್ತು, ದೇಶ ಸಂಚಾರಿಗಳು. ವಿಷ್ಣುಮೂರ್ತಿಯವರೆ, ಗನ್ನು 'ಡಂ' ಎಂದರೆ ಗುಂಡು ತಾಗಿದವರು ಬದುಕುವುದಿಲ್ಲ. ಎಚ್ಚರ ಇರಿ. ಒಳ ಹೊಕ್ಕ ಮೇಲೆ ಬರುವುದು ಕಷ್ಟ! ಚಕ್ರವ್ಯೂಹ, ತಿಳಿಯಿರಿ, ದ್ರೋಣಾಚಾರ್ಯರ ಚಕ್ರವ್ಯೂಹ .

(ಇವರೂ ಚಕ್ರವ್ಯೂಹ ಹೊಕ್ಕುತ್ತಾರೆ. ಮೊದಲನೆಯವರ ಬಳಿ ಹೋಗುತ್ತಾರೆ)

**ವಿಷ್ಣು:** ನಮಸ್ಕಾರ (ಇಬ್ಬರೂ)

**ಸೆಕ್ಷನ್ ಆಫೀಸರ್:** ನಮಸ್ಕಾರ. ಯಾರು ಬೇಕಾಗಿತ್ತು ?

**ವಿಷ್ಣು:** ನಾವು ಇಂಗ್ಲೆಂಡಿನವರು. ಪರದೇಸೀ, ಸೋರಿ, ಅನಿವಾಸಿ ಭಾರತೀಯರು. ನಮಗೆ... ನಮಗೆ ನಮ್ಮ ದೇಶ ಹಸ್ತಿನಾವತಿ...

**ನಾರದ:** ಐ ಮೀನ್ ಭಾರತ.

**ವಿಷ್ಣು:** ಕರೆಕ್ಟ್, ಭಾರತದ ಮೇಲೆ ಅಮಿತ ಪ್ರೀತಿ. ಅದು ಜಗತ್ತಿನ ಯಾವ ರಾಷ್ಟ್ರಕ್ಕೂ ಸಲಾಂ ಹೊಡೆಯಕೂಡದು. ಅಂಥಾ ರಕ್ಷಣಾ ವ್ಯವಸ್ಥೆ ಬೇಕು. ಹಾಗೆ ಜಗತ್ತಿನ ಯಾವ ದೇಶದಲ್ಲೂ ಇಲ್ಲದ ಶಸ್ತ್ರಾಸ್ತ್ರ ನಮ್ಮಲ್ಲಿದೆ. ನಮ್ಮ ಕಂಪನಿ ಹೆಸರು ವಜ್ರಾಯುಧ ಆ್ಯಂಡ್ ಕಂಪನಿ ಲಿಮಿಟೆಡ್.

**ಸೆಕ್ಷನ್ ಆಫೀಸರ್:** ನೋಡಿ ಮಹಾಶಯರೆ, ಇಲ್ಲಿ ಅನೇಕ ಕಂಪನಿಗಳು ಬರುತ್ತವೆ. ಹಾಗೆ ನಮಗೆ ಶಸ್ತ್ರಾಸ್ತ್ರಗಳ ಅವಶ್ಯಕತೆಯೂ ಇದೆ. ಆದರೆ ಈ ಎಲ್ಲಾ ವ್ಯವಹಾರ ಅಷ್ಟು ಸರಳವಲ್ಲ, ಉದಾಹರಣೆಗಾಗಿ ನಾನೇ, ನಾನು ಇಲ್ಲಿ ಈ ವ್ಯವಹಾರ ಕುದುರಿಸಲು ಯಾರು ಯಾರನ್ನ ಭೆಟ್ಟಿಯಾಗಬೇಕೆಂದು ಹೇಳಬಲ್ಲೆ.

**ವಿಷ್ಣು:** ಅದೇ ಸSರ್, ನೀವು ಮಾಹಿತಿ ಕೊಡದಿದ್ದರೆ ನಾವು ಮುಂದಡಿ ಇಡುವಂತೆಯೇ ಇಲ್ಲ, ವ್ಯವಹಾರ ಅಂದ ಮೇಲೆ ಅದೆಲ್ಲ ಇರುವುದೇ ಹೇಳಿ ಸSರ್, ನಿಮ್ಮ ಡಿಮಾಂಡ್ ?

**ಸೆಕ್ಷನ್ ಆಫೀಸರ್:** ಹತ್ತು ಸಾವಿರ ರೂಪಾಯಿ ಮೊದಲು ಕೊಡಿ, ನಂತರ ಎಲ್ಲಾ...

**ನಾರದ:** ಸರಿ, ಸSರ್, ನಮ್ಮ ಚೀಫ್ ಆಫೀಸರ್ ಹೇಳಿದ್ದಾರೆ, 'ಗೊ ಆನ್' ಎಂದು ತಗೊಳ್ಳಿ (ನೋಟಿನ ಕಂತೆ ಕೊಡುವನು).

**ಸೆಕ್ಷನ್ ಆಫೀಸರ್:** ಓ.ಕೇ. ನೋಡಿ, ಇಲ್ಲಿ ಒಬ್ಬಿಬ್ಬರನ್ನು ಹಿಡಿದರೆ ಸಾಗದು. ಹಾಗೆಯೇ ಒಬ್ಬರಿಗೆ ಭೆಟ್ಟಿ ಆಗಿದ್ದೇನೆಂದು ಮತ್ತೊಬ್ಬರಿಗೆ ಹೇಳಕೂಡದು. ಹಾಗಂತ ಎಲ್ಲರಿಗೂ ಗುಮಾನಿ ಇದ್ದೇ ಇರುತ್ತದೆ.

ಆದರೂ ಇದು ಇಲ್ಲಿಯ ಪಾಲಿಸಿ.

**ವಿಷ್ಣು:** ಹೇಳಿ ಸSರ್.

**ಸೆಕ್ಷನ್ ಆಫೀಸರ್:** ಮೊದಲು ನೀವು ಭೆಟ್ಟಿಯಾಗಬೇಕಾದುದು ಬ್ರಿಗೇಡಿಯರ್ ಶ್ರೀಮಾನ್ ಶನಿಗಳ್ ಮತ್ತು ಸೇನಾಧಿಕಾರಿ ಲೆಫ್ಟಿನಂಟ್ ಕರ್ನಲ್ ಶ್ರೀಮಾನ್ ಅವಿಶ್ವಾಸ್.

**ನಾರದ:** ಅವಿಶ್ವಾಸ್ ! ?

**ಸೆಕ್ಷನ್ ಆಫೀಸರ್:** ಹೌದು ಸಾರ್, ಜಟ್ಟು, ಗಣ್ಣು, ದುರ್ಗಿ, ಮರ್ಗಿ ಹೆಸರೆಲ್ಲಾ ಮೊದಲಾಯ್ತು. ಈಗೆಲ್ಲಾ ಅವಿಶ್ವಾಸ್, ವಿಷಕಂಠ, ವಿಶ್ವಾಸಘಾತಕನವರ್ ಇತ್ಯಾದಿ ಇತ್ಯಾದಿ.

**ಸೆಕ್ಷನ್ ಆಫೀಸರ್:** ಎಲ್ಲಾ ಮಾಡರ್ನ ಫ್ಯಾಶನ್.

**ವಿಷ್ಣು:** ಥ್ಯಾಂಕ್ಯು ಸSರ್.

**ನಾರದ :** ಮತ್ತೆ ಭೆಟ್ಟಿಯಾಗೋಣ.

**ಸೆಕ್ಷನ್ ಆಫೀಸರ್:** ಓ. ಕೇ.

( ಬ್ರಿಗೇಡಿಯರ್ ಮತ್ತು ಕರ್ನಲ್ ಕಛೇರಿ)

**ನಾರದ:** ನಮಸ್ಕಾರ, ನಾನು ನಾರದಾಚಾರ್ಯ, ಇವರು...

**ವಿಷ್ಣು:** ವಿಷ್ಣುಮೂರ್ತಿ.

**ಬ್ರಿಗೇಡಿಯರ್:** ನಾನು ಬ್ರಿಗೇಡಿಯರ್. ಶನಿಗಳ್ ಅಂತ. ಇವರು ಕರ್ನಲ್ ಅವಿಶ್ವಾಸ್.

(ಕೈ ಕುಲುಕುವರು)

**ವಿಷ್ಣು:** ನಾವು ವಜ್ರಾಯುಧ ಆ್ಯಂಡ್ ಕಂಪನಿ ಲಿಮಿಟೆಡ್, ಇಂಗ್ಲೆಂಡ್. ನಮ್ಮದು ಶಸ್ತ್ರಾಸ್ತ್ರ ತಯಾರಿ ಕಂಪನಿ. ನಿಮ್ಮ ಕಾರ್ಗಿಲ್ ಯುದ್ಧವನ್ನು ಗಮನಿಸಿದ್ದೇವೆ.

**ಕರ್ನಲ್:** ನೀವೇನು



ಪಾಕಿಸ್ತಾನದ ಸಿ ಐ ಡಿ ಗಳೊ ?

**ನಾರದ:** ವೆರಿ ವೆರಿ ಸೋರಿ. ತಪ್ಪು ತಿಳಿಯಬೇಡಿ. ನಮ್ಮದು ಶಸ್ತ್ರಾಸ್ತ್ರ ತಯಾರಿಕಾ ಕಂಪನಿ ಅಂದ ಮೇಲೆ ಎಲ್ಲೆಲ್ಲಿ ಯುದ್ಧಗಳಾಗುತ್ತವೊ ಅಲ್ಲೆಲ್ಲಾ ನಮ್ಮ ಕ್ಯಾಮರಾ ಕಣ್ಣು ಓಡಾಡುತ್ತದೆ. ಅಲ್ಲಿಯ ಸೋಲು ಗೆಲುವುಗಳನ್ನು ವಿಶ್ಲೇಷಿಸುತ್ತೇವೆ.

**ಬ್ರಿಗೇಡಿಯರ್:** ಹಾಗಾದರೆ ಕಾರ್ಗಿಲ್ ಯುದ್ಧದಲ್ಲಿ ಏನು ಕೊರತೆ ಕಂಡಿರಿ ? ಯುದ್ಧ ಗೆದ್ದವರು ನಾವೆ.

**ವಿಷ್ಣು:** ಅದು ಸರಿ ಸರ್, ಕಂಗ್ರ್ಯಾಚುಲೇಶನ್ಸ್. ನಿಮ್ಮಂಥ ಬ್ರಿಗೇಡಿಯರಿರದಿದ್ದರೆ ಸಾಧ್ಯವಾಗ್ತಾ ಇರಲಿಲ್ಲ.

**ಕರ್ನಲ್:** ಫೀಲ್ಡನಲ್ಲಿ ಇದ್ದವ ನಾನು ಸರ್.

**ನಾರದ:** ಸರಿ ಸರಿ, ನಿಮ್ಮ ಮಹತ್ವ ಏನೆಂದು ಕಾರ್ಗಿಲ್ ತೋರಿಸಿದೆ. ನೀವು ಮೊದಲು ನಿರ್ಲಕ್ಷ್ಯ ಮಾಡಿದ್ದಕ್ಕೇ ಅಲ್ವಾ ? ಮೊದಲು ನೂರಾರು ಸೈನಿಕರು ಸತ್ತದ್ದು ?

**ಕರ್ನಲ್:** ನೀವು ಸರಿಯಾಗಿ ಗ್ರಹಿಸಿದ್ದೀರಿ. ನಮ್ಮ ಲಕ್ಷ್ಯಕ್ಕೆ ಇರುವ ಮಹತ್ವ ಎಷ್ಟೆಂಬುದು ಅದರಿಂದ ಗೊತ್ತಾಗುತ್ತದೆ. ಈಗ ನಿಮ್ಮ ಶಸ್ತ್ರಾಸ್ತ್ರದ ಬಗ್ಗೆ ಹೇಳಿ.

**ವಿಷ್ಣು:** ನಮ್ಮಲ್ಲಿ ಎರಡು ತರಹದ ಶಸ್ತ್ರಾಸ್ತ್ರಗಳಿವೆ. ಒಂದು ಚಕ್ರಾಯುಧ. ಇದು ಅದ್ಭುತವಾದುದು. ಮುಷ್ಟಿಯಲ್ಲಿ ಹಿಡಿಯಬಹುದು. ಹೀಗೆ ಸೂರ್ಯನಿಗೆ ಅಡ್ಡ ಮಾಡಿದರೆನ್ನಿ ಅದು ಆ ಉಷ್ಣತೆಯನ್ನು ಹೀರಿ ತನ್ನ ಕಾರ್ಯವೆಸಗುತ್ತದೆ. ಅಂದರೆ ಅದರ ವಿರುದ್ಧ ಪಕ್ಷದ ಸೈನಿಕರಿಗೆ ಸೂರ್ಯ ಕಾಣುವುದಿಲ್ಲ. ಕತ್ತಲೆ ಆವರಿಸುತ್ತದೆ - ಗ್ರಹಣದ ಹಾಗೆ.

**ಬ್ರಿಗೇಡಿಯರ್:** ಅದ್ಭುತ ತಂತ್ರಜ್ಞಾನ.

**ನಾರದ:** ಅದು ಚಕ್ರವ್ಯೂಹ.

**ಕರ್ನಲ್:** ಚಕ್ರವ್ಯೂಹ ?

**ನಾರದ:** ಅದೇ ಮಹಾಭಾರತದಲ್ಲಿ ಅಭಿಮನ್ಯು ಹತ್ಯೆಯಿಂದಾಗಿ ಸಿಟ್ಟು ಮಾಡಿದ ಅರ್ಜುನ ಸೂರ್ಯ ಮುಳುಗುವುದರೊಳಗೆ ಅಭಿಮನ್ಯುವಿನ ಮರಣಕ್ಕೆ ಕಾರಣನಾದ ಸೈಂಧವನನ್ನು ಕೊಲ್ಲದಿದ್ದರೆ ತಾನೇ ಅಗ್ನಿಯಲ್ಲಿ ಹಾರಿ ಸತ್ತುಹೋಗುತ್ತೇನೆ ಎಂದು ಪ್ರತಿಜ್ಞೆ ಮಾಡಿದ್ದ. ಸಾಯಂಕಾಲದವರೆಗೆ ಯುದ್ಧ ಮಾಡಿದರೂ ಸೈಂಧವ ಕಣ್ಣಿಗೆ ಬೀಳದಾದ. ಆಗ ಕೃಷ್ಣ ಚಕ್ರಾಯುಧವನ್ನು ತೆರೆದಿದ್ದೆ, ಸೂರ್ಯ ಮರೆಯಾಗಿ ಕತ್ತಲಾವರಿಸಿತು. ಸೂರ್ಯಸ್ತವಾಯಿತೆಂದು ತಿಳಿದ ಸೈಂಧವ ಅರ್ಜುನ ಸಾಯುವುದನ್ನು ನೋಡಲು ಓಡೋಡಿ ಮುಂಚೂಣಿಗೆ ಬಂದ. ಕೃಷ್ಣ ಚಕ್ರಾಯುಧವನ್ನು ಕೈ ಒಳಗುಮಾಡಿದ. ಝಗ್ ಎಂದು ಸೂರ್ಯ ಬೆಳಗಿತು. ಸೈಂಧವನ ಕುತ್ತಿಗೆ ಕಚಕ್ ಎಂದು ಉರುಳಿತು.

**ಕರ್ನಲ್:** ಅದ್ಭುತ ತಂತ್ರಜ್ಞಾನ !

**ವಿಷ್ಣು:** ಅಂಥ ತಂತ್ರಜ್ಞಾನ ಅಳವಡಿಸಿದ್ದಾರೆ ಸರ್. ನಮ್ಮ ಪುರಾಣ ಕಾಲದಲ್ಲೆ ಎಂತೆಂಥ ತಂತ್ರಜ್ಞಾನ ಬೆಳವಣಿಗೆ ಇತ್ತು ನೋಡಿ. ಶುದ್ಧ ದೇಶೀಯ, ಶುದ್ಧ ಭಾರತೀಯ.

**ಬ್ರಿಗೇಡಿಯರ್:** ಆದರೂ ವಿಚಾರ ಸೂಕ್ಷ್ಮದ್ದು. ಬೇರ ಕಡೆ ಮಾತುಕತೆ ಏರ್ಪಡಿಸಿ. ಇಲ್ಲಿ ಬೇಡ.

**ವಿಷ್ಣು:** ಸರಿ ಸರ್, ನಮ್ಮ ಬಾಸ್ 'ಸಾಡೇ ಸಾತ್ ಸ್ಟಾರ್' ಹೋಟೇಲಿನಲ್ಲಿದ್ದಾರೆ.



**ಕರ್ನಲ್:** ಅಲ್ಲೇ ಭೆಟ್ಟಿ ಏರ್ಪಾಡು ಮಾಡಿ.

**ನಾರದ:** ಸರಿ. ಈಗ ಸಂಚಕಾರವಾಗಿ ಇದು ತೆಗೆದುಕೊಳ್ಳಿ.

(ನೋಟಿನ ಕಂತೆ ಕೊಡುವರು)

**ಬ್ರಿಗೇಡಿಯರ್ ಮತ್ತು ಕರ್ನಲ್:** ಥ್ಯಾಂಕ್ಸ್. ಥ್ಯಾಂಕ್ಸ್.

**ಬ್ರಿಗೇಡಿಯರ್:** ಜೊತೆಗೆ ಬರ್ಜರಿ ಊಟ.

**ಕರ್ನಲ್:** ಫಾರಿನ್ ಸ್ಕಾಚ್ ಇರಲಿ.

**ವಿಷ್ಣು:** ಅದು ನಮ್ಮ ಕರ್ತವ್ಯ ಅಲ್ಲವೇ ಸರ್ ?

**ನಾರದ:** (ಬದಿಗೆ ಸರಿದು) ಏನು ದೇವರೆ ! ಫಾರಿನ್ ಕಾಚ್ ಬೇಕು ಎಂದರೆ ಅದು ನಮ್ಮ ಕರ್ತವ್ಯ ಅಂದು ಬಿಟ್ಟಿರಲ್ಲ ?

**ವಿಷ್ಣು:** ಕಾಚ್ ಅಲ್ಲಯ್ಯ ಸ್ಕಾಚ್. ಸ್ಕಾಚ್ ಅಂದರೆ ನಮ್ಮ ಲೋಕದಲ್ಲಿ 'ಮಧುಪಾನ' ಅನ್ನುದಿಲ್ವೆ, ಅದು. ಶ್ರೇಷ್ಠ ತರಗತಿಯ ಹೆಂಡ. ನಿನಗೂ ಸ್ಕಾಚು ಅಂದರೂ ಗೊತ್ತಿಲ್ಲ ಕಾಚು ಅಂದರೂ ಗೊತ್ತಿಲ್ಲ. ಶುದ್ಧ ಬ್ರಹ್ಮಚಾರಿ. ನನಗೆ ಅವೆಲ್ಲ...

**ನಾರದ:** ಅಯ್ಯೊ ಅಯ್ಯೊ, ದೇವರೆ, ಶರಣು ಶರಣೂ, ನಿಮ್ಮ ಕೃಷ್ಣಾವತಾರದಲ್ಲಿ... (ಇಬ್ಬರೂ ನಗುತ್ತ ಬೇರೆ ಕಡೆ)

**ವಿಷ್ಣು:** ನಮಸ್ಕಾರ. ನಾನು ವಿಷ್ಣುಮೂರ್ತಿ, ಇವರು ಶ್ರೀಮಾನ್ ನಾರದಾಚಾರ್ಯ.

**ಗುಪ್ತ:** ನನ್ನ ಹೆಸರು ಗುಪ್ತರೋಗಿ ಅಂತ. ನಾನು ಪ್ರಧಾನಿಗಳಿಗೆ ಆಪ್ತ. ಇಲ್ಲಿಯ ವ್ಯವಹಾರವೆಲ್ಲ



ನಡೆಯುವುದು ಗುಪ್ತರೋಗಿಯಿಂದಲೇ. ನಾನು ನಿಮಗೆ ಎಲ್ಲವನ್ನು ಹೇಳ್ತೇನೆ. ನಾನು ಈ ಪಕ್ಷದ ಜೆನ್ನೆಲುಬು ಇದ್ದಹಾಗೆ.

**ವಿಷ್ಣು:** ನಮ್ಮ ಶಸ್ತ್ರಾಸ್ತ್ರ ಕಂಪನಿ ಬಗ್ಗೆ...

**ಗುಪ್ತ:** ನನಗೆ ತಿಳಿದಿದೆ. ಆದರೆ ಒಂದು ಮಾತು, ನಾವು ದೊಡ್ಡ ಮೀನುಗಳನ್ನು ಮಾತ್ರ ಹಿಡಿತೇವೆ.

**ವಿಷ್ಣು:** ನಾವೂ ಅಷ್ಟೇ, ಚಿಲ್ಲರೆ ಮೀನುಗಳನ್ನು ಹಿಡಿಯೋದಿಲ್ಲ (ಎಲ್ಲರ ನಗು). ಮುಂದೆ ಹೇಳಿ.

**ಗುಪ್ತ:** ಮೂವತ್ತೈದು ಪರ್ಸೆಂಟೇಜ್. ಇಲ್ಲಿ ಹೇಗೆ ಕೆಲಸ ಸಾಗ್ತದೆ ಅಂದ್ರೆ, ಈ ಸಂಬಂಧ ಪಟ್ಟ ರಾಜಕಾರಣಿಗಳಿಗೆ ನಾಲ್ಕು ಪರ್ಸೆಂಟ್, ಅಧಿಕಾರಿಗಳಿಗೆ ಎರಡು ಪರ್ಸೆಂಟ್. ನೀವು ನನ್ನ ಹತ್ತಿರ ಕೊಡಿ, ನಾನೇ ಎಲ್ಲಾ ವ್ಯವಸ್ಥೆ ಮಾಡುತ್ತೇನೆ.

**ವಿಷ್ಣು:** ಸರ್ ರಕ್ಷಣಾಮಂತ್ರಿಗಳು ತೆಗೆದುಕೊಳ್ಳೋದಿಲ್ವೆ ?

**ಗುಪ್ತ:** ರಕ್ಷಣಾ ಮಂತ್ರಿ ಒಂದೆರಡು ಪರ್ಸೆಂಟ್. ಆದರೆ ನೇರ ಅಲ್ಲ, ಅವರ ಕಛೇರಿಯಲ್ಲಿ ಶೆಟ್ಟಿ ಅಂತ ಒಬ್ಬರಿದ್ದಾರೆ.

**ನಾರದ:** ಅವರೆಲ್ಲ ಸಮಾಜವಾದಿಗಳಲ್ವೆ ?

**ಗುಪ್ತ:** ಮತ್ತೆ ನಮ್ಮದು ಏನಂತೀರಿ, ಶುದ್ಧ ಭಾರತೀಯ ಸಮಾಜವಾದಿ ಪಕ್ಷ. ಎಲ್ಲಾ ವ್ಯಾಧಿಗಳ ಹಾದಿಯೂ ಒಂದೇ ಸರ್, ಅದನ್ನು ನಾನು ನೋಡಿಕೊಳತೇನೆ.

**ವಿಷ್ಣು :** ಓ. ಕೆ. ಮುಂದೆ ಹೇಳಿ.

**ಗುಪ್ತ:** ನನ್ನ ಕಮಿಶನ್ ಮೂವತ್ತು ಲಕ್ಷ. ನಿಮ್ಮ ವ್ಯವಹಾರ ನಲ್ವತ್ತ ಕೋಟಿಯದು ಆದ್ಮೇಲೆ ಇದು ಕಡಿಮೆಯೇ.

**ವಿಷ್ಣು:** ಸರಿ. ಇದು ಅಡ್ವಾನ್ಸ್ ಒಂದು ಲಕ್ಷ.

**ಗುಪ್ತ:** ನಮ್ಮ ಅಸತ್ಯಮೂರ್ತಿ ಕರೆದುಕೊಂಡು ಹೋಗತಾನೆ.

**ಅಸತ್ಯಮೂರ್ತಿ:** ಬನ್ನಿ ಸರ್, ಹೀಗೆ ಬನ್ನಿ. ಇವರು ನಮ್ಮ ಪಕ್ಷದ ಅಧ್ಯಕ್ಷರು.

**ವಿಷ್ಣು ಮತ್ತು ನಾರದ:** ನಮಸ್ಕಾರ.

**ಅಸತ್ಯಮೂರ್ತಿ:** (ಪರಿಚಯಿಸುತ್ತ) ಇವರು ವಜ್ರಾಯುಧ ಕಂಪನಿಯ ಅಸಿಸ್ಟೆಂಟ್ ಡೈರೆಕ್ಟರು. (ಅಧ್ಯಕ್ಷರ ಕಡೆ ತೋರಿ) ಇವರು ಸರಕಾರ ಪಕ್ಷದ ಅಧ್ಯಕ್ಷರು.

**ಅಧ್ಯಕ್ಷರು:** ನಮಸ್ಕಾರ

**ಅಸತ್ಯಮೂರ್ತಿ:** ಸಾರ್, ಹೊರಗೆ ಕಾಣಲು ಕಬ್ಬಿಣದ ಹಾಗೆ. ಒಳಗೆ ಬಂಗಾರ್, ಒಳಗೆಲ್ಲಾ ಬಂಗಾರ. ಅದಕ್ಕೆಂತ್ಲೇ ಜನರೆಲ್ಲ ಮುದ್ದಿನಿಂದ ನಮ್ಮ 'ಬಂಗಾರೂ' ಅಂತ ಕರಿತಾರೆ.

**ವಿಷ್ಣು:** ನಮ್ಮದು ಶಸ್ತ್ರಾಸ್ತ್ರ ತಯಾರಿ ಕಂಪನಿ ಸರ್, ನಮ್ಮಲ್ಲಿ ವಿಶೇಷವಾದ ಪ್ರಾಡಕ್ಟ್ ಉಂಟು: ಒಂದು ಚಕ್ರಾಯುಧ, ಎರಡನೆಯದು ಶಬ್ದವೇಧಿ. ಹಿಂದೆ ದಶರಥ ಮಹಾರಾಜ ಉಪಯೋಗಿಸಿದ್ದ. ಪರದೆಯ ಆಚೆ, ಬೆಟ್ಟದ ಆಚೆ, ಹಿಮಾಲಯದ ಮಂಜಿನ ಆಚೆ ಇರುವ ವೈರಿಗಳನ್ನು ಚಲನವಲನದ ಶಬ್ದವನ್ನು ಕೇಳೀ ಹೊಡೆದುರುಳಿಸ ಬಹುದು. ಮತ್ತೆ ಶುದ್ಧ ಪ್ರಾಚೀನ. ಖರೆ ಎಂದರೆ ಕಾರ್ಗಿಲ್ ಯುದ್ಧದಲ್ಲಿ ಇಂಥ ಅಸ್ತ್ರ ಇದ್ದಿದ್ದರೆ ನಿಮ್ಮಲ್ಲಿಯ ನೂರಾರು ಸೈನಿಕರ ಸಾವನ್ನು ತಡೆಯಬಹುದಿತ್ತು.

**ಬಂಗಾರು:** ಹಾಗೆ ನೂರಾರು ಜನ ಸೈನಿಕರು

ಸತ್ತಿರದಿದ್ದರೆ ನಮ್ಮ ಗೆಲುವಿನ ಮಹತ್ವವೇ ಬರ್‍ತಾ ಇರಲಿಲ್ಲ, ಅದು ಬಿಡಿ.

**ವಿಷ್ಣು:** ಅದೂ ಹೌದು. ಎಷ್ಟೋ ಜವಾನರೊ ಜನರೊ ಸಾಯ್ತಾರೆ. ಅದೆಲ್ಲ ದೊಡ್ಡ ಲೆಕ್ಕದ್ದಲ್ಲ. ಉದಾಹರಣೆಗಾಗಿ ಕೃಷ್ಣ ಕಂಸನನ್ನು ಕೊಂದಿದ್ದೆಂದಿಟ್ಟುಕೊಳ್ಳಿ. ಕೃಷ್ಣ ನೇರ ಹೋಗಿ ಕಂಸನನ್ನು ಕೊಲ್ಲಬಹುದಿತ್ತು. ಹಾಗೆ ಮಾಡಿದರೆ ಚಮತ್ಕಾರ ಏನು ಬಂತು? ಯಾರು ಮೆಚ್ಚುತ್ತಿದ್ದರು ? ಆದರ ಬದಲಾಗಿ ಕಂಸನಿಂದ ಅನೇಕ ಜನರನ್ನು ಕೊಲ್ಲಿಸಿ, ಕಂಸ ಕ್ರೂರಿ, ರಾಕ್ಷಸ ಎಂದೆಲ್ಲ ಹೆಸರು ಕೆಡುವಂತೆ ಮಾಡಿ ನಂತರ ಕೊಂದಿದ್ದರಿಂದಲೇ ಕೃಷ್ಣನ ಗುಣಗಾನ ಇನ್ನೂ ಹೆಚ್ಚುತ್ತಲೇ ಇದೆ.

**ಬಂಗಾರು:** ಅದಿರಲಿ. ನಾನು ಪಾರ್ಟಿಯ ಅಂದರೆ ಭಾರತೀಯ ಭಜನೆ ಪಾರ್ಟಿಯ ಯಜಮಾನ. ಪಾರ್ಟಿ ಫಂಡ್ ಅಂತ ಕೊಡಬೇಕಾಗಿದೆ.

**ನಾರದ:** ಅದಕ್ಕೆ ನಮ್ಮ ಒಪ್ಪಿಗೆಯಿದೆ. ನಾವೇನೂ ಶೂನ್ಯ ಬುದ್ಧಿಯವರಲ್ಲ. ತಮ್ಮ ಮಹತ್ವ ಏನು ಎಂದು ನಾವು ತಿಳಿದಿದ್ದೇವೆ. ನಾವು ಗುಪ್ತರೋಗಿ ಅವರಿಗೆ ಕೊಟ್ಟಿದ್ದೇವೆ. ರಕ್ಷಣಾ ಮಂತ್ರಿಗಳ ಉಪಕಾರ್ಯದರ್ಶಿಗಳಿಗೂ ಕೊಟ್ಟಿದ್ದೇವೆ. ಅದೂ, ಹಿಂದೆ ದಿಲ್ಲಿಯಲ್ಲಿ ಮುಖ್ಯಮಂತ್ರಿ ಆಗಿದ್ದ ಕುಂಟ ಸಿಂಗ್ ಮೂಲಕ.

**ಬಂಗಾರು:** (ಮೆಲ್ಲನೆ ನಗುತ್ತಾರೆ) ಹಾಗಂತ ಅವರ ದೇಶಭಕ್ತಿಯನ್ನು ಸಂಶಯಿಸುವಂತಿಲ್ಲ ಸರ್.

**ನಾರದ:** ಛೆ, ಛೇ, ಎಲ್ಲಾ ದೇಶಭಕ್ತಿಯದೇ ಜಾಲ.

**ಬಂಗಾರು:** ನಮ್ಮ ಅಸತ್ಯಮೂರ್ತಿಯ ಸಹಾಯ ತೆಗೆದುಕೊಳ್ಳಿ.

**ನಾರದ:** ನಾಳೆ ನಮ್ಮ ಬಾಸ್‌ರನ್ನು ಭೆಟ್ಟಿ ಮಾಡಿಸುತ್ತೇವೆ. ಈಗ ಸದ್ಯಕ್ಕೆ ಇದು ಹೊಸವರ್ಷದ ಕಾಣಿಕೆಯಾಗಿ(ನೋಟಿನ ಗಂಟು).

**ಬಂಗಾರು:** ಬನ್ನಿ , ಮತ್ತೆ ಭೆಟ್ಟಿಯಾಗೋಣ.

**ಸೂತ್ರಧಾರ:** (ಮುಂದೆ ಬಂದು) ನೋಡಿ ದೇವಲೋಕದವರೆ, ನಿಮ್ಮನ್ನೇನೋ ನಮ್ಮ ನಾಟಕದಲ್ಲಿ ಸೇರಿಸಿಕೊಂಡದ್ದಾಯಿತು. ನೀವು ಪಸಂದಾಗೇ ಆಕ್ಟ್ ಮಾಡಿದ್ದೀರಿ, ಆದರೆ ಉದ್ದವಾಯಿತು. ಜನರಿಗೆ ಬೋರ್ ಹೊಡೆಯಲು ಶುರುವಾಗಿದೆ. ಇನ್ನು ಕಲ್ಲು ಹೊಡೆಯಲು ಶುರು ಮಾಡುತ್ತಾರೆ.

(ವಿಶ್ವಾಮಿತ್ರ ಋಷಿಯ ಪ್ರವೇಶ, ಪೌರಾಣಿಕ ಉಡುಪು)

**ವಿಶ್ವಾಮಿತ್ರ** : ಸೂತ್ರಧಾರಾ, ಸೂತ್ರಧಾರ, ತಡೆ, ತಡೆ, ನಾಟಕ ಮುಗಿಸುವ ಮೊದಲು ನನ್ನದೂ ಒಂದು ಪಾತ್ರ ಸೇರಿಸಿಕೊ.

ವಿಷ್ಣು ದೇವರೆ, ನಾರದ ಮುನಿಗಳೆ, ಆಯಿತೇ ನಿಮ್ಮ ಮುಖಕ್ಕೆ ಮಂಗಳಾರತಿ ! ಈ ವಿಷ್ಣುದೇವರು ತಾನು ಭಾರತದಲ್ಲಿ ದಶಾವತಾರ ಮಾಡಿ ಸತ್ಯ, ನ್ಯಾಯ ನೆಲೆಸುವಂತೆ ಮಾಡಿದ್ದೇನೆ, ಸನಾತನ ಭಾರತದಲ್ಲಿ ಸತ್ಯ ತುಳುಕಾಡುತ್ತಿದೆ ಎಂದೆಲ್ಲ ಕೊಚ್ಚಿಕೊಂಡರಲ್ಲ ದೇವಲೋಕದಲ್ಲಿ ? ಅದನ್ನೇ ನಂಬಿ ನನ್ನಲ್ಲಿ ಪಂಥ ಮಾಡಿ, ಆದರ ಸತ್ಯಾಸತ್ಯತೆಯನ್ನು ಪರೀಕ್ಷಿಸಲು ನೀವಿಬ್ಬರೂ ಬಂದಿರಲ್ಲ ? ಈಗ ಏನಾಯಿತು ? ಮುಖಕ್ಕೆ ಮಂಗಳಾರತಿ ಆಗಲಿಲ್ಲವೇ ನಿಮಗೆ, ಹಹಹ. ಈಗ ಈ ಸನಾತನ ಸರಕಾರ ಏನು ಹೇಳುತ್ತದೆ ಗೊತ್ತಾ ? ಇವೆಲ್ಲ ಪ್ರತಿಪಕ್ಷದವರ ಪಿತೂರಿಯಂತೆ. ಕಂಪನಿಯವರನ್ನು ಶಿಕ್ಷಿಸುತ್ತಾರಂತೆ !

**ಸಂಗಾತಿ:** ಆಂ, ಕಳ್ಳರನ್ನು ಬಿಟ್ಟು ಕಳ್ಳರನ್ನ ಹಿಡಿದವರನ್ನೇ ಶಿಕ್ಷಿಸುತ್ತಾರಾ ?

**ನಾರದ:** ವಿಶ್ವಾಮಿತ್ರರೇ, ನನಗೆ ಈ ಹಣೇ ಬರಹ ಮೊದಲೇ ಗೊತ್ತಿತ್ತು. ಆದರೆ ಅದನ್ನ ನಮ್ಮ ದೇವರಿಗೆ ಮನದಟ್ಟು ಮಾಡಲೆಂದೇ ಪಂಥದ ಆಟ ಆಡಿದೆ. ಇಲ್ಲಿ ಆದದ್ದು ನನ್ನ ಮಾನಭಂಗವಲ್ಲ, 'ವೈಷ್ಣವ ಮಾನಭಂಗಂ'

**ವಿಷ್ಣು:** ಎಲಾ, ಎಲಾ, ನಾರದಾ ಕೊನೆಗೂ ನಿನ್ನ ಕುಚೇಷ್ಟೆ ಬಿಡಲಿಲ್ಲವಲ್ಲ ?

**ಸೂತ್ರಧಾರ:** ಎಲಾ, ಎಲಾ, ಹೀಗಾ?(ತಲೆಯ ಮೇಲೆ ಕೈ ಹೊತ್ತು ) ಹೀಗಾದರೆ ಈ ದೇಶದ ಗತಿಯೇನು ದೇವರೇ ?

**ಸಂಗಾತಿ:** ಸೂತ್ರಧಾರ, ಹೀಗಾದರೆ ದೇಶದ ಗತಿಯೇನು ಎಂದು ಜನ ಚಿಂತಿಸಲಿ, ನೀನು ಹೀಗೆ ರೋದನ ಮಾಡುವುದರಿಂದ ಏನು ಬಂತು ? ಪ್ರೇಕ್ಷಕರೇ, ಇದೋ ಇದೀಗ ವೈಷ್ಣವ ಮಾನಭಂಗಂ ಎಂಬ ಪೌರಾಣಿಕ ಬೀದಿ ನಾಟಕ ಮುಕ್ತಾಯವಾಯಿತು.

**ಸೂತ್ರಧಾರ:** ಆದರೆ ಜನಗಳೇ, ಮಹಾಜನಗಳೇ, ಮರೆಯಬೇಡಿ : 'ಹೀಗಾದರೆ ದೇಶದ ಗತಿಯೇನು ?'

**ಆರ್. ಎ. ಭಂಡಾರಿ**
ಅರೆಅಂಗಡಿ, ಕೆರೆಕೋಣ - ೫೮೧೪೩೦
ಹೊನ್ನಾವರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ

---

*(೪೦ನೇ ಪುಟದಿಂದ )*

ಒಳ ಕಿತ್ತಾಟಗಳಲ್ಲಿ ಮಗ್ನರೆಂಬುದು ಈಗಾಗಲೇ ತಿಳಿದ ವಿಚಾರ. ಹೀಗಿರುವಾಗ, ಒಬ್ಬ ವಿಚಾರವಂತ ಬ್ರಾಹ್ಮಣರೇ ಹೇಳಿದಂತೆ, ನಿಜವಾಗಿ ಅಸ್ಪೃಶ್ಯರು ಇವತ್ತು ಬ್ರಾಹ್ಮಣರೇ ! ಆದ್ದರಿಂದ ಅವರು ಕನಕನ ಕಿಂಡಿಯನ್ನು ತೆರೆದರೆಷ್ಟು ಮುಚ್ಚಿದರೆಷ್ಟು ? ಶೂದ್ರರು ನಿರ್ಲಕ್ಷಿಸಿದರೆ ಸಾಕು !

ಐತಿಹಾಸಿಕವಾಗಿ ನೋಡಿದರೆ 'ಕನಕನ ಕಿಂಡಿ'ಯನ್ನು ಮಾಧ್ವ ಪಂಡಿತರು ಏರ್ಪಡಿಸಿರುವುದಕ್ಕೆ ಕಾರಣವೊಂದು ಹೊಳೆಯುತ್ತದೆ. ''ತಲೆ ಸಿಡಿದು ಸಹಸ್ರ ಹೋಳಾದರೂ ಚಿಂತೆ ಇಲ್ಲ, ಅಂತ್ಯಜರಿಗೂ ವೇದಗಳನ್ನು ನಾನು ಹೇಳಿಯೇ ತೀರುತ್ತೇನೆ'' ಎಂದ ರಾಮಾನುಜಾಚಾರ್ಯರು ಮೇಲುಕೋಟೆಯ ದೇವಾಲಯದ ಬಾಗಿಲನ್ನು ಎಲ್ಲರಿಗೂ ತೆರದಿಟ್ಟ ವಿಚಾರವಂತರು. ಆದ ಪ್ರಯುಕ್ತ ಶ್ರೀವೈಷ್ಣವ ಮತ ಜನಪ್ರಿಯವಾಗತೊಡಗಿತು. ಇದನ್ನು ಯೋಚಿಸಿದ ಮಾಧ್ವರು ಶೂದ್ರವರ್ಗದ ಮೆಚ್ಚಿಗೆಯನ್ನು ಗಳಿಸಿಕೊಳ್ಳಲೋಸುಗ ಕೃಷ್ಣಮಂದಿರದ ನವೀಕರಣ ಮಾಡುವ ನೆಪದಲ್ಲಿ, ಹಿಂದಿನ ಗೋಡೆಗೆ ಕನ್ನ ಒಂದನ್ನು ಕೊರೆದು, ಶ್ರೀ ಕೃಷ್ಣ ಪ್ರತಿಮೆಯನ್ನು ಅತ್ತ ಮುಖ ಮಾಡಿಟ್ಟು (ಶಿಲಾಶಿಲ್ಪ ತಾನೆ ತಿರುಗುವುದುಂಟೆ !) ಅದಕ್ಕೆ ಕುರುಬರವನಾದ ಕನಕನ ಹೆಸರು ಕೊಟ್ಟು, ಬಹುಸಂಖ್ಯಾತರಾಗಿದ್ದ ಕುರುಬ ಜನಾಂಗವನ್ನು ತಮ್ಮ ಬುಟ್ಟಿಗೆ ಬೀಳಿಸಿಕೊಂಡು ತಮ್ಮ ಮಡಿವಂತಿಕೆಯನ್ನೂ ಮೆರೆಸಿದರು. ಪ್ರಳಯಾಂತಕ ಮೆದುಳು ! ಇಂಥ ಹೊಂದಾಣಿಕೆ ಪ್ರಾಚೀನ ಭಾರತದಲ್ಲಿ ತೀರ ಸಹಜವೇ.

ಆದರೆ ಈಗ ಬನ್ನಂಜೆ ಗೋವಿಂದಾಚಾರ್ಯರಂತಹ ವಿಪ್ರೋತ್ತಮರು ಜನರನ್ನೆಲ್ಲ ಮೂರ್ಖರೆಂದು ಭಾವಿಸಿ ರಾಷ್ಟ್ರದ ಸಾಮರಸ್ಯವನ್ನೇ ಹಾಳುಮಾಡಲು ಹೊರಟಿರುವುದು ಎಂಥ ವಿಪರ್ಯಾಸ ? ಯಾಕೆ ಹೀಗೆಲ್ಲಾ ಬಾಲಿಶವಾಗಿ ವರ್ತಿಸುತ್ತಾರೆ ? ಬಹುಶಃ ಜನತಾಂತ್ರಿಕ ಆಳ್ವಿಕೆಯಲ್ಲಿ ಅಪ್ರಸ್ತುತವಾಗುತ್ತಿರುವ ತಮ್ಮ ಸಮೂಹ ತನ್ನ ಅಸ್ತಿತ್ವವನ್ನು ಕಾಪಾಡಿಕೊಳ್ಳಲೋಸುಗ ಇಂತಹ ಕಥೆ ಕಟ್ಟುತ್ತಾರೊ ? ಯಾಕೆಂದರೆ ಕೀಳರಿಮೆಗೆ ಸಂದ ಜನ ಏನಾದರೂ ಮಾಡಿ ನಾವೂ ಜೀವಂತ ಇದ್ದೇವೆ ಎಂಬುದನ್ನು ಸಾದರಪಡಿಸಲು ಹೀಗೆ ಮಕ್ಕಳಾಟಿಕೆಯಂತೆ ಚಡಪಡಿಸುತ್ತಾರೆ. ಅದರ ಒಂದು ಮಾದರಿ ಆಚಾರ್ಯರ 'ಕನಕನ ಕಿಂಡಿ'ಯ ಕುರಿತಾದ ಹೇಳಿಕೆ.

ಇಲ್ಲಿ ಇಷ್ಟೆಲ್ಲ ವಿಚಾರ ಮಾಡಿದ್ದು ಯಾಕೆಂದರೆ, ರಾಷ್ಟ್ರೀಯತೆ ಜನರನ್ನು ಒಗ್ಗೂಡಿಸುತ್ತದೆ, ಜಾತೀಯತೆ ಅವರನ್ನು ಒಡೆಯುತ್ತದೆ. ಇವತ್ತು ದೇಶದ ಉದ್ದಗಲಕ್ಕೆ ಸಮಸ್ಯೆಗಳೋ ಸಮಸ್ಯೆಗಳು ! ಒಂದೆಡೆ, ಜಾಗತೀಕರಣದ ಆಮಿಷಕ್ಕೆ ಸಿಕ್ಕಿದ ಜನನಾಯಕರು ಹಿಂದೆ ಮುಂದೆ ನೋಡದೆ ಆರ್ಥಿಕ ಉದಾರೀಕರಣಕ್ಕೆ ಬಾಗಿಲು ತೆರೆದುದರಿಂದ ದೇಶದ ಸಂಪನ್ಮೂಲಗಳು ವಿದೇಶೀ ಬಂಡವಾಳಗಾರರಿಂದ ಲೂಟಿ ಆಗುತ್ತಿವೆ; ಇನ್ನೊಂದೆಡೆ, ಮತೀಯ ಮೂಲಭೂತವಾದ ಪಂಜುರ್ಲಿ ಭೂತಗಳಂತೆ ಧೀಂಕಿಟ್ಟು ಕೋಮುಸೌಹಾರ್ದವನ್ನು ಹಾಳುಗೆಡವುತ್ತಿದೆ. ಮತ್ತೊಂದೆಡೆ, ಉದಾರ ಜನನಾಯಕರ ಅಭಾವದಿಂದಾಗಿ ಪ್ರಜಾಪ್ರಭುತ್ವ ಹಲವು ಹತ್ತು ಪಕ್ಷಾಡಳಿತದಿಂದ ದುರ್ಬಲವಾಗುತ್ತಿದೆ. ಇದರ ಪರಿಣಾಮವಾಗಿ ರೈತರು, ಕಾರ್ಮಿಕರು, ಕುಶಲಕರ್ಮಿಗಳು, ಸ್ತ್ರೀಯರು ಮೊದಲಾಗಿ ಅನೇಕರು ಆತ್ಮಹತ್ಯೆಯ ದಾರಿ ಹಿಡಿಯುತ್ತಿದ್ದಾರೆ. ಇದುವರೆಗೆ ತುಳಿತಕ್ಕೊಳಗಾದ, ಅವಮಾನಿತರಾದ ಅತ್ಯಂತ ಕೆಳಗಿನ ಮನುಷ್ಯರಿಗಾಗಿ ಈ ಮಠಾಧೀಶರು, ಜಗದ್ಗುರುಗಳು, ಸಂನ್ಯಾಸಿಗಳು ಏನು ಮಾಡುತ್ತಿದ್ದಾರೆ ? ಏನೇನೂ ಇಲ್ಲ. ಕುವೆಂಪು ಬಹಳ ಹಿಂದೆಯೇ ನಿರ್ಭಯವಾಗಿ ಹೇಳಿರುವಂತೆ, ಯಥಾಪ್ರಕಾರ, ಇವರು ಜನರ ಮೌಢ್ಯವನ್ನು ಬಳಸಿಕೊಂಡು ಪಾದಪೂಜೆ, ಅಡ್ಡ ಪಲ್ಲಕ್ಕಿ ಉತ್ಸವಗಳಲ್ಲಿ ನಿರತರಾಗಿ, ತಮ್ಮ ಮಠದ ವಟುಗಳಿಗೆ ಹೆಚ್ಚೆಂದರೆ ವೇದಶ್ಲೋಕಗಳನ್ನು ವ್ಯಾಖ್ಯಾನ ಮಾಡುತ್ತ (ಅದೂ ತಪ್ಪುತಪ್ಪಾಗಿ !), ಸಮಾರಾಧನೆಗಳಲ್ಲಿ ಉಂಡು ತೃಪ್ತರಾಗುತ್ತಿದ್ದಾರೆ, ಅಷ್ಟೆ. ಮತ್ತೆ ಮೇಲಿನ ವಿಚಾರಕ್ಕೆ ಬಂದರೆ 'ಕನಕನ ಕಿಂಡಿಯಂಥ ಧರ್ಮ-ರಾಜಕಾರಣ' ನೆಪ ಹಿಡಿದು ತಮ್ಮ ಮೇಲ್ಮೆಯನ್ನು ಸ್ಥಾಪಿಸುವವರ ವಿರುದ್ಧ ಸಾರ್ವಜನಿಕರು ಒಂದು ವರ್ಗದಂತೆ ಸಂಘಟಿತರಾಗಿ ತಮ್ಮ ಹಕ್ಕು-ಬಾಧ್ಯತೆಗೆ ಹೋರಾಡುವುದೇ ನಿಜವಾದ ಸ್ವಾತಂತ್ರ್ಯ.

**ಪ್ರೊ॥ ಶಿವರಾಮಯ್ಯ**
ನಂ. ೧೭೨, ಐಸಾಕ್ ರಸ್ತೆ, ಟೀಚರ್ಸ್ ಕಾಲೋನಿ
ನಾಗರಭಾವಿ, ಬೆಂಗಳೂರು-೭೨

# ಆಗಸದ ದ್ರಾಕ್ಷಿ ಗೊಂಚಲು

*ಹೊಸದೊಂದು ಧೂಮಕೇತು ಇಕೆಯಾ-ಝಾಂಗ್ ಬರಿಗಣ್ಣಿಗೆ ಕಾಣಬಹುದಾದಷ್ಟು ಪ್ರಕಾಶ ಪಡೆಯುವ ಭರವಸೆ ಮೂಡಿಸಿದೆ. ಮಾರ್ಚ್ ಮಧ್ಯದವರೆಗೂ ಸಂಜೆಯ ಆಕಾಶದಲ್ಲಿ ಪಶ್ಚಿಮ ದಿಗಂತದ ಅಂಚಿನಲ್ಲಿ ಕಾಣುವ ಇದು ಏಪ್ರಿಲ್ ಮೊದಲ ವಾರದಲ್ಲಿ ಬೆಳಗಿನ ಝಾವ ಪೂರ್ವದಂಚಿನಲ್ಲಿ ಕಾಣುವುದು. ೧೯೬೦ರಲ್ಲಿ ಬೆಳಗಿ ಚರಿತ್ರಾರ್ಹವಾದ ಧೂಮಕೇತು ಇಕೆಯಾ-ಸೆಕಿಯನ್ನು ಕಂಡುಹಿಡಿದ ಜಪಾನಿನ ಇಕೆಯಾ ಇದನ್ನು ಗುರುತಿಸಿದ್ದಾರೆ. ಅದೇ ಹೊತ್ತಿಗೆ ಚೀನಾದ ಝಾಂಗ್ ಸಹ ಇದನ್ನು ಸ್ವತಂತ್ರವಾಗಿ ಗುರುತಿಸಿದ್ದರಿಂದ ಇಬ್ಬರ ಹೆಸರೂ ಅದಕ್ಕೆ ಸೇರಿದೆ.*

**ಡಾ|| ಬಿ. ಎಸ್. ಶೈಲಜಾ**

**ಆ**ಕಾಶ ಶುಭ್ರವಾಗಿದೆಯೇ ಎಂದು ಪರೀಕ್ಷಿಸಲು ಕತ್ತೆತ್ತಿದರೆ ಕಾಣುವುದು ಒಂದು ದ್ರಾಕ್ಷಿ ಗೊಂಚಲು. ಈ ಸುಂದರ ನಕ್ಷತ್ರಗುಚ್ಛದತ್ತ ಒಮ್ಮೆ ಹೊರಳಿದ ದೃಷ್ಟಿ ಒಂದೆರಡು ಕ್ಷಣವಾದರೂ ಅಲ್ಲೇ ಉಳಿಯುವುದು ಸಹಜ. ಇದೇನಿರಬಹುದು ? ಎಂಬ ಪ್ರಶ್ನೆಯೂ ಏಳುತ್ತದೆ. ಇದಕ್ಕೆ ಪಾಶ್ಚಾತ್ಯರಲ್ಲಿ ಪ್ಲೈಯಡಿಸ್ ಎಂಬ ಹೆಸರಿದೆ. ವೃಷಭರಾಶಿಯ ಈ ನಕ್ಷತ್ರಗುಚ್ಛವನ್ನು ನಿಮ್ಮ ದೃಷ್ಟಿಯ ಪರೀಕ್ಷೆಗೂ ಬಳಸಬಹುದು. ಬೆಂಗಳೂರಿನಿಂದ ವಿದ್ಯುದ್ದೀಪದ ನೆರಳಲ್ಲಿ ನಿಂತು ಗಮನಿಸಿದರೆ ಐದಾರು ನಕ್ಷತ್ರಗಳು ಕಂಡುಬರುವುವು. ಬೆಳಕಿನ ಮಾಲಿನ್ಯವಿಲ್ಲದ ಪರಿಸರದಿಂದ ಆರು ನಕ್ಷತ್ರಗಳನ್ನು ಎಣಿಸಬಹುದು. ಆಕಾಶ ಶುಭ್ರವಾಗಿದ್ದು ಚಂದ್ರನ ಬೆಳಕೂ ಇಲ್ಲದಿದ್ದರೆ ಏಳನೆಯದನ್ನೂ ಗುರುತಿಸಬಹುದು.

ದುರ್ಬೀನು ಅಥವಾ ದೂರದರ್ಶಕದಿಂದ ಇದನ್ನು ನೋಡಿದಿರಾದರೆ ಮತ್ತೊಮ್ಮೆ ನೋಡೋಣ ಎನಿಸುತ್ತದೆ. ಕ್ಷೀಣವಾದ ನಕ್ಷತ್ರಗಳೂ ಕಾಣುತ್ತವೆ. ದೊಡ್ಡ ದೂರದರ್ಶಕಗಳಿಂದ ಹೆಚ್ಚು ಹೊತ್ತು ಎಕ್ಸ್‌ಪೋಷರ್ ಕೊಟ್ಟು ತೆಗೆದ ಚಿತ್ರಗಳಲ್ಲಿ ನಕ್ಷತ್ರಗಳ ಮೇಲೆ ತೆಳ್ಳನೆಯ ಮೋಡದಂತಹ ಕವಚ ಇರುವುದು ಕಂಡುಬರುತ್ತದೆ. ಈ ನಕ್ಷತ್ರಗಳು ರಚಿತವಾದಾಗ ಸುತ್ತಲೂ ಉಳಿದ ವಸ್ತುವೇ ಹೀಗೆ ಹರಡಿದೆ ಎಂದು ವಿಶ್ಲೇಷಿಸಿ ವಿಜ್ಞಾನಿಗಳು ಈ ಗುಚ್ಛ ಎಳೆಯ ವಯಸ್ಸಿನದು (ಕೆಲವೇ ಮಿಲಿಯನ್ ವರ್ಷಗಳು !) ಎಂದು ನಿರ್ಧರಿಸಿದ್ದಾರೆ.

ಈ ಗುಚ್ಛಕ್ಕೆ ನಮ್ಮಲ್ಲಿ ''ಕೃತ್ತಿಕಾ'' ಎಂಬ ಹೆಸರಿದೆ. ಶಿವನ ಮಗನನ್ನು ಪೋಷಿಸಿದ ತಾಯಂದಿರೇ ಈ ''ಮಾತೃಕೆ''ಯರು ಎಂದು ನಮ್ಮಲ್ಲಿ ಕತೆ ಪ್ರಚಲಿತವಿದೆ. ಈ ''ಕೃತ್ತಿಕೆ''ಯರ ಮಗನೇ ಕಾರ್ತಿಕೇಯ.

ಐರೋಪ್ಯರೂ ಈ ನಕ್ಷತ್ರಗಳಲ್ಲಿ ಹೆಣ್ಣು ಮಕ್ಕಳನ್ನೇ ಗುರುತಿಸಿರುವುದು ಕಾಕತಾಳೀಯ. ಅಟ್ಲಾಸ್ ಮತ್ತು ಪ್ಲಿಯೋನೆ ಇವರ ಮಕ್ಕಳಲ್ಲಿ ಆಲ್ಸ್ಯೋಯ್ನೆ ಅತಿ ಸುಂದರಿ. ಉಳಿದವರೆಂದರೆ ಸೆಲಾನೋ, ಮಾಜಾ, ಮೆರೋಪೆ, ತಾಗೇಟೆ, ಸ್ಟೆರೋಪೆ ಮತ್ತು ಎಲೆಕ್ಟ್ರಾ. ಈ ಏಳು ಸೋದರಿಯರ ನಿವಾಸಕ್ಕೆ ಒರೈಯನ್ (ಮಹಾಬೇಟೆಗಾರ) ಧಾಳಿ ಇಟ್ಟನಂತೆ. ಹೆದರಿದ ಈ ಸುಂದರಿಯರು ಓಡತೊಡಗಿದರಂತೆ. ವೀನಸ್ ದೇವತೆ ಅವರನ್ನು ಪಾರಿವಾಳಗಳನ್ನಾಗಿ ಪರಿವರ್ತಿಸಿ ಹಾರಿಹೋಗುವಂತೆ ಮಾಡಿದಳಂತೆ. ಆಕಾಶದಲ್ಲಿ ಈ ದೃಶ್ಯವನ್ನು ಊಹಿಸಿಕೊಳ್ಳಬಹುದು. ಒರೈಯನ್‌ನ ತೋಳು ಚಾಚಿದತ್ತವೇ ಪ್ಲೈಯಡಿಸ್ ಕಾಣುತ್ತದೆ.

ಕೃತ್ತಿಕೆಯ ಪಕ್ಕದಲ್ಲಿಯೇ ಪ್ರಕಾಶಮಾನವಾಗಿ ಹೊಳೆಯುವ ಗ್ರಹ ಶನಿ. ಅದರ ಪಕ್ಕ ಇಂಗ್ಲಿಷ್ ಅಕ್ಷರ V ಆಕಾರದಲ್ಲಿರುವ ಗುಂಪಿಗೆ ಹೈಯಡೆಸ್ ಎಂಬ ಹೆಸರಿದೆ. ಇದರಲ್ಲಿಯ ಅತಿ ಪ್ರಕಾಶಮಾನವಾದ (ಕೆಂಪು) ನಕ್ಷತ್ರವೇ ಆಲ್ಡೆಬೆರಾನ್ ಅಥವಾ ರೋಹಿಣಿ. ಗ್ರೀಕ್ ಕತೆಗಳಲ್ಲಿ ಹೈಯಡೆಸ್ ಗುಂಪಿನ ಹೆಣ್ಣು ಮಕ್ಕಳು ಪ್ಲೈಯಡಿಸ್ ಗುಂಪಿನ ಹೆಣ್ಣು ಮಕ್ಕಳ ಮಲತಂಗಿಯರು. ಏಥ್ರಾ ಮತ್ತು ಅಟ್ಲಾಸ್‌ನ ಮಕ್ಕಳು. ಏಸುಲಾ, ಅಂಬ್ರೋಸಿಯ, ಡಯೆನೆ, ಥೈಯೇನೆ, ಕೊರೊನಿಸ್, ಯುಡೋರಾ, ಪೋಲಿಕ್ಸೊ – ಎಂಬ ನಾಲಗೆ ತಿರುಚುವ ಹೆಸರುಗಳನ್ನು ನೆನಪಲ್ಲಿಟ್ಟುಕೊಳ್ಳಬೇಕಾಗಿಲ್ಲ. ಏಕೆಂದರೆ ಈ ಹೆಸರುಗಳನ್ನು ನಕ್ಷತ್ರಗಳಿಗೇನೂ ಇಟ್ಟಿಲ್ಲ. ಹೈಯಡೆಸ್ ಕೂಡ ಒಂದು ನಕ್ಷತ್ರಗುಚ್ಛ. ನಕ್ಷತ್ರಗಳ ದೂರ ಅಳೆಯಲು ಉಪಯೋಗಿಸುವ ವಿಧಾನವನ್ನು ಪರಿಶೀಲಿಸಲು ಈ ನಕ್ಷತ್ರ ಗುಚ್ಛವನ್ನೇ ಮಾದರಿಯನ್ನಾಗಿ ಬಳಸಲಾಗುತ್ತದೆ.

ಕಳೆದ ತಿಂಗಳಿಂದ ನೇರ ನಡೆ ಆರಂಭಿಸಿರುವ ಶನಿಗ್ರಹದ ಚಲನೆ ಈ ತಿಂಗಳು ಸ್ಪಷ್ಟವಾಗುತ್ತದೆ. ೩೧ರಂದು ರೋಹಿಣಿ ನಕ್ಷತ್ರಕ್ಕೆ ನಾಲ್ಕು ಡಿಗ್ರಿಗಳಷ್ಟು ಅಂತರದಲ್ಲಿರುವ ಇದು ಮುಂದೆ ಮಿಥುನರಾಶಿಯ ದಿಕ್ಕಿಗೆ ಧಾವಿಸುತ್ತದೆ.

ಶನಿಗ್ರಹಕ್ಕಿಂತ ಪ್ರಕಾಶಮಾನವಾಗಿ ಕಾಣುವ ಇನ್ನೆರಡು ಕಾಯಗಳೆಂದರೆ ಸಿರಿಯಸ್ ನಕ್ಷತ್ರ ಮತ್ತು ಗುರುಗ್ರಹ. ಕಳೆದೆರಡು ತಿಂಗಳು ಗುರು ಹಿನ್ನಡೆಯುತ್ತಿತ್ತು. ಅಂದರೆ ಮಿಥುನದಿಂದ ವೃಷಭದ ದಿಕ್ಕಿಗೆ ಸರಿಯುತ್ತಿತ್ತು. ಮಾರ್ಚ್ ೧ರಂದು ಇದು ತಟಸ್ಥವಾಗಿ, ಗುರು ಪುನಃ ನೇರ ನಡೆ ಆರಂಭಿಸುವುದು. ಮಿಥುನರಾಶಿಯ ಚೌಕದೊಳಕ್ಕೆ ಸಾಗುವುದು.

ಈ ಎರಡು ಕಾಯಗಳಿಗಿಂತ ಪ್ರಕಾಶಮಾನವಾಗಿ ಕಾಣುವ ಶುಕ್ರಗ್ರಹ ಪಶ್ಚಿಮದಂಚಿನಲ್ಲಿ ಕಾಣತೊಡಗುವುದು. ತಿಂಗಳ ಕೊನೆಯ ಹೊತ್ತಿಗೆ ಸೂರ್ಯಾಸ್ತವಾದ ಮೇಲೆ ಸುಮಾರು ಒಂದು ಗಂಟೆಯಷ್ಟು ಹೊತ್ತು ನೋಡಲು ಸಿಗುವುದು.

ದಿನೇ ದಿನೇ ಮಂಕಾಗುತ್ತಿದ್ದರೂ ಮೀನರಾಶಿಯಿಂದ ಮೇಷರಾಶಿಗೆ ಚಲಿಸುವ ಮಂಗಳವನ್ನು ಗುರುತಿಸಬಹುದು.

೧೮ರಂದು ಚಂದ್ರನ ಪಕ್ಕ ಕಾಣುವ ಗ್ರಹವೇ ಮಂಗಳ. ೨೦ರಂದು ಶನಿಗ್ರಹ ಚಂದ್ರನ ಪಕ್ಕ ಚುಕ್ಕೆಯಂತೆ ಕಾಣುತ್ತದೆ. ಆ ದಿನ ಸಂಜೆ ಆಚ್ಛಾದನೆ ಇದೆ. ಜನವರಿಯಲ್ಲಿ ಚಂದ್ರನ ಹಿಂದೆ ಮರೆಯಾಗಿ ಹೊರಬಂದಿತ್ತಲ್ಲವೇ ? ಅದೇ ರೀತಿಯ ಘಟನೆ ಇದು. ಆದರೆ ಇದು ಹಗಲಿನಲ್ಲಿ ನಡೆಯುವುದರಿಂದ ಸೂರ್ಯಾಸ್ತವಾಗುವಾಗ ಶನಿಯು ಚಂದ್ರನ ಪಕ್ಕವೇ ಚುಕ್ಕೆಯಂತೆ ಕಾಣುತ್ತದೆ. ೨೨ರಂದು ಗುರುಗ್ರಹದ ಆಚ್ಛಾದನೆಯೂ ಇದೆ.

# ಕಲಾತ್ಮಕತೆ ಮತ್ತು ವೈಜ್ಞಾನಿಕ ಮಾನವತಾವಾದ

ಸಾಹಿತ್ಯದಲ್ಲಿ ಸಾಮಾಜಿಕ ಬದ್ಧತೆ ಮತ್ತು ಕಲಾತ್ಮಕತೆಯ ಪ್ರಶ್ನೆ ಸಾಕಷ್ಟು ಹಳೆಯದು. ಒಂದು ಸಾಹಿತ್ಯದಲ್ಲಿ ಸಾಮಾಜಿಕ ಬದ್ಧತೆ ಇದೆಯೇ ಇಲ್ಲವೇ ಎಂಬುದು ಈಗ ಪ್ರಶ್ನೆಯಲ್ಲ. ಎಂಥ ಬದ್ಧತೆ ಇದೆ ಎನ್ನುವುದು ಪ್ರಶ್ನೆ. ಹಾಗೆಯೇ ಕಲಾತ್ಮಕತೆಯೂ ಸಹ.

ಸಾಮಾಜಿಕ ಬದ್ಧತೆ ಮತ್ತು ಕಲಾತ್ಮಕತೆಯ ಪ್ರಶ್ನೆ ಸೀಳಿ ನೋಡುವಂಥದಲ್ಲ. ಹಾಗೆ ಸೀಳಿ ನೋಡುವಾಗಲೆಲ್ಲಾ ಅದರ ಹಿಂದೆ ವೈಯಕ್ತಿಕ ಹಿತಾಸಕ್ತಿ, ವರ್ಗ ಹಿತಾಸಕ್ತಿ ಮತ್ತು ವ್ಯವಸ್ಥೆಯ ಪರ-ವಿರೋಧದ ಪೂರ್ವಗ್ರಹಗಳಿರುವುದನ್ನು ಗುರ್ತಿಸಬಹುದು.

ಉದಾಹರಣೆಗೆ, ಬೇಂದ್ರೆಯವರ ಕಾವ್ಯವನ್ನು ಹೊಗಳಬೇಕೆಂದು ನಿರ್ಧರಿಸಿದರೆ ಅವರ ಕಾವ್ಯವನ್ನು ಸೀಳಿ, ಅದರಲ್ಲಿನ ಕಲಾತ್ಮಕತೆಯನ್ನು ಎತ್ತಿತೋರಿಸಿ ಸಾಮಾಜಿಕ ಬದ್ಧತೆಯ ಪ್ರಶ್ನೆಯನ್ನು ಮರೆಮಾಚಬಹುದು. ಇದೇ ವಿಧಾನವನ್ನು ಅನುಸರಿಸಿ, ಅವರ ಕಾವ್ಯದಲ್ಲಿ ಸಾಮಾಜಿಕ ಬದ್ಧತೆಯಿಲ್ಲವೆಂದು ತೋರಿಸಿ ಬೇಂದ್ರೆಯವರನ್ನು ತಿರಸ್ಕರಿಸಬಹುದು. ಅಂದರೆ ಈ ಸೀಳು ದೃಷ್ಟಿಯನ್ನು ಬಳಸಿ ಯಾವ ಸಾಹಿತ್ಯವನ್ನು ಬೇಕಾದರೂ ತೆಗಳಬಹುದು ಇಲ್ಲವೇ ಹೊಗಳಬಹುದು. ಕುವೆಂಪು ಕಾವ್ಯವನ್ನು ಬೇಂದ್ರೆಯವರ ಕಾವ್ಯದ ಮೇಲೆ ಎತ್ತಿಕಟ್ಟಬಹುದು. ಸಿದ್ಧಲಿಂಗಯ್ಯನವರ ಕಾವ್ಯವನ್ನು ಹಿಡಿದು ಅಡಿಗರ ಬೆನ್ನ ಮೇಲೆ ಬಾರಿಸಬಹುದು.

ಸಾಹಿತ್ಯವನ್ನು ಸೀಳು ದೃಷ್ಟಿಯಿಂದ ನೋಡಿ ಕಲಾತ್ಮಕತೆಯ ಪ್ರಶ್ನೆಯನ್ನು ಎತ್ತಿಹಿಡಿದಾಗಲೆಲ್ಲಾ ವ್ಯವಸ್ಥೆಯ ಪರವಾದ ಆಯ್ಕೆ ಎದ್ದುಕಾಣುತ್ತದೆ. ಇಂಥ ಕಡೆ, ಸಾಮಾಜಿಕ ಬದ್ಧತೆಯ ಪ್ರಶ್ನೆಯನ್ನು ಮರೆಮಾಚಲಾಗುತ್ತದೆ. ಇಲ್ಲವೆ ಅದನ್ನು ತಗ್ಗಿದ ದನಿಯಲ್ಲಿ ಪ್ರಸ್ತಾಪಿಸಲಾಗುತ್ತದೆ. ಹಾಗೆಯೇ ಸಾಮಾಜಿಕ ಬದ್ಧತೆಯ ಪ್ರಶ್ನೆಯನ್ನು ಏರುದನಿಯಲ್ಲಿ ಪ್ರಸ್ತಾಪಿಸುವಾಗಲೆಲ್ಲಾ, ಕಲಾತ್ಮಕತೆಯ ಪ್ರಶ್ನೆಯನ್ನು ಕಡೆಗಣಿಸಲಾಗುತ್ತದೆ. ಅಥವಾ ಕಲಾತ್ಮಕತೆಯ ಮರು ವ್ಯಾಖ್ಯಾನದ ಅಗತ್ಯವನ್ನು ಸಾರಲಾಗುತ್ತದೆ. ಇಂಥ ಕಡೆ ವ್ಯವಸ್ಥೆಯ ವಿರುದ್ಧದ ಆಯ್ಕೆಯೂ ಏರುದನಿಯಲ್ಲೇ ದಾಖಲಾಗುತ್ತದೆ. ದಲಿತ ಮತ್ತು ಬಂಡಾಯ ಸಾಹಿತ್ಯದಲ್ಲಿನ ಅಬ್ಬರ, ಘೋಷಣೆಗಳು, ಕಲಾತ್ಮಕತೆಯ ಅಂಶದ ರಿಯಾಯಿತಿ ಬೇಡುವ ವಾದಗಳು ಇದಕ್ಕೆ ಉದಾಹರಣೆಗಳಾಗಬಲ್ಲವು.

ಅಲ್ಲದೆ ಒಬ್ಬ ಲೇಖಕ ಅಥವಾ ಸಾಹಿತ್ಯವನ್ನು ಪ್ರತಿಗಾಮಿ ಎಂದು ಜರಿಯಬೇಕಾದಾಗ ಅಥವಾ ಪ್ರಗತಿಗಾಮಿಯೆಂದು ಹೊಗಳಬೇಕಾದಾಗಲೆಲ್ಲಾ ಸಾಮಾಜಿಕ ಬದ್ಧತೆಯ ಅಂಶ ಆಯಾ ಸಾಹಿತ್ಯದಲ್ಲಿ ಯಾವ ಪ್ರಮಾಣದಲ್ಲಿದೆ ಎಂಬ ನಿಷ್ಕರ್ಷೆಯ ಕ್ರಮ ಬಳಕೆಯಾಗುತ್ತದೆ. ಈ ಕ್ರಮದಲ್ಲಿ ಯಾವ ಸಾಹಿತ್ಯವನ್ನು ಬೇಕಾದರೂ ಸಮಯಾನುಸಾರ ಪ್ರತಿಗಾಮಿ ಇಲ್ಲವೆ ಪ್ರಗತಿಗಾಮಿ ಎಂದು ಸಾಧಿಸಿ ತೋರಿಸಬಹುದು. ಶೂದ್ರಪರವಾದ ಸಾಹಿತ್ಯ ವಿಮರ್ಶೆಯಲ್ಲಿ ಬೇಂದ್ರೆ ಬ್ರಾಹ್ಮಣ ಕವಿಯಾಗಿ ವೈದಿಕತನವನ್ನು ಪ್ರತಿಪಾದಿಸುವ ಪ್ರತಿಗಾಮಿಯಾಗಿ ಚಿತ್ರಿತವಾಗುವುದೂ, ಸ್ತ್ರೀವಾದಿ ವಿಮರ್ಶೆಯಲ್ಲಿ ಇದೇ ಕವಿ, ಪುರುಷ ದೃಷ್ಟಿಯ ದಬ್ಬಾಳಿಕೆಯಿಂದ ತುಳಿತಕ್ಕೊಳಗಾದ ಸ್ತ್ರೀ ಪರವಾದ ಕಾಳಜಿಗಳನ್ನು ಪ್ರದರ್ಶಿಸುವ ಸ್ತ್ರೀವಾದಿ - ಆದ್ದರಿಂದ ಪ್ರಗತಿಪರ ಕವಿಯಾಗಿ ಚಿತ್ರಿತವಾಗುವುದೂ, ಈ ಮೇಲೆ ತಿಳಿಸಿದ ಕಾರಣಕ್ಕಾಗಿಯೇ ಸಾಧ್ಯ. ಇದು ಸಾಮಾಜಿಕ ಬದ್ಧತೆ ಮತ್ತು ಕಲಾತ್ಮಕತೆಗಳ ಸೀಳು ದೃಷ್ಟಿಯ ಹಿಂದಿರುವ ರಾಜಕೀಯ.

**ಒಂದು ಸಾಹಿತ್ಯ ಅದರ ಆದರ್ಶ ಸ್ಥಿತಿಯಲ್ಲಿ, ಸಾಮಾಜಿಕ ಬದ್ಧತೆ, ಕಲಾತ್ಮಕತೆ ಮತ್ತು ವೈಜ್ಞಾನಿಕ ಮಾನವೀಯತೆಗಳನ್ನು ಒಳಗೊಳ್ಳುವ ಸಾಹಿತ್ಯವಾಗಿರುತ್ತದೆ. ಆದರೆ ವಾಸ್ತವದಲ್ಲಿ ಈ ಮೂರರತ್ತ ದುಡಿಯುವ ಸಾಹಿತ್ಯ ಪೂರ್ಣಾರ್ಥದಲ್ಲಿ ಉತ್ತಮ ಸಾಹಿತ್ಯ ಎಂದು ಕರೆಸಿಕೊಳ್ಳಲು ಯೋಗ್ಯವಾದದ್ದು.**

**ಎ. ಎಸ್. ಲಕ್ಷ್ಮೀನಾರಾಯಣ**




ಸಂವೇದನಾಶೀಲತೆಯೇ ಸಾಹಿತ್ಯದ ಪ್ರಧಾನ ಅಂಗ. ಸಂವೇದನಾಶೀಲರು ಮಾನವೀಯತೆಯನ್ನು ಎತ್ತಿ ಹಿಡಿಯುವವರು ಎಂಬುದು ನಮ್ಮ ನಂಬಿಕೆ. ಸಾಹಿತ್ಯದ ತರ-ತಮಗಳನ್ನು ನಿರ್ಧರಿಸುವಾಗ ಕಲಾತ್ಮಕತೆ, ಸಾಮಾಜಿಕ ಬದ್ಧತೆಗಳೊಂದಿಗೆ ಮಾನವೀಯತೆಯ ಪ್ರಶ್ನೆಯನ್ನು ಬಳಸಲಾಗುತ್ತದೆ. ಆದರೆ 'ಮಾನವೀಯತೆ' ಎಂಬುದೇ ಸಾರ್ವಕಾಲಿಕವಾದ, ಸ್ವಯಂಪರಿಪೂರ್ಣವಾದ, ಏರು-ತಗ್ಗುಗಳಿಲ್ಲದ, ಏಕಮುಖದ ಪರಿಕಲ್ಪನೆಯಲ್ಲ. ಅಂದರೆ, ಮಾನವೀಯತೆ ಒಂದು ನಿರ್ದಿಷ್ಟ ಧಾರ್ಮಿಕ, ಸಾಮಾಜಿಕ, ವೈಚಾರಿಕ ಮತ್ತು ಸಾಂಸ್ಕೃತಿಕ ಮೂಲಗಳಿಂದ ರೂಪುಗೊಂಡಿರುವುದು ಸಾಧ್ಯ. ಆದರೆ, ಅದು ಹೇಗೇ ರೂಪುಗೊಳ್ಳಲಿ ಸಮುದಾಯದ ಸಾಮಾಜಿಕ ಮತ್ತು ರಾಜಕೀಯ ನ್ಯಾಯ ನೆಮ್ಮದಿಗಳ ನೆಲೆಗಳಲ್ಲಿ ಅನುಷ್ಠಾನಗೊಳ್ಳುವಂತಿದ್ದರೆ ಮಾತ್ರ ಅದರ ಸಾರ್ಥಕತೆ ಸಾಧ್ಯ. ಹಾಗೆ ಸಾರ್ಥಕವೂ, ಅರ್ಥಪೂರ್ಣವೂ ಆಗಬಲ್ಲ ಮಾನವೀಯತೆಯನ್ನು ವೈಜ್ಞಾನಿಕ ಮಾನವೀಯತೆ ಎಂದು ನಾನು ಕರೆಯುತ್ತೇನೆ.

ಸಂವೇದನಾಶೀಲರಾದ ಎಲ್ಲ ಸಾಹಿತಿಗಳೂ ಮಾನವೀಯತೆಯುಳ್ಳವರೇ. ಆದರೆ ಅವರ ಮಾನವೀಯತೆ ಯಾವ ಮೂಲದಿಂದ ಹೊರಟು ಯಾವ ನೆಲೆಗಳಲ್ಲಿ ಕೊನೆಗೊಳ್ಳುತ್ತದೆ ಎನ್ನುವ ಪ್ರಶ್ನೆ ಮಾನವೀಯತೆಯ ವಿವಿಧ ಮುಖಗಳನ್ನು ಮತ್ತು ಅವುಗಳ ವ್ಯತ್ಯಾಸಗಳನ್ನು ತೋರಿಸುತ್ತದೆ. ಉದಾಹರಣೆಗೆ, ಧರ್ಮ ಮೂಲದ ಮಾನವೀಯತೆ ಅದರ ಚೌಕಟ್ಟಿನಿಂದಾಚೆಗಿನ ಅನ್ಯಾಯಗಳನ್ನು ಗುರುತಿಸುವುದಿಲ್ಲ. ಇಲ್ಲವೇ ತಾತ್ವೀಕರಿಸುತ್ತದೆ (ಮಾಸ್ತಿಯವರ ಸಾಹಿತ್ಯ). ವೈಚಾರಿಕ ಮೂಲದ ಮಾನವೀಯತೆಗೆ ವರ್ಗಭೇದದಲ್ಲಿರುವ ಆರ್ಥಿಕ ಕ್ರೌರ್ಯ ಅರ್ಥವಾಗಿರಬೇಕೆಂದೇನೂ ಇಲ್ಲ (ಕಾರಂತರ ಸಾಹಿತ್ಯ). ನಿರ್ದಿಷ್ಟ ಸಂಸ್ಕೃತಿ ಮೂಲದ ಮಾನವೀಯತೆಗೆ ಜಾತಿ ವೈಷಮ್ಯದಿಂದ ಹುಟ್ಟುವ ತೊಳಲಾಟ ಸಂಕಟಗಳು ನಿಲುಕುವುದೇ ಇಲ್ಲ.

ಆದ್ದರಿಂದ ಮುಖ್ಯಪ್ರಶ್ನೆ, ಸಾಹಿತ್ಯಕ್ಕೆ ಮಾನವೀಯ ಮುಖವಿದೆಯೋ ಇಲ್ಲವೋ ಎಂಬುದಲ್ಲ. ನಮ್ಮೆದುರಿನ ಸಾಹಿತ್ಯದಲ್ಲಿನ ಮಾನವೀಯತೆ ಯಾವ ಮೂಲದ್ದು ಎಂಥ ಬಗೆಯ ಮಾನವೀಯತೆಗೆ ಒತ್ತು ಬಿದ್ದಿದೆ ಎಂಬುದಾಗಿದೆ. ಇದರ ಆಯ್ಕೆ ಒಟ್ಟನಲ್ಲಿ ಬರಹಗಾರನದೇ ಆಗಿರುತ್ತಾದ್ದರಿಂದ, ಆ ಸಾಹಿತ್ಯದ ಮೇಲಿನ ಆರೋಪ, ಮೆಚ್ಚುಗೆಗಳು ಬರಹಗಾರನನ್ನೂ ಖಂಡಿತ ವ್ಯಾಪಿಸುತ್ತವೆ. ಇದು ಒಬ್ಬ ಲೇಖಕನನ್ನು ಪ್ರತಿಗಾಮಿಯೆಂದೋ, ಪ್ರಗತಿಗಾಮಿಯೆಂದೋ ಗುರ್ತಿಸಲು ಬೇಕಾದ ಆಧಾರ.

ಈ ವಿಶ್ವದಲ್ಲಿನ ಎಲ್ಲ ಜೀವಿಗಳೂ, ಗಿಡ, ಮರ, ಕಲ್ಲು, ಮಣ್ಣುಗಳೂ ಸುಖದಿಂದಿರಬೇಕು. ಶಾಂತತೆಯನ್ನು

ಅನುಭವಿಸಬೇಕು ಎಂಬ ಆಶಯ ತಾತ್ವಿಕವಾದದ್ದು. ಕೆಲಮಟ್ಟಿಗೆ ಧಾರ್ಮಿಕವಾದದ್ದು. ಆದರೆ ವಿಶ್ವದಲ್ಲಿನ ಎಲ್ಲಾ ಮನುಷ್ಯರೂ ಅವರನ್ನು ನಂಬಿದ ಎಲ್ಲಾ ಜೀವಿಗಳೂ ಸುಖ - ನೆಮ್ಮದಿಗಳಿಂದ ಜೀವಿಸಲು ಬೇಕಾದ ಕನಿಷ್ಠ ಪೂರ್ವಾಗತ್ಯಗಳು ಎಲ್ಲರಿಗೂ ಸಿಗಬೇಕೆನ್ನುವ ಆಶಯ ಪ್ರಧಾನವಾಗಿ ಸಾಮಾಜಿಕ-ರಾಜಕೀಯವಾದದ್ದು. ಇಲ್ಲಿ ಯಾವ ಸಂವೇದನಾಶೀಲನೂ ತಪ್ಪಿಸಿಕೊಳ್ಳಲಾಗದ ಆಯ್ಕೆಯ ಪ್ರಶ್ನೆ ಇದೆ. ಎಲ್ಲಾ ಬಗೆಯ ಸಾಹಿತ್ಯವೂ ಬರಹಗಾರರೂ ಒಂದಲ್ಲ ಒಂದು ರೀತಿಯಲ್ಲಿ ನಿಕಷಕ್ಕೆ ಒಡ್ಡಿಕೊಳ್ಳಬೇಕಾದ ಅನಿವಾರ್ಯತೆ ಇಲ್ಲಿದೆ. ಇದರ ಆಧಾರದ ಮೇಲೆ ಒಬ್ಬ ಲೇಖಕ ಯಾವ ಸಾಹಿತ್ಯವನ್ನು ಸೃಷ್ಟಿಸಿದ್ದಾನೆಂದು ಅಂದಾಜು ಮಾಡುವುದು ಸಾಧ್ಯ.

ಸ್ಪರ್ಧೆಯನ್ನು ಬಯಸುವ, ಸಹಜೀವಿಯನ್ನು ಬಡಿದು ತಿನ್ನುವ ಹಕ್ಕು ವ್ಯಕ್ತಿ ಸ್ವಾತಂತ್ರ್ಯದಲ್ಲಿ ಇದೆ ಎಂದು ನಂಬುವ, ಪ್ರಾಕೃತಿಕ ಮತ್ತು ಮಾನವ ನಿರ್ಮಿತ ಸಂಪತ್ತನ್ನು ಸಮುದಾಯದ ಒಳಿತಿಗೆ ಬಳಸುವುದಕ್ಕಿಂತ ಅವನು ತನ್ನ ನಿಯಂತ್ರಣಕ್ಕೊಳಪಡಿಸುವುದೇ ಪರಮೋಚ್ಚ ಸಂತೋಷವೆಂದು ಬಗೆಯುವ ಮತ್ತು ಇದು ಮನುಷ್ಯನ ಸ್ವಭಾವದಲ್ಲೇ ಇದೆಯೆಂದು ಪ್ರತಿಪಾದಿಸುವ ಮನಸ್ಸು, ತಾತ್ವಿಕತೆ ಹಾಗೂ ಸಾಮಾಜಿಕ, ರಾಜಕೀಯ ಸಿದ್ಧಾಂತಗಳನ್ನು ಸಾಹಿತ್ಯವಾಗಿಸುವ ಬರಹಗಾರ, ವೈಜ್ಞಾನಿಕ ಮಾನವತಾವಾದಿಯಾಗಿರುವುದು ಎಂದಿಗೂ ಸಾಧ್ಯವಿಲ್ಲ.

ಒಂದು ಸಾಹಿತ್ಯ ಅದರ ಆದರ್ಶ ಸ್ಥಿತಿಯಲ್ಲಿ, ಸಾಮಾಜಿಕ ಬದ್ಧತೆ, ಕಲಾತ್ಮಕತೆ ಮತ್ತು ವೈಜ್ಞಾನಿಕ ಮಾನವೀಯತೆಗಳನ್ನು ಒಳಗೊಳ್ಳುವ ಸಾಹಿತ್ಯವಾಗಿರುತ್ತದೆ. ಆದರೆ ವಾಸ್ತವದಲ್ಲಿ ಈ ಮೂರರತ್ತ ದುಡಿಯುವ ಸಾಹಿತ್ಯ ಪೂರ್ಣಾರ್ಥದಲ್ಲಿ ಉತ್ತಮ ಸಾಹಿತ್ಯ ಎಂದು ಕರೆಸಿಕೊಳ್ಳಲು ಯೋಗ್ಯವಾದದ್ದು. ಹೀಗೆ ಉತ್ತಮ ಸಾಹಿತ್ಯವನ್ನು ಉಳಿದ ಬಗೆಯ ಸಾಹಿತ್ಯದಿಂದ ಬೇರ್ಪಡಿಸಿ ಗುರ್ತಿಸಿಕೊಳ್ಳಲು, ಸೀಳು ದೃಷ್ಟಿಯಿಂದ ಬಿಡಿಸಿಕೊಂಡು, ಬದ್ಧತೆ, ಕಲಾತ್ಮಕತೆ ಮತ್ತು ವೈಜ್ಞಾನಿಕತೆಗಳನ್ನು ಒಟ್ಟಿಗೆ ಒಂದೆಡೆ ನೋಡಬಲ್ಲ ಅಖಂಡ ದೃಷ್ಟಿ ಬೇಕಾಗುತ್ತದೆ.

ಮುಂದಿನ ಪ್ರಶ್ನೆ, ಕನ್ನಡದಲ್ಲಿ ಇಲ್ಲಿಯವರೆಗೆ ಬಂದಿರುವ ಸಾಹಿತ್ಯ ಎಂಥ ಸಾಹಿತ್ಯ ಎನ್ನುವುದಕ್ಕಿಂತ, ಇದನ್ನು ನಾವು ನೋಡುತ್ತಿರುವ ದೃಷ್ಟಿ ಖಂಡವೋ ಅಖಂಡವೋ ಎಂಬುದು.

ಇತರರಂತೆ, ಯಾವುದೇ ಬರಹಗಾರರೂ ಸಮಾಜ ಜೀವಿಗಳಾದ್ದರಿಂದ ಅವರಿಗೆ ಇಷ್ಟವಿರಲಿ ಇಲ್ಲದಿರಲಿ, ಅರಿವಿರಲಿ, ಇಲ್ಲದಿರಲಿ, ಅವರ ಬರವಣಿಗೆಗೆ ಸಾಮಾಜಿಕ ಬದ್ಧತೆ ತಾನೇ ತಾನಾಗಿ ಪ್ರಾಪ್ತವಾಗುತ್ತದೆ. ಅವರ ಬದುಕು ವ್ಯವಸ್ಥೆಯ ನಿಯಂತ್ರಣಕ್ಕೆ ಒಳಪಡುವುದರಿಂದ ರಾಜಕೀಯ ಬದ್ಧತೆ ಅನಿವಾರ್ಯವಾಗುತ್ತದೆ. ಕಲಾತ್ಮಕತೆ ಮೂಲತಃ ಭಾಷೆಯ ಲಯ ವಿನ್ಯಾಸಗಳನ್ನು ಬಳಸಿ ಅನುಭವವನ್ನು ಕಟ್ಟಿಕೊಡುವ ಕ್ರಮ. ಆಯಾ ಸಮಾಜದ, ಕಾಲದ ಅಗತ್ಯಕ್ಕೆ ತಕ್ಕಂತೆ ಈ ಲಯ ವಿನ್ಯಾಸಗಳು, ಸಾಮಾಜಿಕ ಮತ್ತು ರಾಜಕೀಯ ಬದ್ಧತೆಗಳ ಬೆಳಕಿನಲ್ಲಿ ಅನನ್ಯವಾದ ರೂಪ-ಆಕೃತಿಗಳನ್ನು ತಾಳಿ ಮನ್ನಣೆ ಪಡೆಯುತ್ತವೆ. ಆದ್ದರಿಂದ ವಿಶಾಲ ಭಿತ್ತಿಯಲ್ಲಿ ವಿವಿಧ ಲಯ-ವಿನ್ಯಾಸಗಳ ಭಾಷಾನುಭವದ ಆಕೃತಿಗಳನ್ನು ಹೋಲಿಸಿ ಬೆಲೆ ಕಟ್ಟಬಹುದಾದರೂ ನಿರ್ದಿಷ್ಟವಾಗಿ, ನಿರ್ಣಾಯಕವಾಗಿ ಈ ವಿವಿಧ ಆಕೃತಿಗಳನ್ನು ಹೋಲಿಸಲಾಗುವುದಿಲ್ಲ. ಈ ಲಯ ವಿನ್ಯಾಸಗಳ ವೈವಿಧ್ಯ ಬರವಣಿಗೆಯ ಚಾರಿತ್ರಿಕ ಬೆಳವಣಿಗೆಯ ವಿವಿಧ ಮಜಲುಗಳಾಗಿ ಸಾಹಿತ್ಯ ಪರಂಪರೆಯನ್ನು ನಿರ್ಮಿಸುತ್ತದೆ. ವರ್ಗ ಹಿತಾಸಕ್ತಿಗಳನ್ನು ಮರೆಮಾಚಿ ಸಾಮಾಜಿಕ ಮೌಲ್ಯದ ಆಯ್ಕೆಯನ್ನು ಸ್ಪಷ್ಟಪಡಿಸದೆ, ವಿವಿಧ ಸಾಹಿತ್ಯಗಳ ನಡುವಿನ ವ್ಯತ್ಯಾಸವನ್ನು ಗುರುತಿಸ ಹೊರಡುವುದು ಸಾಹಿತ್ಯದ ಕಲಾತ್ಮಕತೆಯ ನಿಷ್ಕರ್ಷೆಯನ್ನು ಗೊಂದಲದಲ್ಲಿ ಕೆಡವುತ್ತದೆ. ಆದ್ದರಿಂದಲೇ ಯಾವುದೋ ಒಂದು ನಿರ್ದಿಷ್ಟ ಬಗೆಯ ಭಾಷಾನುಭವದ ಲಯ-ವಿನ್ಯಾಸಗಳ ನಿರ್ಮಿತಿಯೊಂದಿಗೆ ಉಳಿದವನ್ನು ಹೋಲಿಸಿ ಯಾವುದು ಕಲಾತ್ಮಕ ಎಂಬ ನಿರ್ಣಯ ಎಲ್ಲ ಕಾಲಗಳಲ್ಲೂ ಚರ್ಚಾಸ್ಪದ ವಸ್ತುವಾಗಿದೆ. ಉದಾಹರಣೆಗೆ, ಪಂಪನನ್ನು ಕುಮಾರವ್ಯಾಸನೊಂದಿಗೆ, ಕುಮಾರವ್ಯಾಸನನ್ನು ದ. ರಾ. ಬೇಂದ್ರೆ, ಕುವೆಂಪು ಅವರೊಂದಿಗೆ, ಬೇಂದ್ರೆ-ಕುವೆಂಪುರವರನ್ನು ಅಡಿಗರೊಂದಿಗೆ, ಅಡಿಗರನ್ನು ಸಿದ್ದಲಿಂಗಯ್ಯನವರೊಂದಿಗೆ ಸಾಹಿತ್ಯಿಕವಾಗಿ ಹೋಲಿಸಿ ಯಾವುದು ಹೆಚ್ಚು ಕಲಾತ್ಮಕ ಎಂದು ನಿರ್ಧರಿಸಲಾಗುವುದಿಲ್ಲ. ಇಲ್ಲಿ ಎತ್ತುವ ಶ್ರೇಷ್ಠತೆಯ ಪ್ರಶ್ನೆಯೂ ಪ್ರಧಾನವಾಗಿ ಸ್ಪರ್ಧೆ, ತರ-ತಮಗಳ ಮೌಲ್ಯ ನಿರ್ಣಯಗಳನ್ನು ಮೂಲ ಬಂಡವಾಳಶಾಹಿ ದೃಷ್ಟಿಯಿಂದ ಉದ್ಭವಿಸಿದ್ದು ಇಲ್ಲವೆ ಸಾಂಸ್ಕೃತಿಕ ಸಾಮಾಜಿಕ ಕೀಳರಿಮೆಯಿಂದ ಬಳಲುವ ಮನಸ್ಸನ್ನು ಮೇಲಕ್ಕೇರಿಸಿ ಯಜಮಾನ ಸಂಸ್ಕೃತಿಯೊಂದಿಗೆ ಗುರ್ತಿಸಿಕೊಳ್ಳುವ ಪ್ರಯತ್ನವಾಗುತ್ತದೆ. ಹೀಗೆ ಒಂದು ಸಾಹಿತ್ಯವನ್ನು ಅರ್ಥಮಾಡಿಕೊಳ್ಳುವುದಕ್ಕಿಂತ ಅದರ ಮೇಲು ಕೀಳನ್ನು ನಿರ್ಧರಿಸುವುದೇ ಇಲ್ಲಿ ಮುಖ್ಯ ಕಾಳಜಿಯಾಗುತ್ತದೆ. ಬದ್ಧತೆ, ಕಲಾತ್ಮಕತೆ ಮತ್ತು ವೈಜ್ಞಾನಿಕತೆಗಳು ಮುಪ್ಪುರಿಗೊಂಡ ನೆಲೆಗಟ್ಟು ಮಾತ್ರ ಸಾಹಿತ್ಯಾಭ್ಯಾಸಕ್ಕೆ ಅನುವು ಮಾಡಿಕೊಡುತ್ತದೆ.

ವಿ. ಎನ್. ಲಕ್ಷ್ಮೀನಾರಾಯಣ
ಎಂ. ೧೨೩೭, ೨ನೇ ಮೇನ್
ವಿವೇಕಾನಂದ ನಗರ, ಮೈಸೂರು-೫೭೦ ೦೨೩

(೪೫ನೇ ಪುಟದಿಂದ)

ಸಹ ಸಂಜೆ ಸೂರ್ಯಾಸ್ತವಾಗುವಾಗಲೇ ಮುಗಿಯುತ್ತಿರುತ್ತದೆ. ಆದರೂ ಈ ಎರಡೂ ಘಟನೆಗಳು ಛಾಯಾಗ್ರಾಹಕರಿಗೆ ಒಳ್ಳೆಯ ಅವಕಾಶ ಒದಗಿಸುತ್ತವೆ.

೧೯ರಂದು ಶನಿಗ್ರಹವನ್ನು ಚಿತ್ರೀಕರಿಸಲು ಪ್ರಯತ್ನಿಸಿ. ಇದು ಮರುದಿನಕ್ಕೆ ಪೂರ್ವಸಿದ್ಧತೆ ಎಂದಿಟ್ಟುಕೊಳ್ಳಿ. ಶನಿಗ್ರಹಕ್ಕೊಂದು ಉಪಗ್ರಹವೂ ಕಾಣುತ್ತಿದೆಯೇ ಎಂಬ ಭ್ರಮೆ ನಿಮಗಾಗಬಹುದು. ಅಲ್ಲ, ಅದು ವೆಸ್ಟಾ ಎಂಬ ಕ್ಷುದ್ರಗ್ರಹ. ದೂರದರ್ಶಕಕ್ಕೆ ಮಾತ್ರ ನಿಲುಕುವಂತಹುದು.

ಮಾರ್ಚ್ ೨೧ರಂದು ಖಗೋಳ ವೈಜ್ಞಾನಿಕವಾಗಿ ಹೊಸ ವರ್ಷಾರಂಭ. ವಸಂತ ವಿಷುವ ಬಿಂದುವನ್ನು ಸೂರ್ಯ (ಭೂಮಿ) ಹಾದುಹೋಗುವ ದಿನ. ಅಂದು ಹಗಲು ರಾತ್ರಿಗಳ ಅವಧಿ ಸಮ.




೧೪ರಂದು ೭ಗಂ. ೩೨ ನಿಮಿಷಕ್ಕೆ ಅಮಾವಾಸ್ಯೆ. ೨೮ರಂದು ರಾತ್ರಿ ೧೧.೫೫ಕ್ಕೆ ಹುಣ್ಣಿಮೆ. ಈ ತಿಂಗಳ ವೈಶಿಷ್ಟ್ಯವೆಂದರೆ ಅಮಾವಾಸ್ಯೆಯಂದು ಅಪರವಿ (ಅಂದರೆ ಭೂಮಿಯಿಂದ ಗರಿಷ್ಠ ದೂರದ ಬಿಂದು) ದಾಟುವ ಚಂದ್ರ ಹುಣ್ಣಿಮೆಯಂದು ಪುರರವಿ (ಅಂದರೆ ಭೂಮಿಯಿಂದ ಕನಿಷ್ಠ ದೂರದ ಬಿಂದು) ದಾಟಲಿದೆ. ಈ ದೂರವೂ ಈ ಶತಮಾನಕ್ಕೇ ಕನಿಷ್ಠ (೩೫೭,೦೦೮ ಕಿ.ಮೀ.) ಅಂದರೆ ಅಂದು ಅತಿದೊಡ್ಡ ಗಾತ್ರದ ಚಂದ್ರ, ಅತಿ ಹೆಚ್ಚಿನ ಬೆಳಕು...... ಇತ್ಯಾದಿ. ಆದರೆ ಬರಿಗಣ್ಣು ಈ ವ್ಯತ್ಯಾಸವನ್ನು ಗುರುತಿಸಬಲ್ಲುದೇ ? ಪ್ರಯತ್ನಿಸಿ ನೋಡಿ.

ಡಾ॥ ಬಿ. ಎಸ್. ಶೈಲಜಾ
ಜವಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು-೫೬೦೦೦೧

# ರೇಷ್ಮೆ ಉದ್ಯಮದ ಉಪಯುಕ್ತ ಉತ್ಪನ್ನ : ರೇಷ್ಮೆ ಪುಡಿ

ಇತ್ತೀಚಿನ ದಿನಗಳಲ್ಲಿ ಸಾಂಪ್ರದಾಯಿಕವಾಗಿ ರೇಷ್ಮೆ ಗೂಡಿನ ಉತ್ಪಾದನೆಯ ಪ್ರಮಾಣ ಕೆಲವು ದೇಶಗಳಲ್ಲಿ ಕಡಿಮೆಯಾಗುತ್ತಿದ್ದು , ರೇಷ್ಮೆ ಹುಳ ಮತ್ತು ಹಿಪ್ಪು ನೇರಳೆ ಎಲೆಯನ್ನು ಉಪಯೋಗಿಸಿ ವಿವಿಧ ಉಪಪದಾರ್ಥಗಳ ಉತ್ಪನ್ನದತ್ತ ರೇಷ್ಮೆ ಕೃಷಿಕರು ಒಲವು ತೋರುತ್ತಿರುವುದು ವಿಶೇಷ ಸಂಗತಿಯಾಗಿದೆ. ರೇಷ್ಮೆ ಹುಳದ ಸಾಕಾಣಿಕೆ ಕೈಗೊಂಡು, ಬಲಿತ ಹುಳದ ರೇಷ್ಮೆ ಗ್ರಂಥಿಯಿಂದ ರೇಷ್ಮೆ ಎಳೆಯು ಎಳೆ-ಎಳೆಯಾಗಿ ಒಸರುವ ಮುನ್ನವೇ ಹುಳಗಳನ್ನು ಉಪಯೋಗಿಸಿ ''ರೇಷ್ಮೆ ಪುಡಿ''ಯನ್ನು ಉತ್ಪತ್ತಿ ಮಾಡುವತ್ತ ತಜ್ಞರು ದಾಪುಗಾಲು ಹಾಕಿದ್ದಾರೆ. ಈ 'ರೇಷ್ಮೆ ಪುಡಿ'ಯ ಬಗ್ಗೆ ಒಂದು ವರದಿ ಇಲ್ಲಿದೆ.

**ರೇ**ಷ್ಮೆ ಉದ್ಯಮವೆಂಬುದು ಒಂದು ಅಮೂಲ್ಯ ನಾಣ್ಯವಿದ್ದಂತೆ. ಇದರ ಎರಡು ಮುಖಗಳೇ ಹಿಪ್ಪುನೇರಳೆ ಸಸ್ಯ ಮತ್ತು ರೇಷ್ಮೆ ಕೀಟ. ಈ ಎರಡನ್ನು ಕಲಿಯುಗದ ''ಕಾಮಧೇನು - ಕಲ್ಪವೃಕ್ಷ''ವೆಂದು ಬಣ್ಣಿಸಿದರೆ ಅತಿಶಯೋಕ್ತಿ ಎನಿಸಲಾರದು. ರೇಷ್ಮೆ ಉದ್ಯಮದ ವಿವಿಧ ಕ್ಷೇತ್ರಗಳಲ್ಲಿ ಅಂದರೆ : ಹಿಪ್ಪುನೇರಳೆ ಸಸ್ಯ ನಾಟಿ ಮಾಡಲು ಉಪಯೋಗಿಸುವ ಮಣ್ಣಿನಿಂದ ಹಿಡಿದು ರೇಷ್ಮೆ ಗೂಡು / ರೇಷ್ಮೆ ಎಳೆ ಉತ್ಪಾದನೆಯವರೆಗೂ ಅನೇಕ ತರಹದ ಉಪಯುಕ್ತ ಮತ್ತು ಅನುಪಯುಕ್ತ ಪದಾರ್ಥಗಳು ಉತ್ಪಾದನೆಯಾಗುತ್ತವೆ. ರೇಷ್ಮೆ ಉದ್ಯಮದಿಂದ ಉತ್ಪತ್ತಿಯಾಗುವ ಮುಖ್ಯ ಪದಾರ್ಥದಿಂದ (ಉದಾಹರಣೆಗೆ, ರೇಷ್ಮೆ ಗೂಡು / ರೇಷ್ಮೆ ದಾರದಿಂದ) ಅನೇಕ ಬಗೆಯ ಉಪ ಪದಾರ್ಥಗಳನ್ನು ಉತ್ಪಾದಿಸಲಾಗುತ್ತಿದೆ. ಹತ್ತು - ಹಲವು ಉಪಪದಾರ್ಥಗಳಲ್ಲಿ ಪ್ರಮುಖವಾದದ್ದು 'ರೇಷ್ಮೆ ಪುಡಿ'.

ಇತ್ತೀಚಿನ ದಿನಗಳಲ್ಲಿ ಸಾಂಪ್ರದಾಯಿಕವಾಗಿ ರೇಷ್ಮೆ ಗೂಡಿನ ಉತ್ಪಾದನೆಯ ಪ್ರಮಾಣ ಕೆಲವು ದೇಶಗಳಲ್ಲಿ ಕಡಿಮೆಯಾಗುತ್ತಿದ್ದು, ರೇಷ್ಮೆ ಹುಳ ಮತ್ತು ಹಿಪ್ಪು ನೇರಳೆ ಎಲೆಯನ್ನು ಉಪಯೋಗಿಸಿ ವಿವಿಧ ಉಪಪದಾರ್ಥಗಳ ಉತ್ಪನ್ನದತ್ತ ರೇಷ್ಮೆ ಕೃಷಿಕರು ಒಲವು ತೋರುತ್ತಿರುವುದು ವಿಶೇಷ ಸಂಗತಿಯಾಗಿದೆ. ರೇಷ್ಮೆ ಹುಳದ ಸಾಕಾಣಿಕೆ ಕೈಗೊಂಡು, ಬಲಿತ ಹುಳದ ರೇಷ್ಮೆ ಗ್ರಂಥಿಯಿಂದ ರೇಷ್ಮೆ ಎಳೆಯು ಎಳೆ-ಎಳೆಯಾಗಿ ಒಸರುವ ಮುನ್ನವೇ ಹುಳಗಳನ್ನು ಉಪಯೋಗಿಸಿ ''ರೇಷ್ಮೆ ಪುಡಿ''ಯನ್ನು ಉತ್ಪತ್ತಿ ಮಾಡುವತ್ತ ತಜ್ಞರು ದಾಪುಗಾಲು ಹಾಕಿದ್ದಾರೆ. ಈ 'ರೇಷ್ಮೆ ಪುಡಿ'ಯ ಬಗ್ಗೆ ಒಂದು ವರದಿ ಇಲ್ಲಿದೆ.

ದಕ್ಷಿಣ ಕೊರಿಯದ ರಾಷ್ಟ್ರೀಯ ಕೃಷಿ ವಿಜ್ಞಾನ ಮತ್ತು ತಾಂತ್ರಿಕ ಸಂಸ್ಥೆಯ ರೇಷ್ಮೆ ಕೀಟಶಾಸ್ತ್ರ ಇಲಾಖೆ, ಸುವೂನ್‌ದ ರೇಷ್ಮೆ ಕೃಷಿ ವಿಜ್ಞಾನಿಗಳು ೧೯೯೫ರಲ್ಲಿ 'ರೇಷ್ಮೆ ಹುಳದ ಪುಡಿ'ಯನ್ನು ಕಂಡುಹಿಡಿದರು. ರೇಷ್ಮೆ ಹುಳಗಳು ತಮ್ಮ ಹುಳದ ೫ನೇ ಹಂತ ಆರಂಭಗೊಂಡ ೩ನೇ ದಿನದಲ್ಲಿ ರೇಷ್ಮೆ ಗ್ರಂಥಿಗಳ ಮೂಲಕ ಸಿರಿಸಿನ್(Sericin) ಪ್ರೋಟೀನ್ ಉತ್ಪತ್ತಿ ಮಾಡಲು ಆರಂಭಿಸುತ್ತವೆ. ಈ ಅವಧಿಯಲ್ಲಿ ಚೆನ್ನಾಗಿ ಬಲಿತ, ಆರೋಗ್ಯಯುಕ್ತ ೫ನೇ ಹಂತದ ೩ನೇ ದಿನದ ರೇಷ್ಮೆ ಹುಳಗಳನ್ನು ಉಪಯೋಗಿಸಿ ರೇಷ್ಮೆ ಪುಡಿ ಮಾಡುವಲ್ಲಿ ವಿಜ್ಞಾನಿಗಳು ಯಶಸ್ವಿಯಾಗಿದ್ದಾರೆ. ರೇಷ್ಮೆ ಪುಡಿ ಉತ್ಪತ್ತಿ ಮಾಡಲು ಎರಡು ತಂತ್ರಗಳನ್ನು ವಿಜ್ಞಾನಿಗಳು ಬಳಸುತ್ತಾರೆ. ೧. ಬಿಸಿ ಮತ್ತು ಒಣಗಿಸುವ ತಂತ್ರಜ್ಞಾನ ೨. ಶೀತಲೀಕರಣ ಮತ್ತು ಒಣಗಿಸುವ ತಂತ್ರಜ್ಞಾನ. ಈ ಎರಡರಲ್ಲಿ ಶೀತಲೀಕರಣ ಮತ್ತು ಒಣಗಿಸುವ ತಂತ್ರಜ್ಞಾನವು ರೇಷ್ಮೆ ಹುಳದ ದೇಹ ರಚನೆಯನ್ನು ಸರಿಯಾಗಿಡುತ್ತದೆ ಮತ್ತು ಯಾವುದೇ ಕಲಬೆರಕೆಯಾಗುವುದನ್ನು ತಡೆಯುತ್ತದೆ. ಕಾರಣ ಈ ತಂತ್ರಜ್ಞಾನವು ಬಲು ಹೆಸರುವಾಸಿ.

ರೇಷ್ಮೆ ಹುಳದ ಪುಡಿಯಲ್ಲಿ ಅತ್ಯುಪಯುಕ್ತ, ಮಾನವನಿಗೆ ಬೇಕಾಗುವ, ಅವಶ್ಯಕ ಪೋಷಕಾಂಶಗಳಿರುವುದನ್ನು ಗಮನಿಸಬಹುದು. ಕೊರಿಯ ವಿಜ್ಞಾನಿಗಳ ಪ್ರಕಾರ ರೇಷ್ಮೆ ಪುಡಿಯಲ್ಲಿ ಶೇ. ೫೬.೮ ಪ್ರೋಟೀನ್, ಶೇ. ೯.೯ ಬೂದಿ (ಖನಿಜಾಂಶಗಳು), ಶೇ. ೯.೩ ಪಿಷ್ಠ, ಶೇ. ೪.೫ ತೇವಾಂಶ ಮತ್ತು ಲವಣಾಂಶಗಳಾದ ಕ್ಯಾಲ್ಸಿಯಂ (ಶೇ. ೦.೪೪), ಫಾಸ್ಫರಸ್ (ಶೇ. ೯), ಸೋಡಿಯಂ (ಶೇ. ೦.೦೬) ಮತ್ತು ಮ್ಯಾಗ್ನಿಷಿಯಂ(ಶೇ. ೦.೪) ಇರುವುದು ವಿಶೇಷ ಸಂಗತಿ. ಕಾರಣ, ವಿಶ್ವದ ಹಲವು ರಾಷ್ಟ್ರಗಳು ಈ ರೇಷ್ಮೆ ಪುಡಿಯನ್ನು ಪಡೆಯಲು ನಾ ಮುಂದೆ - ತಾ ಮುಂದೆ ಎಂದು ಕೊರಿಯ ದೇಶಕ್ಕೆ ಬೇಡಿಕೆ ಸಲ್ಲಿಸುತ್ತಿವೆಯಂತೆ ! ಇದಕ್ಕೆ ಪ್ರಮುಖ ಕಾರಣ ಈ ರೇಷ್ಮೆ ಪೌಡರ್‌ನಲ್ಲಿನ ರಾಸಾಯನಿಕಗಳು ಕೇವಲ ಪೋಷಕಾಂಶಗಳನ್ನು ಮಾನವನ ದೇಹಕ್ಕೆ ಕೊಡುವುದಲ್ಲದೆ, ಮಹತ್ವದ ಔಷಧೀಯ ಗುಣಗಳನ್ನು ಹೊಂದಿರುವುದು.

ರೇಷ್ಮೆ ಪುಡಿಯು ಮಧುಮೇಹ ರೋಗದಿಂದ ಬಳಲುವ ರೋಗಿಗಳಿಗೆ ರಾಮಬಾಣ! ಕಾರಣ, ರಕ್ತದಲ್ಲಿನ ಸಕ್ಕರೆ ಅಂಶವನ್ನು ಕಡಿಮೆ ಮಾಡುವ ಶಕ್ತಿ ಈ ರೇಷ್ಮೆ ಪುಡಿಗಿದೆ. ಇದಲ್ಲದೆ, ರೇಷ್ಮೆ ಪುಡಿಯನ್ನು ಔದ್ಯೋಗಿಕ ಮತ್ತು ರಾಸಾಯನಿಕ ಕಾರ್ಖಾನೆಗಳಲ್ಲಿ, ಔಷಧಿ ಮತ್ತು ಸೌಂದರ್ಯ ವರ್ಧಕಗಳ ತಯಾರಿಕೆಯಲ್ಲಿ ಬಳಸಲಾಗುತ್ತದೆ. ಸಂಸ್ಕರಿಸಿದ ರೇಷ್ಮೆ ಪುಡಿಯಲ್ಲಿನ ಸಿರಿಸಿನ್ ರಾಸಾಯನಿಕ ಪುಡಿಯನ್ನು ರೇಷ್ಮೆಯಿಂದ ತಯಾರಿಸಿದ ಚರ್ಮದ ಆಕರ್ಷಣೆ ಹೆಚ್ಚಿಸಲು ಲೇಪನ ವಸ್ತುವಾಗಿ ಬಳಸುತ್ತಾರೆ. ಸೋಪ್, ಸಿಲ್ಕ್ ವೈನ್, ಹಾಗೂ ಸಿರಿಸಿನ್ ಸೌಂದರ್ಯ ವರ್ಧಕ ಉತ್ಪನ್ನಗಳಲ್ಲಿ ಸಿರಿಸಿನ್ ಪುಡಿಯನ್ನು ಬಳಸುತ್ತಾರೆ.

ರೇಷ್ಮೆ ಗ್ರಂಥಿಯಿಂದ ಉತ್ಪತ್ತಿಯಾಗುವ ಇನ್ನೊಂದು ಅಮೂಲ್ಯ ಪದಾರ್ಥವೆಂದರೆ 'ಫೈಬ್ರಿಯನ್' ಪ್ರೋಟೀನ್. ಫೈಬ್ರಿಯನ್ (Fibrion) ಪ್ರೋಟೀನ್ ಬಳಸಿ ಚಲನ ಚಿತ್ರಗಳ ಫಿಲ್ಮ್ (Film) ತಯಾರಿಕೆಯಲ್ಲಿ, ಕೃತಕ ಚರ್ಮ ಉತ್ಪತ್ತಿ ಮಾಡುವಲ್ಲಿ ಬಳಸುತ್ತಾರೆ. ಫೈಬ್ರಸ್ ಸ್ಕ್ಲೀರೊ ಪ್ರೋಟೀನ್ (Scleroprotein)ನನ್ನು ಶಸ್ತ್ರಚಿಕಿತ್ಸೆಯಲ್ಲಿ ಸಹ ಬಳಸುತ್ತಾರೆ. ಈ ರಾಸಾಯನಿಕ ಪದಾರ್ಥದಿಂದ ತಯಾರಾಗುವ ದಾರವು ತುಂಬಾ ಸೂಕ್ಷ್ಮ ಮತ್ತು ನಯವಾಗಿದ್ದು, ಗಟ್ಟಿಯಾಗಿರುತ್ತದೆ. ಹೀಗೇ ನಾನಾ ತರಹದ ಉಪಪದಾರ್ಥಗಳನ್ನು (By-products) ಉತ್ಪಾದಿಸುವತ್ತ ತಜ್ಞರು ದಾಪುಗಾಲು ಹಾಕುತ್ತಿರುವ ಹಿನ್ನೆಲೆಯಲ್ಲಿ ದಕ್ಷಿಣ ಕೊರಿಯ ದೇಶವು ಸೇರಿದಂತೆ ಹಲವಾರು ಮುಂದುವರಿದ ರಾಷ್ಟ್ರಗಳಲ್ಲಿ ರೇಷ್ಮೆ ಹುಳುಗಳಿಗೆ ಬೇಡಿಕೆ ಹೆಚ್ಚಾಗಿದೆ. ಇದರ ಪರಿಣಾಮ ರೇಷ್ಮೆ ಗೂಡಿನ ಉತ್ಪನ್ನ ಇಳಿಮುಖವಾಗಿದೆ. ಉದಾಹರಣೆಗೆ ದಕ್ಷಿಣ ಕೊರಿಯ ದೇಶವನ್ನು ತೆಗೆದುಕೊಂಡರೆ, ೧೯೯೫ರಲ್ಲಿ ೩೧,೬೨೭ ಬಾಕ್ಸ್ ರೇಷ್ಮೆ ಮೊಟ್ಟೆ ಉಪಯೋಗಿಸಿ ೧೦ ಸಾವಿರ ಮೆಟ್ರಿಕ್‌ಟನ್‌ಗಿಂತ ಹೆಚ್ಚು ರೇಷ್ಮೆ ಗೂಡನ್ನು ಉತ್ಪಾದಿಸಲಾಗುತ್ತಿತ್ತು. ಆದರೆ, ೧೯೯೫ ರಿಂದ ಈಚೆಗೆ ರೇಷ್ಮೆ ಮೊಟ್ಟೆಗಳ ಉತ್ಪಾದನೆ ಗಣನೀಯವಾಗಿ ಹೆಚ್ಚಾಗುತ್ತಿದ್ದರೂ (೪೫,೬೮೦ ಬಾಕ್ಸ್), ಕೇವಲ ೧ ಮೆಟ್ರಿಕ್ ಟನ್ ರೇಷ್ಮೆ ಗೂಡು ಉತ್ಪತ್ತಿಯಾಗುತ್ತಲಿದೆ. ಅಂದರೆ, ದಕ್ಷಿಣ ಕೊರಿಯದಲ್ಲಿ ಬೆಳೆಸುತ್ತಿರುವ ರೇಷ್ಮೆ ಹುಳಗಳಲ್ಲಿ ಬಹುಪಾಲು ರೇಷ್ಮೆ ಪುಡಿ ಮಾಡಲು ಉಪಯೋಗಿಸಿದರೆ, ಕೇವಲ ಸ್ವಲ್ಪ ಹುಳಗಳನ್ನು ರೇಷ್ಮೆ ಗೂಡು ಮಾಡಲು ಬಳಸುತ್ತಿರುವುದು ಈ ರೇಷ್ಮೆ ಪುಡಿಯ ಮಹತ್ವವನ್ನು ತಿಳಿಸುತ್ತದೆ. ಇದಲ್ಲದೆ, ತಜ್ಞರ ಅಂದಾಜಿನಂತೆ ರೇಷ್ಮೆ ಬೆಳೆಗಾರರು ಸಾಂಪ್ರದಾಯಿಕ ರೇಷ್ಮೆ ಹುಳುಸಾಕಣೆ ಕೈಗೊಂಡು, ರೇಷ್ಮೆ ಗೂಡು ಉತ್ಪತ್ತಿಮಾಡಿ ಪಡೆಯುವ ಲಾಭಕ್ಕಿಂತ ೫ ಪಟ್ಟು ಹೆಚ್ಚಿನ ಆದಾಯ ಈ ರೇಷ್ಮೆ ಪುಡಿ ಉತ್ಪತ್ತಿ ಮಾಡಿ ಮಾರಿದಾಗ ದೊರೆಯುತ್ತದಂತೆ !! ಕಾರಣ, ದಕ್ಷಿಣ ಕೊರಿಯದಲ್ಲಿ ರೇಷ್ಮೆ ಬೆಳೆಗಾರರು ರೇಷ್ಮೆ ಪುಡಿ ಉದ್ಯಮಕ್ಕೆ ಮಾರುಹೋಗಿದ್ದಾರೆ. ಭಾರತದಂತಹ ಮುಂದುವರಿಯುತ್ತಿರುವ ದೇಶದಲ್ಲಿ ಇಂತಹ **ವಿನೂತನ ತಂತ್ರಜ್ಞಾನ** ಮತ್ತು ''**ನೂತನ ಉದ್ಯಮದತ್ತ**'' ಕಣ್ಣು ಹಾಯಿಸುವುದು ಪ್ರಸಕ್ತ ಪರಿಸ್ಥಿತಿಯಲ್ಲಿ ಅವಶ್ಯವಾಗಿದೆ. ಇದರಿಂದ ರೇಷ್ಮೆ ಬೆಳೆಗಾರರು ಉತ್ತಮ ಆರ್ಥಿಕ ಲಾಭ ಪಡೆದು ಭಾರತದ ರೇಷ್ಮೆ ಉದ್ಯಮವನ್ನು ಸುಸ್ಥಿತಿಯಿಂದ ಕಾಪಾಡಿ, ನಿರ್ವಹಿಸಲು ಅನುಕೂಲವಾಗುವುದರಲ್ಲಿ ಸಂದೇಹವಿಲ್ಲ.

**ಡಾ|| ಬಸವರಾಜಪ್ಪ ಎಸ್.**
ಅನ್ವಯಿಕ ಪ್ರಾಣಿಶಾಸ್ತ್ರ ವಿಭಾಗ, ಕುವೆಂಪು ವಿಶ್ವವಿದ್ಯಾಲಯ
ಬಿ. ಆರ್. ಪ್ರಾಜೆಕ್ಟ್ - ೫೭೭ ೧೧೫

# ಭಾರತದಲ್ಲಿ ಬಾಲರ ಬವಣೆ !

# ಯುದ್ಧ ಸಕ್ತ ಮಕ್ಕಳು

**ಮ**ಕ್ಕಳು ಭಯಗ್ರಸ್ತರಾಗಿದ್ದಾರೆ. ಯುದ್ಧದ ತೀವ್ರತೆ ಕಡಿಮೆಯಾಗುತ್ತಿದ್ದರೂ ನ್ಯೂಸ್ ಚಾನೆಲ್‌ಗಳಲ್ಲಿ ಕಳೆದ ಸೆ. 11ರಂದು ಅಮೆರಿಕದ ಎರಡು ಕಡೆ ಸಂಭವಿಸಿದ ಸ್ಫೋಟದ ದೃಶ್ಯ ಕಂಡ ನಂತರ ಶಾಲೆಗಳಲ್ಲೂ ಮಕ್ಕಳು ಸಹಜವಾಗಿಯೇ ಭಯಗೊಂಡಿದ್ದಾರೆ. ಸಮರದ ಕುರಿತಂತೆ ತಾವೂ ಚರ್ಚೆ ಮಾಡಿಕೊಳ್ಳುತ್ತಿದ್ದಾರೆ. ಸೈಬರ್ ಕೆಫೆಗಳಲ್ಲಿ ಹೆಚ್ಚಿನ ಮಕ್ಕಳು ವರ್ಲ್ಡ್ ಟ್ರೇಡ್ ಸೆಂಟರ್ ಧ್ವಂಸಗೊಂಡ ಚಿತ್ರದ ಆಟವನ್ನೇ ಮೊನ್ನೆ ಮೊನ್ನೆಯವರೆಗೂ ನೋಡುತ್ತಿದ್ದರು. ಹಿಂಸೆ ಕೇವಲ ಫಿಲ್ಮ್, ಟಿ.ವಿ. ಸೀರಿಯಲ್‌ಗಳಲ್ಲಿ ಮಾತ್ರ ಅಲ್ಲ, ನ್ಯೂಸ್ ಚಾನೆಲ್‌ಗಳಲ್ಲೂ ಪ್ರಭಾವ ಬೀರುತ್ತದೆ ಎಂದು ಸಾಬೀತಾಗಿದೆ. ಮಕ್ಕಳು ಇಂದು ಇಲೆಕ್ಟ್ರಾನಿಕ್ ಮೀಡಿಯಾಗಳ ಎದುರು

ಶ್ರೀನಿವಾಸ ಜೋಕಟ್ಟೆ

ಅಂಟಿಕೊಂಡಿದ್ದಾರೆ. ಅವುಗಳನ್ನು ನೋಡುತ್ತಾರೆ, ಕಲಿಯುತ್ತಾರೆ. ಕೆಲವು ಮಕ್ಕಳು ತಮ್ಮ ನಿಜ ಜೀವನದಲ್ಲೂ ಅಳವಡಿಸಿ ತೋರಿಸುತ್ತಾರೆ. ಪತ್ರಿಕೆಗಳಲ್ಲಂತೂ ಬಾಲ ಅಪರಾಧಿಗಳ ಸುದ್ದಿ ಆಗಾಗ ವರದಿಯಾಗುತ್ತಲೇ ಇದೆ.

ಇಂದು ಅಫ್ಘಾನಿಸ್ತಾನ ಅಥವಾ ಕಾಶ್ಮೀರದಲ್ಲಿ ಮಕ್ಕಳ ನರಕ ಜೀವನದ ಕುರಿತಂತೆ ನಾವು ತೀವ್ರ ಕಳವಳಪಡುವ ಸ್ಥಿತಿ ಇದೆ. ಬಹುಶಃ ಟಿ.ವಿ.ಯ ಸುದ್ದಿ ಚಾನೆಲ್‌ಗಳನ್ನು ನೋಡಿದವರಿಗೆ ಇದು ತಿಳಿದಿರಬೇಕು. ಪಾಕಿಸ್ತಾನದಲ್ಲಿ ಅಮೆರಿಕದ ಮಿಲಿಟರಿ ಇಳಿದಾಗ ಅಥವಾ ಅಫ್ಘಾನಿಸ್ತಾನದಲ್ಲಿ ಅಮೆರಿಕಾ ಹಲ್ಲೆಯ ವಿರುದ್ಧ, ಪಾಕಿಸ್ತಾನದ ಕೆಲವು ನಗರಗಳಲ್ಲಿ ಯಾವ ಹಿಂಸಾತ್ಮಕ ದೃಶ್ಯ ಗೋಚರಿಸಿದೆಯೋ ಅವುಗಳಲ್ಲಿ ಚಿಕ್ಕ ಚಿಕ್ಕ ಮಕ್ಕಳೂ ಪಾಲುಗೊಂಡಿರುವುದನ್ನು ಗಮನಿಸಿದ್ದೇವೆ. ಓರ್ವ ಎಂಟು ವರ್ಷದ ಹುಡುಗ ಬಂದೂಕು ಎತ್ತಿಕೊಂಡಿದ್ದ. ಆತ ಪ್ರದರ್ಶನ ನಡೆಸುತ್ತಿದ್ದ ಜನರಲ್ಲಿ ಮೊದಲ ಸಾಲಲ್ಲಿದ್ದ. ಆತನ ಅಂಗಿಯಲ್ಲಿ ಏನು ಬರೆದಿತ್ತು ನೆನಪಿದೆಯೇ ? 'ಐ ಆ್ಯಮ್ ಓಸಾಮಾ'.

ಎ.ಕೆ.೪೭ ಅಥವಾ ಅಮೆರಿಕದ ಎಂ-೧೬ ಇಂತಹ ಸ್ವಚಾಲಿತ ಮತ್ತು ಅಪಾಯಕಾರಿ ಶಸ್ತ್ರಗಳನ್ನು ಎತ್ತಿಕೊಂಡಿರುವ ಮಕ್ಕಳಿಗೆ ಅದರ ಅನಾಹುತದ ಅರಿವು ಇದೆಯೋ ? ಅಥವಾ ಅದರ ಅಪಾಯವನ್ನು ತಿಳಿಸಬೇಕಾದವರು ಎಲ್ಲಿದ್ದಾರೆ ?

ಎಂಬತ್ತರ ದಶಕದಲ್ಲಿ ಇಥಿಯೋಪಿಯಾದ ಮಿಲಿಟರಿಯು ೧೫ ವರ್ಷಕ್ಕೂ ಕಡಿಮೆ ಪ್ರಾಯದ ಮಕ್ಕಳನ್ನು ಶಾಲೆಗಳಿಂದ ಅಥವಾ ಬಡ ಬಸ್ತಿಗಳಿಂದ ಪುಸಲಾಯಿಸಿ ತಮ್ಮ ಸೇವೆಯಲ್ಲಿ ಸೇರಿಸಿಕೊಂಡಿದ್ದು ಕೆಲವರಿಗಾದರೂ ನೆನಪಿರಬಹುದು. ಅಂಕಿ ಅಂಶಗಳನ್ನು ಹೇಳುವುದಾದರೆ ಎಂಬತ್ತರ ದಶಕದಲ್ಲಿ ೨೦ ಲಕ್ಷ ಮಕ್ಕಳು ಯುದ್ಧದಲ್ಲಿ ಸಾವನ್ನಪ್ಪಿದ್ದಾರೆ. ೪೦ರಿಂದ ೪೫ ಲಕ್ಷದಷ್ಟು ಮಕ್ಕಳು ನೆಲಬಾಂಬಿಗೆ ಮತ್ತು ಇನ್ನಿತರ ಶಸ್ತ್ರಾಸ್ತ್ರಗಳ ಕಾರಣ ಅಂಗವಿಕಲರಾಗಿದ್ದಾರೆ. ೧೯೯೬ರ ಸಮೀಕ್ಷೆ ಪ್ರಕಾರ ಒಂದು ಕೋಟಿ ೨೦ ಲಕ್ಷ ಮಕ್ಕಳು ಈ ಯುದ್ಧಗಳ ಕಾರಣ ಮನೆ-ಮಠ, ಸಂಬಂಧಿಕರನ್ನು ಕಳಕೊಂಡು ಚೆಲ್ಲಾಪಿಲ್ಲಿ ಚದುರಿಹೋಗಿದ್ದಾರೆ. ಅಥವಾ ನಿರಾಶ್ರಿತರ ಶಿಬಿರದಲ್ಲಿದ್ದಾರೆ. ಅನೇಕ ಮಕ್ಕಳು ಯುದ್ಧದ ಕಾರಣ ಮಾನಸಿಕವಾಗಿ ಹಿಂಸೆಯತ್ತ ಮುನ್ನುಗ್ಗುತ್ತಿದ್ದಾರೆ.



ಶಾಲಾ ಮಕ್ಕಳು

ಉಗಾಂಡದಲ್ಲಿ ೧೯೭೧ರಲ್ಲಿ ಇದಿ ಅಮೀನ್ ಆಡಳಿತದ ನಂತರ ೧೫ ವರ್ಷದಲ್ಲಿ ನಡೆದ ಯುದ್ಧದಲ್ಲಿ ಮಕ್ಕಳನ್ನು ಸಾಕಷ್ಟು ಸಂಖ್ಯೆಯಲ್ಲಿ ಬಳಸಿಕೊಳ್ಳಲಾಗಿದೆ. ಆಡಳಿತದ ರಕ್ತಪಾತದ ಆಟದಲ್ಲಿ ಮಕ್ಕಳನ್ನು ಬಲಿಪಶುಗಳನ್ನಾಗಿಸುವ ಘಟನೆಗಳು ಪ್ರಪಂಚದಲ್ಲಿ ಹೆಚ್ಚುತ್ತಿವೆ. ಇದಕ್ಕಾಗಿ ಏನು ಮಾಡಬೇಕಾಗಿದೆ ? ಆ ನಿಟ್ಟಿನಲ್ಲಿ ಒಂದಿಷ್ಟು ಚರ್ಚೆ ಇಲ್ಲಿ ಮಾಡುತ್ತಿದ್ದೇನೆ:

ಮನೆ ಮಕ್ಕಳಿಗಾಗಿ ವ್ಯಾವಹಾರಿಕ ಪಾಠಶಾಲೆ: ತಮ್ಮ ಭಾವಿ ಜೀವನದ ಪಾತ್ರವನ್ನು ಇಲ್ಲಿಂದಲೇ ರೂಪಿಸಲಾಗುತ್ತದೆ. ವಿಜ್ಞಾನಿ, ಆಡಳಿತಾಧಿಕಾರಿ, ಆಟಗಾರ, ಡಾಕ್ಟರ್, ಲೇಖಕ, ಕಲಾವಿದ.... ಏನೇ ಆಗುವುದಿದ್ದರೂ ಇದಕ್ಕೆ ಆಧಾರ ಮನೆಯಿಂದಲೇ ಮೊದಲು ಸಿಗಬೇಕು. ಮಕ್ಕಳ ಆಸಕ್ತಿ ಯಾವುದು ? ಇದರ ನಿರ್ಣಯ ಬಾಲ್ಯದಲ್ಲಿಯೇ ಅವರಿಗೆ ಬಿಡಬೇಕು. ಅದು ತಪ್ಪು ಎಂದು ಕಂಡುಬಂದರೆ ಅದರ ಮನವರಿಕೆ ಮಾಡಿಕೊಡಬೇಕು. ಈಗ ಏನಾಗುತ್ತಿದೆ ಎಂದರೆ ಕೆಲಸಕ್ಕೆ ಹೋಗುತ್ತಿರುವ ತಂದೆ ತಾಯಿಗೆ ಮನೆಯಲ್ಲಿ ಮಕ್ಕಳು ಏನು ಮಾಡುತ್ತಾರೆ ಎಂದು ತಿಳಿಯುವುದಾದರೂ ಹೇಗೆ ? ''ನಾನು ಸುಶಿಕ್ಷಿತೆ, ನನ್ನ ಬಳಿ ಸಮಯ ಇದೆ. ಹಾಗಿರುವಾಗ ಮನೆಯಲ್ಲಿ ಯಾಕೆ ಕೂರಬೇಕು ?'' ಎನ್ನುವ ತಾಯಿ ಕೂಡ ಇರಬಹುದು. ಕೆಲವು ಮಕ್ಕಳಿಗಂತೂ ತಂದೆ ತಾಯಿ ಕೆಲಸಕ್ಕೆ ಹೋಗುವುದೇ ಖುಷಿಯ ಸಂಗತಿ. ಮನೆಯಲ್ಲಿ ಯಾರೂ ಇಲ್ಲ ಎನ್ನುವಲ್ಲಿ ಈ ಮಕ್ಕಳಿಗೆ ತುಂಬಾ ಆನಂದ ಸಿಗುವುದಂತೆ !

ಮಕ್ಕಳು ಮನೆಯ ಹೊರಗೇ ಇರಲು ಇಷ್ಟಪಡುತ್ತಾರೆ ಎಂದಾದಲ್ಲಿ ಆ ಮನೆಯಲ್ಲಿ ಹೆತ್ತವರು ಏನೋ ತಪ್ಪು ಮಾಡುತ್ತಿದ್ದಾರೆ ಎಂದಾಗುವುದಿಲ್ಲವೇ ? ಅಲ್ಲಿ ಮಕ್ಕಳಿಗೆ ಬೇಕಾದ ಆತ್ಮೀಯರಿಲ್ಲ ಎಂದು ತಿಳಿಯಬೇಕಾಗುತ್ತದೆ. ಹೆತ್ತವರ ಗೈರು ಹಾಜರಿಯಲ್ಲಿ ಮಕ್ಕಳು ಖುಷಿ ಪಡುವುದಕ್ಕೆ ಏನು ಕಾರಣ ?

ಯುನಿಸೆಫ್‌ನ ತಾಜಾ ವರದಿ 'ಸ್ಟೇಟ್ ಆಫ್ ದಿ ವರ್ಲ್ಡ್ ಚಿಲ್ಡ್ರನ್ ೨೦೦೧' ಪ್ರಕಾರ ಕಳೆದ ವರ್ಷ ಪ್ರಪಂಚದಲ್ಲಿ ೧೨.೯ ಕೋಟಿ ಮಕ್ಕಳು ಜನಿಸಿದ್ದಾರೆ. ಇದರಲ್ಲಿ ೧.೧ ಕೋಟಿ ಮಕ್ಕಳು ಜನ್ಮ ಪಡೆಯುವ ಮೊದಲೇ ಸಾವನ್ನಪ್ಪಿವೆ. ಭಾರತದಲ್ಲಿ ಹುಟ್ಟುವ ಪ್ರತಿ ೧೦೦೦ ಮಕ್ಕಳಲ್ಲಿ ೯೮ ಮಕ್ಕಳು ತಮ್ಮ ಐದನೆಯ ಜನ್ಮದಿನ ಆಚರಿಸುವ ಮೊದಲೇ ಸಾವನ್ನಪ್ಪುತ್ತಿವೆ. ಈ ವರದಿಯಲ್ಲಿ ಬಾಲಮೃತ್ಯು ಪ್ರಮಾಣದಲ್ಲಿ ಭಾರತವು ಪ್ರಪಂಚದಲ್ಲಿ ೪೯ನೇ ಸ್ಥಾನದಲ್ಲಿದೆ. ಅಂತೆಯೇ ನಮ್ಮಲ್ಲಿ ೩೩ ಶೇಕಡಾ ಮಕ್ಕಳು ಕನಿಷ್ಠ ತೂಕಕ್ಕಿಂತ ಕಡಿಮೆ ತೂಕ ಹೊತ್ತು ಜನಿಸುತ್ತಿವೆ. ಅದೇ ರೀತಿ ಶಾಲೆಗೆ ಸೇರಿದ ಮಕ್ಕಳಲ್ಲಿ ೫೦ ಶೇಕಡಾ ಮಾತ್ರ ೫ನೇ ತರಗತಿ ತನಕ ಬರುತ್ತಾರೆ. ಉಳಿದ ಮಕ್ಕಳು ಅರ್ಧದಲ್ಲೇ ಓದು ತ್ಯಜಿಸುತ್ತಾರೆ.

ಭಾರತದಲ್ಲಿಂದು ಎಳೆ ಮಕ್ಕಳು ಕ್ರೂರಿಗಳಾಗುತ್ತಿರುವ ಸಂಖ್ಯೆ ಏರುತ್ತಿದೆ. ಇನ್ನೊಂದೆಡೆ ಬಾಲ ಕಾರ್ಮಿಕರ ಸಂಖ್ಯೆಯೂ ಏರುತ್ತಿದೆ. ಇಂದು ವಿಶ್ವದಲ್ಲಿ ಎಲ್ಲಾ ದೇಶಗಳಲ್ಲಿ ತನ್ನ ಅರ್ಥ ವ್ಯವಸ್ಥೆಗೆ ಸಂಬಂಧಿಸಿ ಏನಾದರೂ ಸಮಸ್ಯೆಗಳಿದ್ದರೂ ಭಾರತೀಯ ಉದ್ಯಮದಲ್ಲಿ ಕಳೆದ ಎರಡು ದಶಕಗಳಲ್ಲಿ ವ್ಯಾಪಕವಾಗಿ ಕಾಡುತ್ತಿರುವ ಸಮಸ್ಯೆ ಏನೆಂದರೆ ಅದು ಬಾಲ ಕಾರ್ಮಿಕರ ಸಮಸ್ಯೆ. ಈ ಬಾಲ ಕಾರ್ಮಿಕರು ಶಾರೀರಿಕ, ಭಾವನಾತ್ಮಕ, ಸಾಮಾಜಿಕ ಮತ್ತು ವೈಚಾರಿಕ

ಶೋಷಣೆಗಳು ನಡೆಯುತ್ತಿವೆ. ಇನ್ನು ಬೂಟ್ ಪಾಲೀಶ್, ಹಮಾಲಿ, ಹೋಟೆಲು-ಗ್ಯಾರೇಜು ಗಳಲ್ಲಿರುವ ಮಕ್ಕಳ ಸ್ಥಿತಿಯನ್ನು ಕೇಳುವವರೇ ಅಪರೂಪ.

ಮಾಲೀಕರಿಗೆ ಈ ಕಿರುಪ್ರಾಯದ ಮಕ್ಕಳಿಂದ ಕಡಿಮೆ ಸಂಬಳಕ್ಕೆ ಹೆಚ್ಚು ಕೆಲಸ ಮಾಡಿಸಲು ಸಾಧ್ಯವಾಗುತ್ತದೆ. ಪ್ರಪಂಚದಲ್ಲಿ ಅತೀ ಹೆಚ್ಚಿನ ಸಂಖ್ಯೆಯಲ್ಲಿ ಭಾರತದಲ್ಲಿಯೇ ಬಾಲಕಾರ್ಮಿಕರು ಇರುವುದು. ಏಳು ಕೋಟಿಗೆ ಹತ್ತಿರ ಹತ್ತಿರ ನಮ್ಮ ದೇಶದಲ್ಲಿ ಬಾಲಕಾರ್ಮಿಕರಿದ್ದಾರೆ. ವಿಶ್ವ ಬ್ಯಾಂಕ್‌ನ ರಿಪೋರ್ಟ್‌ನಂತೆ ಏಷ್ಯಾ ಮಹಾದ್ವೀಪದ ದೇಶಗಳಲ್ಲಿ ಬಾಲ ಕಾರ್ಮಿಕರ ಸಂಖ್ಯೆ ೧೫ ಕೋಟಿಯಷ್ಟು ಇದೆಯೆಂದು ನಂಬಲಾಗಿದೆ. ಯೂನಿಸೆಫ್‌ನ ಪ್ರಕಾರ ಸರ್ವಾಧಿಕವಾಗಿ ಅಶಿಕ್ಷಿತ ಮತ್ತು ಬಾಲ ಕಾರ್ಮಿಕರು ಭಾರತದಲ್ಲೇ ಕಂಡುಬರುತ್ತಾರೆ. ಒಟ್ಟು ಕಾರ್ಮಿಕ ಶಕ್ತಿಯ ೬.೫ ಪ್ರತಿಶತ ಬಾಲಕಾರ್ಮಿಕರಿರುವ ಭಾರತದಲ್ಲಿ ಹೆಚ್ಚಿನವರು ೧೨ರಿಂದ ೧೫ ಗಂಟೆಯಷ್ಟು ದುಡಿಯುತ್ತಾರೆ.

ತಜ್ಞರ ಪ್ರಕಾರ ದೇಶದಲ್ಲಿ ಎಲ್ಲಿಯತನಕ ಸರ್ವಸುಲಭ ಶಿಕ್ಷಣ ವ್ಯವಸ್ಥೆ ಕಾಣಿಸುವುದಿಲ್ಲವೋ ಆ ತನಕ ಸುಮಾರು ಒಂದು ಕೋಟಿ ೧೨ ಲಕ್ಷ ಮುಗ್ಧ ಮಕ್ಕಳ ಬಾಲ್ಯಾವಸ್ಥೆ 'ಕಾರ್ಯಸ್ಥಳ'ದಲ್ಲೇ ಸಮಾಪ್ತಿಯಾಗಿಬಿಡುತ್ತದೆ. ಸರಿಯಾದ ಶಿಕ್ಷಣದ ಅಭಾವದಿಂದಲೇ ಬಾಲಕಾರ್ಮಿಕರ ಸಂಖ್ಯೆ ಏರುತ್ತಿದೆ ಹೊರತು ಈ ಸಮಸ್ಯೆ ಕೇವಲ ಬಡತನದಿಂದ ಬಂದಿದೆ ಎಂದು ಇವರು ಒಪ್ಪುವುದಿಲ್ಲ. ಎಲ್ಲಿ ಸರಿಯಾದ ಶಿಕ್ಷಣ ವ್ಯವಸ್ಥೆ ಇದೆಯೋ ಅಲ್ಲಿ ಬಾಲ ಕಾರ್ಮಿಕರ ಸಂಖ್ಯೆ ಕಡಿಮೆ ಕಂಡುಬರುತ್ತದೆ.

ಇನ್ನು ಕೆಲವು ಸಮೀಕ್ಷಕರು ಹೆತ್ತವರು ನಿರುದ್ಯೋಗಿಗಳಾಗಿರುವುದು, ಗೃಹ ವಸ್ತುಗಳ ಕೊರತೆ, ಆರೋಗ್ಯಕ್ಕೆ ಸಂಬಂಧಿಸಿ ಸೌಲಭ್ಯಗಳಿಲ್ಲದಿರುವುದು, ದೊಡ್ಡ ಕುಟುಂಬ,



*ಬಾಲಕಾರ್ಮಿಕರು*

ಸರಿಯಾದ ಶಿಕ್ಷಣ ಸಿಗದಿರುವುದು, ಸರಕಾರದ ಅಧಿಕಾರಿಗಳ ಉದಾಸೀನತೆ, ಇತ್ಯಾದಿ ಬಾಲಕಾರ್ಮಿಕರ ಸಂಖ್ಯೆ ಹೆಚ್ಚಳಕ್ಕೆ ಕಾರಣ ಎನ್ನುವುದೂ ಇದೆ. ಅಂತರ್‍ರಾಷ್ಟ್ರೀಯ ಕಾರ್ಮಿಕ ಸಂಘಟನೆ (ಐ.ಎಲ್.ಓ.) ಮಕ್ಕಳ ಏಳಿಗೆಗಾಗಿ ಶಿಕ್ಷಣ, ನೌಕರಿಯ ತರಬೇತಿ ಮತ್ತು ಸಲಹೆಗಳನ್ನು ನೀಡುತ್ತಾ ಇದೆ.

ಭಾರತದ ಪ್ರಮುಖ ನಗರಗಳಿಗೆ ಪ್ರತಿದಿನ ಅನೇಕ ಮಕ್ಕಳು ತಮ್ಮ ತಮ್ಮ ಊರುಗಳಿಂದ ಓಡಿಬರುತ್ತಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಮನೆಯಿಂದ ಓಡಿಬಂದ ಮಕ್ಕಳನ್ನು ಪತ್ತೆ ಹಚ್ಚಲು ಮತ್ತು ಅವರನ್ನು ಮರಳಿ ಹೆತ್ತವರ ಕೈಗೆ ನೀಡುವಲ್ಲಿ ಅನೇಕ ಸ್ವಯಂಸೇವಾ ಸಂಸ್ಥೆಗಳು ದುಡಿಯುತ್ತಿವೆ. ಪ್ರಮುಖ ಬಸ್ ಸ್ಟ್ಯಾಂಡ್‌ಗಳಲ್ಲಿ, ರೈಲ್ವೆ ಸ್ಟೇಷನ್‌ಗಳಲ್ಲಿ ರಿಕ್ಷಾವಾಲರು, ಡಾಬಾವಾಲರು, ಗೂಡಂಗಡಿಗಳ ಕೆಲವು ಜನರು ಈ ಸಂಸ್ಥೆಗಳಿಗೆ ಮಾಹಿತಿ ತಿಳಿಸುವ ಕೆಲಸ ಮಾಡುತ್ತಿದ್ದಾರೆ.

'ಕಮ್ಯುನಿಟಿ ಏಡ್ ಆ್ಯಂಡ್ ಸ್ಪಾನ್ಸರ್‌ಶಿಪ್ ಪ್ರೋಗ್ರಾಂ' (ಕ್ಯಾಸ್ಪ್) ಸಂಸ್ಥೆಗೆ ಕಳೆದ ವರ್ಷ ೨೫ ವರ್ಷಗಳು ಪೂರ್ತಿಯಾಗಿವೆ. ಇದು ಕುಷ್ಠರೋಗಿಗಳ ಮಕ್ಕಳು, ವೇಶ್ಯೆಯರ ಮಕ್ಕಳು, ಕಾಶ್ಮೀರಿ ಪಂಡಿತರ ಮಕ್ಕಳು, ಕಾರ್ಗಿಲ್ ಯುದ್ಧದಲ್ಲಿ 'ಶಹೀದ್'ಗೊಂಡಿರುವ ಮಕ್ಕಳು, ಇವರೆಲ್ಲರ ಕುರಿತಂತೆ ಕಾಳಜಿ ವಹಿಸಿದ ಸಂಸ್ಥೆಯಾಗಿದೆ.

ನಮ್ಮಲ್ಲಿ 'ಬಾಲಸುಧಾರಣಾ ಗೃಹ' (ರಿಮ್ಯಾಂಡ್ ಹೋಮ್) ಕಳೆದ ಶತಮಾನದ ಬ್ರಿಟಿಷ್ ವಿಚಾರವಾಗಿದೆ. ನಮ್ಮ ಬಾಲಸುಧಾರಣಾ ಗೃಹಗಳ ಕತೆಯೇ ಶೋಚನೀಯ ಸ್ಥಿತಿಗೆ ಕೈಗನ್ನಡಿ. ಇಲ್ಲಿ ಅನಾರೋಗ್ಯಕ್ಕೆ ಒಳಗಾದ ಮಕ್ಕಳನ್ನು ಆಸ್ಪತ್ರೆಗೆ ಸೇರಿಸಿದಾಗಲೂ ಕೈಗೆ ಕೋಳ ಹಾಕಿದ ಘಟನೆ ಮುಂಬಯಿಯಲ್ಲಿದೆ. ಈ ಅಮಾನವೀಯ ದೃಶ್ಯದ ಬಗ್ಗೆ ಭಾರೀ ವಿವಾದ ಉಂಟಾಗಿತ್ತು. ಈ ಮಕ್ಕಳು ಓಡಿ ಹೋಗುತ್ತಾರೆ ಎಂದು ಪೊಲೀಸರು ಕೋಳ ಹಾಕಿದ್ದಂತೆ! ಸರಿಯಾದ ಕಾವಲು ಇಲ್ಲದಿದ್ದರೆ ಆ ಮಕ್ಕಳ ತಪ್ಪೇನು? ಕಾವಲು ಕಾಯುವವರ ಗಮನ ಸರಿ ಇಲ್ಲ, ಅವರು ಸರಿಯಾಗಿ ಡ್ಯೂಟಿ ನಿರ್ವಹಿಸುತ್ತಿಲ್ಲ ಎಂಬುದಕ್ಕೆ ಇದಕ್ಕಿಂತ ಬೇರೆ ಪುರಾವೆ ಯಾಕೆ? ದೊಡ್ಡ ಮಕ್ಕಳು, ಅಲ್ಲಿಯ ನೌಕರರು, ಚಿಕ್ಕ ಮಕ್ಕಳನ್ನು ಹೊಡೆಯುವುದು ಇಂತಹ ಬಾಲಸುಧಾರಣಾ ಗೃಹಗಳಲ್ಲಿ ಮಾಮೂಲಿ ದೃಶ್ಯ.

ಇನ್ನು ಇಂತಹ ಕಡೆ ಮಕ್ಕಳಿಗೆ ನೀಡಲಾಗುವ ಊಟದಲ್ಲಿ ಹುಳು, ಕಲ್ಲು, ಕಸ ಇರುವುದು ಅನೇಕ ಸಲ ದೂರು ಬಂದಿದ್ದಿದೆ. ಹಾಗಿದ್ದರೆ ಮಕ್ಕಳು ಯೋಗ್ಯ ಬುದ್ಧಿ ಕಲಿಯಲಿ ಎಂದು ಇಂತಹ ರಿಮ್ಯಾಂಡ್ ಹೋಮ್‌ಗಳಿಗೆ ಸೇರಿಸಿದಲ್ಲಿ ಅಲ್ಲಿಂದ ಹೊರಬಂದಾಗ ಈ ಮಕ್ಕಳು ಹಿಂಸಾ ಪ್ರವೃತ್ತಿ ಬೆಳೆಸಿಕೊಂಡೇ ಬಂದಿರುವುದು ಆಶ್ಚರ್ಯದ ಮಾತೇನೂ ಅಲ್ಲ.

ಇನ್ನೊಂದೆಡೆ ಅಂತರ್‍ರಾಷ್ಟ್ರೀಯ ಮಾರುಕಟ್ಟೆಯಲ್ಲಿ ಭಾರತೀಯ ಮಕ್ಕಳಿಗೆ ತುಂಬಾ ಬೇಡಿಕೆ ಇದೆ. ದತ್ತು ಪಡೆಯುವ ಯುರೋಪ್ ದೇಶಗಳಾಗಲಿ, ಬೇರೆ ಶ್ರೀಮಂತ ದೇಶಗಳಾದ ರೋಮಾನಿಯಾ, ಲ್ಯಾಟಿನ್ ಅಮೆರಿಕಾ, ಪೂರ್ವ ಯುರೋಪ್, ವಿಯೆಟ್ನಾಮ್, ದಕ್ಷಿಣ ಕೊರಿಯಾ ಮೊದಲಾದ ದೇಶಗಳಾಗಲಿ ಭಾರತೀಯ ಮಕ್ಕಳಿಗೆ ಅಲ್ಲಿ ಹೆಚ್ಚಾದ ಬೇಡಿಕೆ ಇದೆ. ಮಕ್ಕಳನ್ನು ದತ್ತು ತೆಗೆದುಕೊಳ್ಳುವ ಬಗ್ಗೆ 'ಸಿ.ಎ.ಆರ್.ಎ' ಸ್ಥಾಪನೆಯನ್ನು ೧೯೯೫ರಲ್ಲಿ ಮಾಡಲಾಗಿತ್ತು. ಇದು ಕಳೆದ ಐದು ವರ್ಷಗಳಲ್ಲಿ ೧೬,೮೮೬ ಪ್ರಕರಣಗಳನ್ನು ತನ್ನ ಕೈಗೆತ್ತಿಕೊಂಡಿದೆ. ಇವುಗಳಲ್ಲಿ ೬,೩೧೫ ಪ್ರಕರಣಗಳಲ್ಲಿ ಭಾರತೀಯ ಮಕ್ಕಳನ್ನು ಹೊರ ದೇಶಗಳು ದತ್ತು ಪಡೆದವುಗಳಾಗಿವೆ. ವಿದೇಶಗಳಲ್ಲಿ ಭಾರತೀಯ ಹುಡುಗಿಯರನ್ನೇ ಹೆಚ್ಚು ದತ್ತು ಪಡೆಯಲಾಗಿದೆ. ಹೊರಕೊಂಡೊಯ್ದನಂತರ ಈ ಹುಡುಗಿಯರನ್ನು ಮನೆ ಕೆಲಸಕ್ಕೆ, ವೇಶ್ಯಾವೃತ್ತಿಗೆ ಬಳಸಲಾಗಿರುವ ಅನುಮಾನವನ್ನೂ ಪ್ರಕಟಿಸಲಾಗಿದೆ.

ಮಕ್ಕಳ ವ್ಯಕ್ತಿತ್ವ ನಿರ್ಮಾಣದಲ್ಲಿ ಮನೆ, ಶಿಕ್ಷಣ ಮತ್ತು ಪರಿಸರ ಪ್ರಮುಖ ಪಾತ್ರ ನಿರ್ವಹಿಸುವುದು. ಇವುಗಳ ಅಭಾವದಲ್ಲಿ ಮಕ್ಕಳು ಮುಂದಿನ ಅನಾಹುತಗಳನ್ನು ಯೋಚಿಸದೆ ತಮ್ಮದೇ ದಾರಿಯಲ್ಲಿ ಹೆಜ್ಜೆ ಇರಿಸುತ್ತಾರೆ. ಎರಡು ವರ್ಷದ ಹಿಂದೆ ದೆಹಲಿಯಲ್ಲಿ ದೆಹಲಿ ಪೊಲೀಸರು ಒಂದು ಸಮೀಕ್ಷೆಯನ್ನು ಸಂಸ್ಥೆಯೊಂದರ ನೆರವಿನಿಂದ ಮಾಡಿದ್ದರು. ಮಕ್ಕಳಲ್ಲಿ ಆಧುನಿಕ ಜೀವನದ ಪ್ರಭಾವವನ್ನು ಇಲ್ಲಿ ಕಂಡುಕೊಳ್ಳಲಾಯಿತು. ಇಲ್ಲಿ ಶಾಲಾ ಮಕ್ಕಳ ಜೊತೆ ನಡೆಸಿದ ಮಾತುಕತೆಯಲ್ಲಿ ಕಂಡುಬಂದ ಪ್ರಮುಖ ಅಂಶವೆಂದರೆ – ಮಕ್ಕಳು ಸೆಕ್ಸ್, ಜುಗಾರಿ ಮತ್ತು ಶರಾಬು ಇವುಗಳನ್ನು ಮನೋರಂಜನೆಯ ಸಾಧನಗಳಾಗಿರುವುದನ್ನು ಹೇಳಿರುವುದು! ಪಬ್ಲಿಕ್ ಸ್ಕೂಲ್‌ಗಳ ಮಕ್ಕಳು ಧೂಮಪಾನ ಮತ್ತು ಶರಾಬು ಕುಡಿಯುವುದನ್ನು ಒಂದು 'ಶೋಕಿ' ಎಂದು ತಿಳಿದಿದ್ದಾರೆ! ಹುಡುಗಿಯರನ್ನು ಚುಡಾಯಿಸಿದರೆ ತಮಗೆ ಖುಷಿಯಾಗುತ್ತದೆ ಎಂದರಲ್ಲದೆ ಒಳ್ಳೆಯ ಊಟ, ಕಾಮಿಕ್ಸ್ ಪುಸ್ತಕ ಮತ್ತು ಸುಂದರ ಹುಡುಗಿಯರು ತಮಗೆ ತುಂಬಾ ಇಷ್ಟ ಎಂದು ಹೆಚ್ಚಿನ ಮಕ್ಕಳು ತಿಳಿಸಿರುವುದನ್ನು ಈ ಸಮೀಕ್ಷೆಯಲ್ಲಿ ಕಂಡುಕೊಳ್ಳಲಾಯಿತು.

ದೆಹಲಿಯಲ್ಲಿ ಅದೇ ರೀತಿ ರಸ್ತೆ ಬದಿಯ ಕಸ, ಕಾಗದಗಳನ್ನು ಹೆಕ್ಕುವ ಸಾವಿರಾರು ಮಕ್ಕಳು ರೋಗವನ್ನು ತಾವು ಆಹ್ವಾನಿಸುತ್ತಿದ್ದೇವೆ ಎಂದು ತಿಳಿಯುವುದೇ ಇಲ್ಲ. ಆಸ್ಪತ್ರೆಗಳ ಹೊರಗೆ ಬಿಸಾಕಿದ ತುಂಡಾದ ಸಿರಿಂಜ್‌ಗಳು, ಪಿಚಕಾರಿ ಬಾಟಲಿಗಳು, ರಕ್ತದ ಬ್ಯಾಂಡೇಜ್‌ಗಳನ್ನು ಕೈಯಿಂದ ಮುಟ್ಟುತ್ತಾರೆ. ಕಾರ್ಖಾನೆಗಳ ಹೊರಗಿನ ವಿಷಯುಕ್ತ ರಾಸಾಯನಿಕಗಳ ಖಾಲಿಡಬ್ಬ, ತುಕ್ಕು ಹಿಡಿದ ಸ್ಕ್ರ್ಯಾಪ್, ಕೀಟನಾಶಕದ ಖಾಲಿ ಪ್ಯಾಕೆಟ್ - ಒಟ್ಟಾರೆ ನರಕ ತುಂಬಿದ ಸಾಮಗ್ರಿಗಳನ್ನು ಗುಜರಿ ಅಂಗಡಿಗೆ ಮಾರುತ್ತಾರೆ. ಆದರೆ ಇದರಿಂದ ಬರುವ ಹಣ ಈ ಮಕ್ಕಳ ಒಂದು ದಿನದ ಔಷಧಿಗೂ ಸಾಕಾಗಲಾರದು. ಕಸ ಹೆಕ್ಕುವ ಸಮಯ ತಮ್ಮ ಕೈಕಾಲುಗಳಿಗೆ ಗಾಯ ಮಾಡಿಕೊಳ್ಳುವುದೂ ಇದೆ. ದೆಹಲಿಯೊಂದರಲ್ಲೇ ಇಂತಹ ಒಂದು ಲಕ್ಷ ಮಕ್ಕಳನ್ನು ಗುರುತಿಸಲಾಗಿದೆ.

ಕಿಶೋರ ವಯಸ್ಸು ಪರಿವರ್ತನೆಯನ್ನು ಬೇಡುವ ಕಾಲ. ಈ ಸಮಯ ತಂದೆ-ತಾಯಿ ಸರಿಯಾದ ಗಮನವನ್ನು ಮಕ್ಕಳ ಮೇಲೆ ನೀಡಬೇಕು. ಆ ಪ್ರಾಯದಲ್ಲಿ ಮಕ್ಕಳಿಗೆ ತಮ್ಮನ್ನು ಉಪೇಕ್ಷೆ ಮಾಡಲಾಗುತ್ತಿದೆ, ಅವಹೇಳನ ಮಡಲಾಗುತ್ತಿದೆ ಎಂದು ಅರಿವಾದರೆ ಅವರು ಮಾನಸಿಕ ನೋವು ಅನುಭವಿಸಿ ತಪ್ಪು ಕೃತ್ಯಗಳತ್ತ ಹೆಜ್ಜೆ ಇರಿಸಬಹುದಾಗಿದೆ. ಕಳೆದ ವರ್ಷ ಪ್ರಪಂಚದಲ್ಲಿ ವಿಭಿನ್ನ ಸರಕಾರಗಳು ತಮ್ಮ ರಾಜಕೀಯ ಎಜೆಂಡಾಗಳಲ್ಲಿ ಮಕ್ಕಳ ಹಿತವನ್ನು ಮುಂದಿರಿಸಿ ಮೊದಲ ಬಾರಿ ಉಪಯುಕ್ತ ಸ್ಥಾನಮಾನ ನೀಡಿವೆ.

ಕೊನೆಗೂ, ಮಗು ಅಳದೆ ಯಾರೂ ಆ ಕಡೆ ಗಮನ ನೀಡಲಾರರು ಅಲ್ಲವೇ?

**ಚಿತ್ರ, ಲೇಖನ : ಶ್ರೀನಿವಾಸ ಜೋಕಟ್ಟೆ**
ಪೋಸ್ಟ್ ಜೋಕಟ್ಟೆ, ವಯಾ : ಬಜಪೆ, ಮಂಗಳೂರು ತಾಲ್ಲೂಕು, ಕರ್ನಾಟಕ



**ಯಾ**ವುದೇ ಶ್ರೇಷ್ಠ ಕೃತಿ ತನ್ನ ಹೊರಮೈ ವಿನ್ಯಾಸವನ್ನು ಒಳವಿನ್ಯಾಸದ ಮೂಲಕ ಉಲ್ಲಂಘಿಸುತ್ತ, ಅದೊಂದು ಕಥೆಯೋ ಕಾವ್ಯವೋ ನಾಟಕವೋ ಆಗಿ ಉಳಿಯದೆ ಅಂತಿಮವಾಗಿ ಅದೊಂದು ಕೃತಿಯಾಗಿ ಸೃಜನ ಶೀಲ ಜೀವಂತಿಕೆಯನ್ನು ಪಡೆಯುತ್ತದೆ. ಜಿ. ಎನ್. ಮೋಹನ್ ಅವರ 'ನನ್ನೊಳಗಿನ ಹಾಡು ಕ್ಯೂಬಾ' ಪ್ರವಾಸ ಕಥನವೆಂಬ ಹಣೆಪಟ್ಟಿ ಹೊಂದಿದ್ದರೂ ಒಮ್ಮೆ ಕಾವ್ಯವಾಗಿ, ಮತ್ತೊಮ್ಮೆ ಕಥೆಯಾಗಿ, ಇನ್ನೊಮ್ಮೆ ಆತ್ಮಕಥನವಾಗಿ, ಅಂತಿಮವಾಗಿ ಒಂದು ಸೃಜನಾತ್ಮಕ ಕೃತಿಯಾಗಿ ಓದುಗರನ್ನು ತಲುಪುತ್ತದೆ.

ಕನ್ನಡದ ಆರಂಭದ ಪ್ರವಾಸ ಕಥನಗಳು ಮತ್ತೊಂದು ದೇಶವನ್ನು ಕಂಡಾಗಿನ ಸಂಭ್ರಮವನ್ನು ರೋಚಕವಾಗಿ ವರ್ಣಿಸುವಲ್ಲಿ ಮುಳುಗಿದ್ದವು. ಇದು ಭಿನ್ನ ಸಾಹಿತ್ಯ ಪ್ರಕಾರವೊಂದರ ಸ್ಪರ್ಶದ ಬೆರಗು ಮತ್ತು ಆ ಕಾಲಘಟ್ಟದ ರೊಮ್ಯಾಂಟಿಕ್ ಮೌಲ್ಯಗಳ ಪ್ರತಿಧ್ವನಿಯೂ ಆಗಿದ್ದುದರಿಂದ ಓದುಗರನ್ನು ಆಕರ್ಷಿಸಿತು. ಎರಡನೆಯ ಹಂತದಲ್ಲಿ ಎರಡು ಅರ್ಥ ವ್ಯವಸ್ಥೆ, ರಾಜಕೀಯ ವ್ಯವಸ್ಥೆ, ಸಾಂಸ್ಕೃತಿಕ ಸಂದರ್ಭಗಳನ್ನು ತೌಲನಿಕವಾಗಿ ಅಧ್ಯಯನ ಮಾಡುವ ವೈಚಾರಿಕತೆಯನ್ನು ಮೈಗೂಡಿಸಿಕೊಂಡು ಪ್ರವಾಸ ಕಥನದ ಹರಹನ್ನು ಹೆಚ್ಚಿಸಿದವು. ಭಾರತದ ವಿವಿಧ ರಾಜ್ಯಗಳನ್ನು ಕುರಿತಾಗಿ ಬಂದ ಪ್ರವಾಸ ಕಥನಗಳು ಈ ಮೇಲಿನ ಎರಡೂ ಮಾದರಿಗಳನ್ನು ಮೈಗೂಡಿಸಿಕೊಂಡವು. ಈ ದೃಷ್ಟಿಯಿಂದ ನೋಡಿದಾಗ ಜಿ. ಎನ್. ಮೋಹನ್ ಅವರ 'ನನ್ನೊಳಗಿನ ಹಾಡು ಕ್ಯೂಬಾ', ಕಂಡದ್ದನ್ನು ಕಾವ್ಯವಾಗಿಸುವ ಲೇಖಕನ ಸೂಕ್ಷ್ಮ ಸಂವೇದನಾಶೀಲತೆ ಮತ್ತು ಸೃಜನಶೀಲ ತಾಕತ್ತು, ಸಮಾಜವಾದಿ ದೃಷ್ಟಿಕೋನ ಹಾಗೂ ಬದ್ಧತೆ, ವಿಶಿಷ್ಟವಾದ ಒಳನೋಟಗಳ ಕಾರಣಗಳಿಂದ ಕನ್ನಡ ಪ್ರವಾಸ ಕಥನದ ವಿಸ್ತರಣೆಯಾಗುತ್ತದೆ.



ಪುಟ : ೧೧೨ ಬೆಲೆ : ೫೦

ಲೋಹಿಯಾ ಪ್ರಕಾಶನ, ಬಳ್ಳಾರಿ

ಕ್ಯೂಬಾ ಗುಲಾಮಗಿರಿಯ ಯಾತನೆಯನ್ನನುಭವಿಸಿ ಸಮಾಜವಾದಿ ಪರಿಕಲ್ಪನೆಯಲ್ಲಿ ಅರಳಿ ನಿಂತ ಪುಟಾಣಿ ದೇಶ. ಸಾಮ್ರಾಜ್ಯಶಾಹಿ ತುಳಿತಕ್ಕೆ ಎದೆಯೊಡ್ಡಿ ಬದುಕುತ್ತಿರುವ ಕ್ಯೂಬಾದ ಬದುಕೇ ಒಂದು ಮಹಾಕಾವ್ಯ, ಆತ್ಮಗೌರವದ ವ್ಯಾಖ್ಯಾನ, ಸಾಮುದಾಯಿಕ ಚಿಂತನೆಯ ರೂಪಕ. ಇಂಥ ಕ್ಯೂಬಾಕ್ಕೆ 'ಉನ್ ಫೆಸ್ಟಿವಲ್'ನ ಪ್ರತಿನಿಧಿಯಾಗಿ ಹೋಗಿಬಂದ ಲೇಖಕರು ಈ ಕೃತಿಯಲ್ಲಿ ಕ್ಯೂಬಾದ ಸಮಾಜವಾದಿ ಹೋರಾಟ, ಸಾಮ್ರಾಜ್ಯಶಾಹಿಗಳ ಕಬಂಧಬಾಹು ಹಾಗೂ ಆತ್ಮಸಮ್ಮಾನವನ್ನು ಮಾರಿಕೊಂಡಿರುವ ಭಾರತೀಯರ ಗುಲಾಮೀ ಪ್ರಜ್ಞೆಯನ್ನು ಪರಸ್ಪರ ಮುಖಾಮುಖಿಯಾಗಿಸುತ್ತ ಮಾರ್ಕ್ಸ್ ಚಿಂತನೆಗಳ ಪ್ರಾಯೋಗಿಕ ನೆಲೆಯಾದ ಕ್ಯೂಬಾದ ಸಾಧನೆ ಗುರ್ತಿಸುತ್ತಾರೆ.

ಹೊಟ್ಟೆಯಲ್ಲಿ ಅಳುವಿಟ್ಟುಕೊಂಡು ನಾದದ ಅಲೆಯ ಮೇಲೆ ನಿಂತ ದೇಶ ಕ್ಯೂಬಾ. ಮೇ ಒಂದರಂದು ಒಂದು ರೂಪಾಯಿಯ ಸಣ್ಣ ಕೂಪನ್ ಆಗಿ ಕಿಸೆ ಸೇರಿದ ದೇಶ ಎದೆಯ ಮಿಡಿತವಾಗಿ ಬೆರೆತುಹೋದದ್ದನ್ನು ಹೇಳುತ್ತಾರೆ. ಆರಂಭದಲ್ಲಿಯೇ ಕ್ಯೂಬಾದೊಂದಿಗಿನ 'ದೂರ'ವನ್ನು ಭಾವನಾತ್ಮಕವಾಗಿ ನಿರಾಕರಿಸುತ್ತ, ಓದುಗರ ಪ್ರಜ್ಞೆಯಲ್ಲಿರಬಹುದಾದ 'ಅಪರಿಚಿತತನ'ವನ್ನು ನಿವಾರಿಸುತ್ತಾರೆ. 'ಜಗತ್ತಿನ ಕನಸುಗಾರರ ನಡುವೆ ಗೆರೆಗಳಿಲ್ಲ', 'ಇವರೆಲ್ಲ ಎದೆಯಲ್ಲಿ ಕಾವ್ಯ ಕೈಯಲ್ಲಿ ಖಡ್ಗ ಹಿಡಿದ ಪಂಪನ ಬಂಧುಗಳು' – ಇಂಥ ಮಾತುಗಳು ಮಾನವೀಯತೆಯ ಸರಪಳಿಗಳಾಗಿ ಎದೆಯೆದೆಯನ್ನು ಬೆಸೆಯುತ್ತವೆ.

ಕ್ಯೂಬಾ ಓದುಗರೆದುರು ತೆರೆದುಕೊಳ್ಳುವುದು 'ಉನ್ ಫೆಸ್ಟಿವಲ್'ನ ಅನುಭವಗಳೊಂದಿಗೆ. ಎ. ಪಿ. ಯಂಥ ಸುದ್ದಿಸಂಸ್ಥೆಗಳ ಸೆನ್ಸಾರ್‌ನಿಂದಾಗಿ ಭೂಪಟದ ಒಂದು ಚಿಕ್ಕ ನಕಾಶೆಯಾಗಿ ಮಾತ್ರ ಜಗತ್ತಿಗೆ ಗೊತ್ತಿರುವ ಕ್ಯೂಬಾ ಆತ್ಮಾಭಿಮಾನದ ಮತ್ತೊಂದು ಹೆಸರಾಗಿ ದಾಖಲಾಗುತ್ತದೆ. ಕಳೆದ ೫೦ ವರ್ಷಗಳಿಂದ ಸಾಮ್ರಾಜ್ಯಶಾಹಿ ವಿರೋಧಿ ಹೋರಾಟದ 'ಸೌಹಾರ್ದತಾ ಉತ್ಸವ' ಕ್ಯೂಬಾದಲ್ಲಿ ನಡೆಯುತ್ತಿದೆ. ಅಮೆರಿಕಾ ಹಲ್ಲು ಮಸೆಯುತ್ತದೆ. ಜಗತ್ತಿನ ಮೂಲೆ ಮೂಲೆಗಳಿಂದ, ಅಮೆರಿಕಾದಿಂದಲೂ, ಜನನದಿ ಕ್ಯೂಬಾದತ್ತ ಹರಿಯುತ್ತದೆ. ಅಮೆರಿಕಾ ಕಾನೂನು ಮಾಡುತ್ತದೆ. ವಿಮಾನಗಳನ್ನು ಹೊಡೆದುರುಳಿಸುತ್ತದೆ. ರಾಸಾಯನಿಕ ದಾಳಿಯನ್ನ ನಡೆಸುತ್ತದೆ. 'ಉನ್ ಫೆಸ್ಟಿವಲ್'ಗೆ ಬಂದ ಜಗತ್ತಿನ ನಾನಾ ಭಾಗಗಳ ಪ್ರತಿನಿಧಿಗಳು ಬಂಡವಾಳಶಾಹಿತ್ವದ ಬರ್ಬರತೆಯನ್ನು ಬಯಲಿಗೆಳೆಯ ತೊಡಗುತ್ತಾರೆ. ಕಟಕಟೆ ಹತ್ತಿ ನ್ಯಾಯ ಕೇಳುವವರ ಅಳಲಿಗೆ ಕ್ಯೂಬಾ ನೆಲವಾಗುತ್ತದೆ. ಜಾಗತೀಕರಣದ ರುಚಿಯನ್ನು ಅದೇ ತಾನೇ ಉಣ್ಣತೊಡಗಿದ್ದ ನೂರಾರು ದೇಶಗಳ ಮೂಕರಾಗಕ್ಕೆ ಆತ್ಮಾಭಿಮಾನಕ್ಕಾಗಿ ಅನ್ನ-ಬಟ್ಟೆ ಕಳಕೊಂಡ ಕ್ಯೂಬನ್ನರೇ ಮಾತಾಗುತ್ತಾರೆ. ಮಕ್ಕಳನ್ನು ಹುಡುಕುತ್ತಿರುವ ಬರಿಹೊಟ್ಟೆಯ ತಾಯಂದಿರು ಭಾಷ್ಯ ಬರೆಯುತ್ತಾರೆ. – ಇಲ್ಲಿಯ ವಿವರಗಳು, ಬಲಾಢ್ಯ ರಾಷ್ಟ್ರಗಳು ಜಗತ್ತಿನ ಮೂಲೆ ಮೂಲೆಗಳ ಅಸಹಾಯಕ ದೇಶಗಳನ್ನು 'ಆರ್ಥಿಕ ಭಯೋತ್ಪಾದನೆಗೆ' ಒಡ್ಡುತ್ತಿರುವ ಸ್ಥಿತಿಯನ್ನು ಪರಿಚಯಿಸುತ್ತವೆ.

**ಡಾ|| ವಿನಯಾ**

ಗುಲಾಮಗಿರಿಯನ್ನು ಹಾಸಿ-ಹೊದ್ದು ಮಲಗಿರುವ ಭಾರತೀಯ ಪ್ರಜ್ಞೆಯನ್ನು ಕ್ಯೂಬಾ ಕಲಕುತ್ತದೆ. ಚರಿತ್ರೆಯಲ್ಲಿ ಭಾರತದಂತೆಯೇ ರಾಜಕೀಯ-ಸಾಂಸ್ಕೃತಿಕ ದಬ್ಬಾಳಿಕೆಗೆ ಒಳಗಾದ ದೇಶ ಕ್ಯೂಬಾ. ಇಂದು ಜಗತ್ತಿಗೆ ಸ್ವಾಭಿಮಾನದ ಪಾಠ ಹೇಳುವಷ್ಟು ಬದಲಾಗಿದೆ. ಹಾಗಾಗಿ ಕ್ಯೂಬಾದ ಚರಿತ್ರೆಯನ್ನು ಲೇಖಕರು ತುಂಬ ಮುತುವರ್ಜಿಯಿಂದ ದಾಖಲಿಸುತ್ತಾರೆ. ಮೊದಲು ಸ್ಪೇನ್ ಆಮೇಲೆ ಅಮೆರಿಕಾದ ಹಿಡಿತಕ್ಕೊಳಪಟ್ಟ 'ಜಗತ್ತಿನ ಸಕ್ಕರೆ ಬಟ್ಟಲ' ತುಂಬ ಕಹಿ ಸತ್ಯಗಳು. ಯುದ್ಧ ಕ್ಯೂಬನ್ನರ ಅನಿವಾರ್ಯತೆಯೇ ಆಗಿಬಿಟ್ಟಿತು. ೧೮೬೮ರಲ್ಲಿ ಸ್ಪೇನ್ ವಿರುದ್ಧ ನಡೆದ ಯುದ್ಧದಲ್ಲಿ ೪ ಲಕ್ಷ ಕ್ಯೂಬನ್ನರು ಸತ್ತಿದ್ದರು. ಜೋಸ್ ಮಾರ್ಟಿ ಕ್ರಾಂತಿಯ ನೇತೃತ್ವ ವಹಿಸಿ ಸ್ವಾತಂತ್ರ್ಯ ಸಿಗುತ್ತಿದೆ ಎಂಬ ಸಂದರ್ಭದಲ್ಲಿ ನಡೆದ ಅಂತರ್‌ರಾಷ್ಟ್ರೀಯ ರಾಜಕೀಯದಲ್ಲಿ ಕ್ಯೂಬಾದ ಅಧಿಕಾರ ಅಮೆರಿಕಾದ ಕೈಗೆ ರವಾನೆಯಾಯ್ತು. ತಮ್ಮ ನೆಲದಲ್ಲಿ ತಾವೇ ಅನಾಥರಾಗುವ ಸ್ಥಿತಿ ಕ್ಯೂಬನ್ನರದ್ದಾಯಿತು. ಅಮೆರಿಕ ವ್ಯಾಪಾರ, ಪ್ರಜಾಪ್ರಭುತ್ವ, ಶಾಂತಿ ಕಾರ್ಯಾಚರಣೆಯ ಹೆಸರಿನಲ್ಲಿ ಕ್ಯೂಬಾವನ್ನು ತನ್ನ ವಸಾಹತಾಗಿಸಿಕೊಂಡು ಮೆರೆಯಿತು. ಒಂದು ಎಕರೆಗೆ ಒಂದು ಡಾಲರ್ ಬೆಲೆಯಲ್ಲಿ ಕ್ಯೂಬಾದ ಫಲವತ್ತಾದ, ಆಯಕಟ್ಟಿನ ಭೂಭಾಗ ಅಮೆರಿಕಾದ ಬಂಡವಾಳಶಾಹಿಗಳ ಕೈಸೇರಿತು. ಕ್ರಾಂತಿಯ ಅನಿವಾರ್ಯತೆ ತೀವ್ರವಾಗತೊಡಗಿತ್ತು. ಕ್ಯೂಬಾದ ಮಣ್ಣ ತುಂಬ ಹೆಣ, ನೆಲದ ತುಂಬ ಗೋರಿಗಳಿದ್ದವು. – ಈ ಚರಿತ್ರೆ ಕೇವಲ ಕ್ಯೂಬಾದ್ದಲ್ಲ, ಬಂಡವಾಳಶಾಹಿಗೆ ಅಡಿಯಾದ ಬಹುತೇಕ ರಾಷ್ಟ್ರಗಳದ್ದು. ಹಾಗಾಗಿ ಕ್ಯೂಬಾದ ಇತಿಹಾಸ ಬರಿ ಇತಿಹಾಸವಲ್ಲ, ಅದೊಂದು ವರ್ತಮಾನ. ಜಗತ್ತಿನ ಬಹುತೇಕ ಭಾಗಗಳಲ್ಲಿ ಈ ಚರಿತ್ರೆ ಪುನರಾವರ್ತನೆ ಆಗುತ್ತಲೇ ಇದೆ.

ಗುಲಾಮಗಿರಿಯ ಹೇಸಿಗೆ ತಿಂದ ಕ್ಯೂಬಾ ಸ್ವಾತಂತ್ರ್ಯ ಪ್ರೀತಿಯ ಹೂಗಳನ್ನು ಹೆತ್ತಿತ್ತು. ಅವರೇ ಚೇ ಗೆವಾರ ಮತ್ತು ಫಿಡಲ್ ಕ್ಯಾಸ್ಟ್ರೋ. ಇಬ್ಬರೂ 'ಗ್ರಾನ್ಮಾ' ನೌಕೆಯೇರಿ, ಗೆರಿಲ್ಲಾ ಯುದ್ಧ ನಡೆಸಿದರು. ಇಂದು ಅಮೆರಿಕಾದ ರಾಜಕೀಯ ಹಿಡಿತ ದಾಟಿದ ಕ್ಯೂಬಾ, ಆರ್ಥಿಕ ದಿಗ್ಬಂಧನದ ದಬ್ಬಾಳಿಕೆಯನ್ನು ಎದುರಿಸುತ್ತಿದೆ. ಅಮೆರಿಕಾದ ನವವಸಾಹತುಶಾಹಿ ಧೋರಣೆಗೆ ಒಳಗಾದ ಭಾರತೀಯ ಪ್ರಜ್ಞೆಯ ಸ್ಥಗಿತತೆಯಲ್ಲಿಂದ ಕ್ಯೂಬಾದ ಸ್ವಾತಂತ್ರ್ಯ ಹೋರಾಟದ ಎರಡನೆಯ ಘಟ್ಟ ಆರಂಭಗೊಂಡಿದೆ. ಕ್ಯೂಬಾದ ಮಾನ-ಸಮ್ಮಾನದ ಹೋರಾಟ ಭಾರತದ ಹೇಡಿತನವನ್ನು ಸಾಕ್ಷೀಕರಿಸುವುದು ಈ ಕೃತಿಯ ಪ್ರಸ್ತುತತೆಯಾಗಿದೆ.

ಕಳೆದ ೫೦ ವರ್ಷಗಳಿಂದ ಮಾರ್ಕ್ಸ್ ಚಿಂತನೆಯ ಬದ್ಧತೆಯನ್ನು ಬದುಕಾಗಿಸಿಕೊಂಡಿರುವ ಕ್ಯೂಬಾ, ವಚನಕಾರರ 'ಮಹಾಮನೆ'ಯ ಕಲ್ಪನೆಯನ್ನು ಪ್ರಾಯೋಗಿಕವಾಗಿಸುವ ನಿರಂತರ ಶ್ರಮದಲ್ಲಿದೆ. ಸೋವಿಯತ್ ಒಕ್ಕೂಟದ ಪತನಾನಂತರ ಕ್ಯೂಬಾ ತೀವ್ರ ಸಂಕಷ್ಟಗಳನ್ನೆದುರಿಸಿದೆ. ಬ್ರೆಡ್ಡು ಹಂಚಿ ತಿನ್ನುವ, ಹಾಲಿಲ್ಲದ ಕಾಫಿ ಕುಡಿವ, ತಿಂಗಳಿಗೊಂದು ಸೋಪು ಉಪಯೋಗಿಸುವ, ದೇಶದ ಮಕ್ಕಳ ಶಾಲಾ ಬಸ್ಸುಗಳ ಪೆಟ್ರೋಲಿಗಾಗಿ ಕಾಲ್ನಡಿಗೆಯನ್ನೋ ಸೈಕಲ್ಲನ್ನೋ ಬಳಸುವ, ಒಂದು ಆಸ್ಪಿರಿನ್ ಮಾತ್ರೆಯೂ ಹೊರಗಿನಿಂದ ಬರಲಾರದ ಸಂದರ್ಭದಲ್ಲಿ ಪರ್ಯಾಯ ವೈದ್ಯಕೀಯ ವ್ಯವಸ್ಥೆಯನ್ನು ರೂಪಿಸಿಕೊಂಡ, ತೇಪೆ ಹಚ್ಚಿದ ಅಂಗಿಯನ್ನೇ ಬಾವುಟದಷ್ಟು ಗೌರವದಿಂದ ಧರಿಸುವ ಆತ್ಮಾಭಿಮಾನಿಗಳ ದೇಶ ಕ್ಯೂಬಾ. ಶಿಕ್ಷಣ, ಕ್ರೀಡೆ, ಕಲೆ, ವೈದ್ಯಕೀಯ ರಂಗಗಳಲ್ಲಿ ಕ್ಯೂಬಾ ಸಾಧಿಸಿದ ಸಾಧನೆ ಅಪ್ರತಿಮವಾದದ್ದು, ಅಪರೂಪವಾದದ್ದು. 'ಮಾನವ ಮುಖಿ ಅಭಿವೃದ್ಧಿಯ ಚಿಂತನಾ ಕ್ರಮಗಳ' ಕ್ಯೂಬಾ ಜಗತ್ತಿಗೆ ಅಚ್ಚರಿಯನ್ನುಂಟುಮಾಡಿದೆ. ಈ ಕೃತಿ ಒಳಗೊಂಡ ಹಲವಾರು ನಿದರ್ಶನಗಳು ಕ್ಯೂಬಾದ ಆಲೋಚನಾ ವಿಧಾನವನ್ನು ಗಂಭೀರವಾಗಿ

(೫೭ನೇ ಪುಟಕ್ಕೆ)

ವಿಶ್ವವೀಕ್ಷಣೆ

# ಜಾರ್ಜ್ ಬುಷ್ ಭಾಷಣ – ಹುಚ್ಚು ಸಾಹಸಿಯ ಅವಿವೇಕದ ಅಬ್ಬರ

ಸೀಯಾರ್ಕೆ

ಅಮೆರಿಕದ ಅಧ್ಯಕ್ಷ ಜಾರ್ಜ್ ಬುಷ್ ಮತ್ತು ಆತನ ನಿಷ್ಠಾವಂತ ಭಂಟ ಬ್ರಿಟಿಷ್ ಪ್ರಧಾನಿ ಟೋನಿ ಬ್ಲೇರ್ ದ್ವಯರಿಗೆ ಭಯೋತ್ಪಾದಕತೆಯ ವಿರುದ್ಧ ನಡೆಸಿರುವ ಸಮರಕ್ಕಾಗಿ ಈ ವರ್ಷದ ನೊಬೆಲ್ ಶಾಂತಿ ಪಾರಿತೋಷಕ ನೀಡಬೇಕೆಂದು ಶಿಫಾರಸು ಮಾಡಲಾಗಿದೆ ಎಂಬ ಸುದ್ದಿ ಪತ್ರಿಕೆಗಳಲ್ಲಿ ಬಂದಿದೆ. ಇದರಲ್ಲಿ ಆಶ್ಚರ್ಯವೇನಿಲ್ಲ. ಇವರಿಬ್ಬರೂ ಮಾಡಿರುವ ಘನಂದಾರಿ ಕೆಲಸ ಅಫ್ಘಾನಿಸ್ತಾನದ ಮೇಲೆ ಸತತವಾಗಿ ಅರವತ್ತು ಎಪ್ಪತ್ತು ದಿನಗಳ ಕಾಲ ಬಾಂಬುಗಳ ಮಳೆ ಸುರಿಸಿ ಅಮಾನುಷ ರೀತಿಯಲ್ಲಿ ಸ್ತ್ರೀಯರು ಆಬಾಲವೃದ್ಧರಾದಿಯಾಗಿ ಅಮಾಯಕ ಜನರ ಮಾರಣ ಹೋಮ ನಡೆಸಿದ್ದು, ಮೊದಲೇ ದೀರ್ಘಕಾಲದ ಯುದ್ಧದಿಂದ ನುಚ್ಚುನೂರಾಗಿದ್ದ ದೇಶವನ್ನು ನೆಲಸಮಗೊಳಿಸಿ ಕೈಗೊಂಬೆ ಸರಕಾರವೊಂದನ್ನು ಸ್ಥಾಪಿಸಿದ್ದು. ಇದಕ್ಕೆ ನೊಬೆಲ್ ಪಾರಿತೋಷಕ ಅವರಿಗೆ ದೊರೆಯಲೂ ಬಹುದು. ಎಷ್ಟೋ ಮಂದಿ ಅಪಾತ್ರರಿಗೆ ಈ ಶಾಂತಿ ಪ್ರಶಸ್ತಿ ಈವರೆಗೆ ದೊರೆತಿದೆ.

ಇನ್ನು ಭಯೋತ್ಪಾದಕತೆಯ ನಿರ್ಮೂಲನ ಕಾರ್ಯ ಎಷ್ಟುಮಟ್ಟಿಗೆ ಆಗಿದೆ ಎನ್ನುವುದು ಬೇರೆಯ ವಿಷಯ. ಆದರೆ ಇದರಿಂದ ಅಮೆರಿಕನ್ ಸಾಮ್ರಾಜ್ಯಶಾಹಿಗಳ ಕೈಗೆ ತಮ್ಮ ಅಧಿನಾಯಕತ್ವ ಹೊರಿಸುವ ಅಪೇಕ್ಷೆಯನ್ನು ಈಡೇರಿಸಿಕೊಳ್ಳಲು ಹೊಸ ಅಸ್ತ್ರವೊಂದು ಸಿಕ್ಕಿದಂತಾಗಿದೆ. ಭಯೋತ್ಪಾದಕತೆಯನ್ನು ವಿರೋಧಿಸುವ ನೆಪದಿಂದ ತನ್ನ ಆದೇಶಗಳಿಗೆ, ಅಭಿಲಾಷೆಗಳಿಗೆ ಮಣಿಯದಿರುವ ಸ್ವತಂತ್ರ ರಾಷ್ಟ್ರಗಳನ್ನು ಮಿಲಿಟರಿ ಬಲದಿಂದ ಬಗ್ಗುಬಡಿಯುವ ಹಂಚಿಕೆಯನ್ನು ಈಡೇರಿಸಿಕೊಳ್ಳಲು ಪರವಾನಗಿ ಸಿಕ್ಕಂತಾಗಿದೆ. ಇದು ಸ್ವತಃ ಕಳ್ಳನೇ ಪೊಲೀಸು ವೇಷ ಧರಿಸಿ ದರೋಡೆಗೆ ಹೊರಟಿರುವಂತಿದೆ. ಅಮೆರಿಕದ ಅಧ್ಯಕ್ಷ ಜಾರ್ಜ್ ಬುಷ್ ಜನವರಿ ೩೧ರಂದು ವಿದೇಶಾಂಗ ನೀತಿ ನಿರೂಪಿಸಿ ಮಾಡಿದ ಭಾಷಣ ಅದಕ್ಕೆ ಸಾಕ್ಷಿ. ಸೆಪ್ಟೆಂಬರ್ ೧೧ರ ನಂತರ, ಅದರಲ್ಲೂ ಅಫ್ಘಾನಿಸ್ತಾನದ ಮೇಲೆ ಯುದ್ಧದ ನಂತರ ಈ ಜಾರ್ಜ್ ಬುಷ್ ಮಹಾಶಯನ ನಾಲಿಗೆಗೆ, ಮಹದಾಶೆಗೆ ಬಿಗಿಯೇ ಇಲ್ಲದೆ ಹೋಗಿದೆ. ತನ್ನನ್ನು ಎದುರಿಸುವವರು ಈ ಜಗತ್ತಿನಲ್ಲಿ ಯಾರೂ ಇಲ್ಲ ಎಂಬ ಅಹಂಕಾರದ ದನಿ ಆತನ ಮಾತುಗಳಲ್ಲಿ ಎದ್ದು ಕಾಣುತ್ತದೆ. ಅಮೆರಿಕದ ಪತ್ರಿಕೆಗಳೇ ಆತನ ಮಾತುಗಳಿಂದ ಗಾಬರಿಗೊಂಡಿವೆ. ''ಅಫ್ಘಾನಿಸ್ತಾನದ ಮೇಲಿನ ವಿಜಯದಿಂದ ಮತ್ತರಾಗಿ ಬುಷ್ ಹುಚ್ಚು ಸಾಹಸದಲ್ಲಿ ತೊಡಗಕೂಡದು. ಸೆಪ್ಟೆಂಬರ್ ೧೧ ಬುಷ್‌ಗೆ ಅನಿರ್ಬಂಧವಾಗಿ ದಾಳಿ ನಡೆಸುವ ಪರವಾನಗಿ ನೀಡಿಲ್ಲ. ಭಯೋತ್ಪಾದನೆಯ ವಿರುದ್ಧ ಅಮೆರಿಕದ ಈಗಿನ ಯಶಸ್ಸಿನಿಂದ ನಾವು ಹೆಮ್ಮೆ ಪಡಬಹುದು. ಆದರೆ ಈ ಕಾರ್ಯಾಚರಣೆ ಒಂದು ಘಟ್ಟದಲ್ಲಿ ನಮಗೇ ತಿರುಗೇಟಾದರೆ, ನಾವು ಯಾರನ್ನೂ ದೂಷಿಸುವಂತಿಲ್ಲ'' ಎಂದು ಅಮೆರಿಕದ ಪ್ರಮುಖ ದಿನ ಪತ್ರಿಕೆ 'ನ್ಯೂಯಾರ್ಕ್ ಟೈಂಸ್' ತನ್ನ ಸಂಪಾದಕೀಯದಲ್ಲಿ ಹೇಳಿರುವುದು ಗಮನಾರ್ಹ. ಇರಾಕ್, ಇರಾನ್ ಮತ್ತು ಉತ್ತರ ಕೊರಿಯಾ ರಾಷ್ಟ್ರಗಳನ್ನು 'ಪುಂಡ ರಾಷ್ಟ್ರಗಳು' ಎಂದು ಕರೆದು ಜಾರ್ಜ್ ಬುಷ್ ಸೈನಿಕ ಕಾರ್ಯಾಚರಣೆ ಬೆದರಿಕೆ ಹಾಕಿದ್ದಾರೆ ತಮ್ಮ ಭಾಷಣದಲ್ಲಿ. ಫಿಲಿಪ್ಪೈನ್ಸ್, ಬೋಸ್ನಿಯ, ಆಫ್ರಿಕಾದ ಕೆಲವು ದೇಶಗಳಲ್ಲಿ ಹಾಗೂ ಇತರ ಕಡೆಗಳಲ್ಲಿ ಅಮೆರಿಕದ ಪಡೆಗಳು ಭಯೋತ್ಪಾದನೆಯ ವಿರುದ್ಧ ನಡೆಸುತ್ತಿರುವ ಕಾರ್ಯಾಚರಣೆಗಳ ಬಗ್ಗೆ ಕೊಚ್ಚಿಕೊಂಡಿದ್ದಾರೆ. ಪ್ರಪಂಚದ ಯಾವ ಮೂಲೆಯಲ್ಲೇ ಆದರೂ ತಾನು ನುಗ್ಗುವುದಕ್ಕೆ ಹಿಂದೆಗೆಯುವುದಿಲ್ಲ ಎಂದು ಆರ್ಭಟಿಸಿದ್ದಾರೆ. ಅವರ ಭಾಷಣದ ಧಾಟಿ ಸಂಪೂರ್ಣವಾಗಿ ಕಾಲು ಕೆರೆದು ಯುದ್ಧಕ್ಕೆ ಆಮಂತ್ರಣ ನೀಡುವಂತೆ ಇದೆಯಲ್ಲದೆ, ಹುಚ್ಚು ಸಾಹಸಿಯೊಬ್ಬನ ಅಬ್ಬರದಂತಿದೆ. ಆದ್ದರಿಂದಲೇ ಬುಷ್ ಭಾಷಣವನ್ನು ವಿಶ್ಲೇಷಿಸಿರುವ ನ್ಯೂಯಾರ್ಕ್ ಟೈಂಸ್ ಪತ್ರಿಕೆ ತನ್ನ ಸಂಪಾದಕೀಯದಲ್ಲಿ ಅಮೆರಿಕದ ವಿದೇಶಾಂಗ ನೀತಿಯಲ್ಲಿ ಬಲಪ್ರಯೋಗ ಮತ್ತು ಬೆದರಿಕೆಗೆ ಆದ್ಯತೆ ದೊರೆತಿರುವಂತೆ ತೋರುತ್ತದೆ ಎಂದು ವ್ಯಾಖ್ಯಾನಿಸಿರುವುದು ಯಥಾರ್ಥವಾಗಿದೆ.

ಜಾರ್ಜ್ ಬುಷ್‌ರ ಭಾಷಣ ಅಮೆರಿಕದ ಮಿತ್ರ ರಾಷ್ಟ್ರಗಳನ್ನೆಲ್ಲಾ ದಂಗುಬಡಿಸಿದೆ. ಇರಾಕ್, ಇರಾನ್ ಮತ್ತು ಉತ್ತರ ಕೊರಿಯಾಗಳನ್ನು ಸಾರಾಸಗಟಾಗಿ ಮೂದಲಿಸಿ ಬೆದರಿಕೆ ಹಾಕಿರುವುದು ಮಧ್ಯ ಪ್ರಾಚ್ಯದ ದೇಶಗಳಲ್ಲಿ ಅಸಮಾಧಾನ ಉಂಟುಮಾಡಿದೆ, ಇತರ ದೇಶಗಳನ್ನು ದಿಗ್ಭ್ರಮೆಗೊಳಿಸಿದೆ. ಜಪಾನ್ ಮತ್ತು ದಕ್ಷಿಣ ಕೊರಿಯಾಗಳು ಅಮೆರಿಕ ಉತ್ತರ ಕೊರಿಯಾದ ಮೇಲೆ ದಾಳಿ ನಡೆಸುವ ಸಾಧ್ಯತೆಯಿಂದ ಆತಂಕಗೊಂಡಿವೆ. ಬುಷ್ ಮಾತನಾಡುವ ರೀತಿ ಹಾಗೂ ನಡೆದು ಕೊಳ್ಳುತ್ತಿರುವ ಪರಿ ಶಾಂತಿಪ್ರಿಯರಲ್ಲಿ ಆತಂಕ ಉಂಟುಮಾಡಿರುವುದು ಸಹಜವೆ. ಮಿಲಿಟರಿ ಶಕ್ತಿ, ಹಣದ ಬಲ, ಕ್ಷಿಪ್ರ ದಾಳಿಯ ಯಶಸ್ಸು – ಇವುಗಳಿಂದ ತಲೆ ತಿರುಗಿರುವ ಬುಷ್‌ನಂಥ ಅಪಕ್ವ ರಾಜಕಾರಣಿ ದುಸ್ಸಾಹಸದಲ್ಲಿ ತೊಡಗುವುದರಲ್ಲಿ ಆಶ್ಚರ್ಯವೇನಿಲ್ಲ. ಅದನ್ನು ಅರಿತೇ ಇರಬೇಕು ಫ್ರೆಂಚ್ ಟೆಲಿವಿಷನ್ ವ್ಯಾಖ್ಯಾನಕಾರನೊಬ್ಬ ಬುಷ್ ಭಾಷಣ ಕುರಿತು 'ಈ ಭೂಮಂಡಲವನ್ನು ನಿರ್ದೇಶಿಸಲು ಹಕ್ಕು ಪಡೆದಿದ್ದೇನೆಂದು ತಿಳಿದುಕೊಂಡಿರುವ ಪೊಲೀಸನ ಮಾತಿನಂತಿದೆ' ಎಂದು ಹೇಳಿರುವುದು.

ಪ್ರಪಂಚದ ವಿವೇಕಶಾಲಿಗಳಲ್ಲಿ, ಶಾಂತಿಪ್ರಿಯರಲ್ಲಿ ಅಧ್ಯಕ್ಷ ಬುಷ್‌ರ ಅಟ್ಟಹಾಸದ ಮಾತುಗಳು ಕಳವಳ ಉಂಟುಮಾಡಿದ್ದರೆ,

(೫೪ನೇ ಪುಟಕ್ಕೆ)



# ವೀರಗಲ್ಲುಗಳಲ್ಲಿ ಪ್ರತಿಭಟನೆ

ಡಾ|| ಎಚ್. ಎಸ್. ಗೋಪಾಲರಾವ್



*ನಾನೊಂದು ಅಕ್ಷತೆಯನ್ನೂ ಹೆಚ್ಚಾಗಿ ಕೊಡುವುದಿಲ್ಲ...*

ವೀರಗಲ್ಲುಗಳ ಬಗ್ಗೆ ಸಾಮಾನ್ಯ ತಿಳುವಳಿಕೆ ಇರುವವರಿಗೆ ಕೂಡ ವೀರಗಲ್ಲುಗಳು ಕೇವಲ ಕೀಲ್ಗುಂಟೆಯಾದವರ, ಗರುಡರಾದವರ, ಕಲ್ನಾಟ್ಟು ಅಥವಾ ನೆತ್ತರು ಕೊಡುಗೆ ಪಡೆದವರ ಹಾಗೂ ಗೋಗ್ರಹಣ, ಪೆಣ್ಬುಯ್ಯಲ್, ಊರಳಿವು ಇತ್ಯಾದಿಗಳಲ್ಲಿ ಊರಿನ ಜೀವಧನ, ಪ್ರಾಣಧನ ಮತ್ತು ಸ್ತ್ರೀಯರ ಶೀಲಧನವನ್ನು ಕಾಪಾಡುವ ಸಂದರ್ಭದಲ್ಲಿ ಪ್ರಾಣ ತೆತ್ತವರ ಸ್ಮಾರಕಗಳಾಗಿ ಮಾತ್ರವೇ ಅಲ್ಲದೆ ಆಳುವ ವರ್ಗದವರ ದುರಾಡಳಿತ ಮತ್ತು ಅನ್ಯಾಯಗಳನ್ನು ವಿರೋಧಿಸಿದವರ ನೆನಪಾಗಿಯೂ ಉಳಿದಿವೆ ಎನ್ನುವುದು ತಿಳಿದಿರುತ್ತದೆ. ಒಟ್ಟಾರೆಯಾಗಿಯೋ, ಬಿಡಿಬಿಡಿಯಾಗಿಯೋ ವೀರಗಲ್ಲುಗಳು ಆಯಾ ಕಾಲದ ಸಾಮಾಜಿಕ ಚಿತ್ರವನ್ನು ಕಟ್ಟಿಕೊಡುತ್ತವೆ; ಸಾಂಸ್ಕೃತಿಕ ಇತಿಹಾಸವನ್ನು ತಿಳಿಯಲು ನೆರವಾಗುತ್ತವೆ.

ಕೆಲವು ಶಾಸನಗಳು ವಿಶಿಷ್ಟವಾದ ವಿಷಯಗಳನ್ನು ತಿಳಿಸುತ್ತವೆ. ಯಾವುದೇ ಕಾಲದ ಆಳುವ ವರ್ಗವು ಸಾಮಾನ್ಯವಾಗಿ ಶೋಷಣೆ ಮಾಡುವುದರಲ್ಲಿ ಪರಿಣತಿ ಪಡೆದಿರುತ್ತದೆ. ಹಾಗಾಗಿಯೇ ಅದು ಆಳುವ ವರ್ಗ ಎನಿಸಿಕೊಳ್ಳುತ್ತದೆ. ಶೋಷಣೆಯು ತನ್ನ ಹಕ್ಕು ಎಂಬ ಮನೋಭಾವವೂ ಅಂತಹ ಆಳುವ ವರ್ಗಕ್ಕಿದ್ದರೆ ಆಶ್ಚರ್ಯಪಡಬೇಕಾಗಿಲ್ಲ. ತೆರಿಗೆ ಹಾಕುವುದು ಯಾವುದೇ ಆಳುವ ವರ್ಗದ ಹಕ್ಕು; ಅದರಲ್ಲಿ ಅನುಮಾನಕ್ಕೆ ಎಡೆಯಿಲ್ಲ. ಆದರೆ ಹಾಕಿದ ತೆರಿಗೆಯು ಅತಿಯಾಗಿದ್ದರೆ, ಕೊಡುವ ಸಾಮರ್ಥ್ಯದ ಮಿತಿಯನ್ನು ಮೀರಿದ್ದರೆ, ಅಂತಹ ಸಂದರ್ಭದಲ್ಲಿ ತೆರಿಗೆದಾರ ತೀವ್ರ ಆಘಾತಕ್ಕೆ ಗುರಿಯಾಗುತ್ತಾನೆ ಮತ್ತು ತೆರಿಗೆ ಕೊಡುವ ಸಾಧ್ಯತೆ ಇಲ್ಲದೆ, ಕೇವಲ ವಿರೋಧಿಸಲು ಸಾಧ್ಯತೆ ಇದ್ದವನು ಪ್ರತಿಭಟಿಸುತ್ತಾನೆ. ಕೊಡುವ ಸಾಧ್ಯತೆಯೂ ಇಲ್ಲದ ಮತ್ತು ವಿರೋಧಿಸುವ ಸಾಧ್ಯತೆಯೂ ಇಲ್ಲದವನು ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ತೆರಿಗೆಯು ಒಂದು ಮಿತಿಯಲ್ಲಿದ್ದರೆ ಅದು ದೇಶಕ್ಕೆ ಮತ್ತು ಜನತೆಗೆ ಹಿತ; ಮಿತಿಮೀರಿದರೆ ಎಲ್ಲರಿಗೂ ಕೆಡಕು. ಇದು ಸರ್ವವೇದ್ಯ.

ನಮಗೆ ತಿಳಿದಿರುವಂತೆ ಬಹಳ ಹಿಂದಿನಿಂದಲೂ ತೆರಿಗೆಯನ್ನು ವಿಧಿಸುವ ಪದ್ಧತಿ ಇತ್ತು. ಸದ್ಯಕ್ಕೆ ದೊರೆತಿರುವ ಕನ್ನಡ ಭಾಷೆಯ ಮೊದಲ ಶಾಸನವಾದ ಹಲ್ಮಿಡಿ ಶಾಸನದಲ್ಲೇ ತೆರಿಗೆಯ ಪ್ರಸ್ತಾಪವಿದೆ. ತೆರಿಗೆಯ ಪ್ರಸ್ತಾಪವಿದ್ದರೂ ಸಹ ಅದು ದಾನದ ಅಥವಾ ಯಾವುದೇ ಕೊಡುಗೆಯನ್ನು ಉಲ್ಲೇಖಿಸುವ ಸಂದರ್ಭಕ್ಕೆ ಮಾತ್ರ ಸೀಮಿತವಾಗಿರುವುದು ತಿಳಿದ ಸಂಗತಿ. ವಿಧಿಸಿದ ತೆರಿಗೆಯನ್ನು ಯಾವುದೇ ಪ್ರತಿಭಟನೆ ಇಲ್ಲದೆ ಸಲ್ಲಿಸುವುದು ಜನತೆಯ ಕರ್ತವ್ಯವಾಗಿತ್ತು ಎಂದು ತೋರುತ್ತದೆ. ಅಪರೂಪಕ್ಕೆ, ಒಮ್ಮೊಮ್ಮೆ ವಿಧಿಸಿದ ತೆರಿಗೆಯನ್ನು ಕೊಡುವುದಿಲ್ಲ ಎಂದು ಪ್ರತಿಭಟಿಸಿರುವ ವಿಚಾರಗಳನ್ನು ಕೆಲವೇ ಶಾಸನಗಳು ದಾಖಲಿಸಿವೆ. ಅಂತಹ ಒಂದು ಶಾಸನವು ಈಗಿನ ಗದಗ ಜಿಲ್ಲೆಯ ರೋಣ ತಾಲ್ಲೂಕಿನ ರೋಣದಲ್ಲೇ ಇದೆ. ರಾಷ್ಟ್ರಕೂಟ ಮೂರನೆಯ ಕೃಷ್ಣನ ಕಾಲಕ್ಕೆ ಸೇರಿದ ಈ ಶಾಸನವು ಒಂದು ಬಹುಮುಖ್ಯವಾದ ವೀರಗಲ್ಲಾಗಿಯೂ ಪ್ರಸಿದ್ಧಿ ಪಡೆದಿದೆ. ಕ್ರಿ. ಶ. ೯೪೨ರ ಈ ಶಾಸನವು ಪಂಪಯ್ಯ ಎಂಬ ವ್ಯಕ್ತಿಯೊಬ್ಬನು ಬೂತಾರ್ಯನನ್ನು ವಿರೋಧಿಸಿ, ಹೋರಾಡಿ ಸಾಯುತ್ತಾನೆ. ವೀರನಾದ ಪಂಪಯ್ಯ ವಾಜಿವಂಶಕ್ಕೆ ಸೇರಿದವನು. ಬೂತಾರ್ಯನೆಂದು ಈ ಶಾಸನದಲ್ಲಿ ಸಂಬೋಧಿತನಾಗಿರುವವನು ಗಂಗ ಮನೆತನದ ದೊರೆ ಬೂತುಗ. ಈ ಶಾಸನದಲ್ಲಿ ರಾಷ್ಟ್ರಕೂಟ ಮೂರನೆಯ ಕೃಷ್ಣನ ಭಾವನೆಂದೇ ಕರೆಯಲಾದ ಎರಡನೆಯ ಬೂತುಗನು ಚೋಳ-ರಾಷ್ಟ್ರಕೂಟ ಯುದ್ಧದಲ್ಲಿ ಮೂರನೆಯ ಕೃಷ್ಣನಿಗೆ ಸಹಾಯ ಮಾಡಿದ್ದ ವಿಷಯವು ಆತಕೂರು ಶಾಸನದಿಂದ ತಿಳಿದಿದೆ.

ಬೂತಾರ್ಯನು 'ಗಂಗವಾಡಿ ತೊಂಭತ್ತಱು ಸಾಸಿರಂ ಬೆಳ್ವೊಲ ಮುನ್ನೂಱುಮಂ' ಆಳುತ್ತಿದ್ದಾಗ ನಡೆದ ಒಂದು ಘಟನೆಯನ್ನು ಶಾಸನವು ದಾಖಲಿಸಿದೆ. ಮಾಂಡಳಿಕನಾದ ಬೂತಾರ್ಯನು ರೋಣವನ್ನು ಆಕ್ರಮಿಸಿ, ಅಲ್ಲಿನ ಜನರಿಗೆ 'ಭತ್ತಾಯ'ವನ್ನು ಕೊಡಬೇಕು ಎಂದು ಆಜ್ಞೆ ಮಾಡಿದಾಗ, ಪಂಪಯ್ಯನು 'ನಾನೊಂದಕ್ಷತೆಯನಪ್ಪಂದಮೀಯೆನ್' ಎಂದು ಆಜ್ಞೆಯನ್ನು ಪ್ರತಿಭಟಿಸಿ ಹೋರಾಡುತ್ತಾನೆ ಮತ್ತು ಆ ಹೋರಾಟದಲ್ಲಿ ಸಾಯುತ್ತಾನೆ. ಬೂತಾರ್ಯನನ್ನು ಪ್ರತಿಭಟಿಸಿ ತಮ್ಮನ್ನು ಕಾಪಾಡಿದ ಪಂಪಯ್ಯನ ನೆನಪಿಗೆ ಜನ ವೀರಗಲ್ಲನ್ನು ಹಾಕಿಸಿದ್ದಾರೆ.

ಆಳುವ ವರ್ಗದವರ ಯಾವುದೇ ಮಾತನ್ನು ನಮ್ಮ ಜನ ವಿರೋಧಿಸುತ್ತಿರಲಿಲ್ಲ ಎಂಬ ಆಧಾರರಹಿತ ಅಭಿಪ್ರಾಯ ಸಾಮಾನ್ಯವಾಗಿದೆ. ಆದರೆ ಸಂದರ್ಭ ದೊರೆತಾಗ ಮತ್ತು ಆಳುವ ವರ್ಗದ ಯಾವುದೇ ಆಜ್ಞೆಯು ಜನವಿರೋಧಿ ಎನಿಸಿದಾಗ ನಮ್ಮ ಹಿರಿಯರು ಅದನ್ನು ಪ್ರತಿಭಟಿಸಿ ತಮ್ಮತನವನ್ನು ಮೆರೆದಿದ್ದಾರೆ. ನಮ್ಮ ಶಾಸನಗಳು ಕೇವಲ ಆಳುವವರ ಕೀರ್ತಿ ಮತ್ತು ಪ್ರತಿಷ್ಠೆಗಳನ್ನು ಉತ್ಪ್ರೇಕ್ಷೆ ಮಾಡಿವೆ ಎಂದೇನೂ ಭಾವಿಸಲು ರೋಣದ ಶಾಸನವು ಅವಕಾಶ ನೀಡಿಲ್ಲ. ಪ್ರತಿಭಟನೆಯ ಸಂಕೇತವಾಗಿ ಅಪರೂಪಕ್ಕಾದರೂ ಪಂಪಯ್ಯನಂತಹವರು ನಮಗೆ ಕಾಣುತ್ತಾರೆ.

ಇಂತಹ ಪ್ರತಿಭಟನೆಯ ಜೊತೆಗೆ ಆಳುವ ವರ್ಗದ ಪಶ್ಚಾತ್ತಾಪದ ಪ್ರಸಂಗವೊಂದನ್ನು ಹಾಸನ ಜಿಲ್ಲೆಯ ಚನ್ನರಾಯ ಪಟ್ಟಣ ತಾಲ್ಲೂಕಿನ ಕೆಂಬಾಳಿನ ಒಂದು ಶಾಸನವು ದಾಖಲಿ ಸಿದೆ. ಹೊಯ್ಸಳ ವಂಶದ ಎರಡನೆಯ ಬಲ್ಲಾಳ ಅಥವಾ ವೀರಬಲ್ಲಾಳನಿಗೆ ಅನೇಕ ರಾಣಿಯರಿದ್ದರು. ಬಹುತೇಕ ಅವರೆಲ್ಲರಿಗೂ ಒಂದೊಂದು ಪ್ರದೇಶದ ಆಳ್ವಿಕೆಯ ಜವಾಬ್ದಾರಿ ಯನ್ನು ನೀಡಲಾಗಿತ್ತು. ವೀರಬಲ್ಲಾಳನ ಒಬ್ಬ ರಾಣಿಯ ಹೆಸರು ಚೋಳ ಮಹಾದೇವಿ. ನೆರೆಯ ಚೋಳರೊಂದಿಗೆ ಸ್ನೇಹ ಸಾಧಿಸಿದ್ದ ವೀರಬಲ್ಲಾಳನು ಆ ಸ್ನೇಹದ ಗುರುತಾಗಿ ಚೋಳ ರಾಜಕುಮಾರಿಯೊಬ್ಬಳನ್ನು ಮದುವೆ ಆಗಿದ್ದ ಎಂದು ಭಾವಿಸಲಾಗಿದೆ. ಹಾಗೆ ವೀರಬಲ್ಲಾಳ ಮದುವೆ ಯಾಗಿದ್ದ ಚೋಳ ರಾಜಕುಮಾರಿ ಯನ್ನು ಚೋಳ ಮಹಾದೇವಿ ಎಂದೇ ಸಂಬೋಧಿಸಲಾಗಿದೆ ಎಂದು ತಿಳಿಯಲಾಗಿದೆ.

ಚೋಳ ಮಹಾದೇವಿಗೆ ಕೆಂಬಾಳಿನ ಆಡಳಿತದ ಜವಾಬ್ದಾರಿ ದೊರೆತಿತ್ತು. ಆಡಳಿತ ವಿಕೇಂದ್ರೀಕರಣದ ಬಗ್ಗೆ ಚರ್ಚೆ ಮಾಡುವ ಸಂದರ್ಭ ದಲ್ಲಿ ನಮಗೆ ಕಲ್ಯಾಣ ಚಾಲುಕ್ಯ ಚಕ್ರವರ್ತಿ ಆರನೆಯ ವಿಕ್ರಮಾದಿತ್ಯ ಮತ್ತು ಹೊಯ್ಸಳ ದೊರೆ ವೀರಬಲ್ಲಾಳರ ನೆನಪಾಗಬೇಕಾದ್ದು ಅವಶ್ಯಕ. ಈ ಇಬ್ಬರೂ ಕರ್ನಾಟಕದ ಇತಿಹಾಸದ ರಾಜಕೀಯ ಇತಿಹಾಸ ಅದರಲ್ಲೂ ಆಡಳಿತಾತ್ಮಕ ವಿಷಯಗಳಲ್ಲಿ ಎಲ್ಲ ಕಾಲದಲ್ಲೂ ಯಾವುದೇ ಆಡಳಿತ ಪಕ್ಷವು ಅನುಸರಿಸಬಹುದಾದ ಆಡಳಿತ ಕ್ರಮವನ್ನು ದಾಖಲಿಸಿದ್ದಾರೆ. ಈ ಆಡಳಿತ ಕ್ರಮವನ್ನು ದಾಖಲೆಗೆಂದು ಬಳಸಿದಂತೆ ತೋರುವುದಿಲ್ಲ. ಕೌಟುಂಬಿಕ ಮತ್ತು ರಾಜಕೀಯ ಹಿತಗಳೆರಡನ್ನೂ ಗಮನದಲ್ಲಿರಿಸಿ ಕೊಂಡು, ರಾಜಕೀಯ ಹಿತವನ್ನು ಸಾಧಿಸುವ ಸಂದರ್ಭದಲ್ಲಿ ಸಮಕಾಲೀನ ರಾಜಮನೆತನಗಳೊಡನೆ ಮಾಡಿಕೊಂಡಿದ್ದ ವೈವಾಹಿಕ ಸಂಬಂಧಗಳನ್ನು ಆರೋಗ್ಯಕರವಾಗಿ ರಕ್ಷಿಸಿಕೊಳ್ಳುವ ನಿಟ್ಟಿನಲ್ಲಿ ಎಲ್ಲಾ ರಾಣಿಯರನ್ನೂ ರಾಜಧಾನಿಯಲ್ಲೇ ಬಿಡಾರ ಹೂಡಲು ಬಿಡದೆ ಮತ್ತು ಅವರಿಗೂ ಆಡಳಿತದಲ್ಲಿ ಪಾಲ್ಗೊಳ್ಳುವ ಅವಕಾಶ ನೀಡಿ ಅವರ ಪ್ರತಿಷ್ಠೆಗೂ ಭಂಗ ಬರದಂತೆ ರಾಜ್ಯದ ಬೇರೆ ಬೇರೆ ಪ್ರಾಂತಗಳ ಆಡಳಿತದ ಜವಾಬ್ದಾರಿ ವಹಿಸಲಾಗುತ್ತಿತ್ತು. ಉಲ್ಲೇಖಿಸಿದ ಇಬ್ಬರು ದೊರೆಗಳ ವಿಷಯದಲ್ಲೂ ಸಮಾಧಾನದ ಹಾಗೂ ಮೆಚ್ಚಬಹುದಾದ ವಿಚಾರವೆಂದರೆ, ಅವರು ಆಡಳಿತ ವಿಷಯದಲ್ಲಿ ಅನುಸರಿಸಿದ ವಿಕೇಂದ್ರೀಕರಣ ತತ್ವ.

ಚೋಳ ಮಹಾದೇವಿಯ ಆಡಳಿತ ವ್ಯಾಪ್ತಿಗೆ ಸೇರಿದ್ದ ಬೇವೂರಿಗೆ ಸಂಬಂಧಿಸಿದ ವಿಷಯವನ್ನು ಕೆಂಬಾಳಿನ ವೀರಗಲ್ಲು ಶಾಸನವು ದಾಖಲಿಸಿದೆ. ಯಾವುದೋ ಕಾರಣದಿಂದ ಯಾವ ವಿಷಯದಲ್ಲೋ ಚೋಳ ಮಹಾದೇವಿಯು 'ದುಷ್ಟಕಷ್ಟರ ಮಾತಂ ಕೇಳ [illegible] ಪೇಳಿದಡೆ' ಅವಳ ಸೈನ್ಯ ಬೇವೂರನ್ನು ಮುತ್ತಿ ಅಲ್ಲಿಯ ತುರುಗಳನ್ನು ಅಪಹರಿಸಿ ಕೊಂಡೊಯ್ಯಲು ಪ್ರಯತ್ನಿಸಿತು. ಆಗ ಬೇವೂರಿನ ಕೇತಮಲ್ಲನು 'ಅರಸರ ಧಾಳಿ ಮುತ್ತಿದೆಡೆಯೊಳು ತಱಿಸಂದಿದಿರಾಗಿ ತಾಗಿ ತಳುತಿಱಿದು ಪಲಂಬರಂ ತಗುಳ್ದು

ಕೊಳುಸೆರೆಯಂ ತುಱುವಂ ಮಗುೞ್ಚಿ ಬರ್ಬ್ಬರಮಿದಿರಾದ ವೀರಭಟರಂ ತಱಿದಿಕ್ಕಿಯೆ ತನ್ನದೊಂದು ದೋರ್ಬ್ಬಳದೊಳೆ ಕೇತಮಲ್ಲಂ ಸುರಲೋಕ ಮನೆಯ್ದಿದನಾಜಿರಂಗದೊಳು.' ಚೋಳ ಮಹಾದೇವಿಯು ಕೇಳಿದ ದುಷ್ಟ ಕಷ್ಟರ ಮಾತು ಏನು ಎನ್ನುವುದನ್ನು ಶಾಸನವು ತಿಳಿಸಿಲ್ಲ; ಆ ದುಷ್ಟ ಕಷ್ಟರು ಯಾರು ಎನ್ನುವುದೂ ಶಾಸನದಿಂದ ತಿಳಿಯುವುದಿಲ್ಲ. ಅಂತೂ ಯಾವುದೋ ಒಂದು ಚಾಡಿಯ ಮಾತನ್ನು ಚೋಳ ಮಹಾದೇವಿ ಕೇಳಿದಳು. ಆ ಮಾತು ಅವಳಿಗೆ ಸಿಟ್ಟು ತರಿಸಿತು. ಸಿಟ್ಟಿನಿಂದ ಬೇವೂರಿನ ಮೇಲೆ ಧಾಳಿ ಮಾಡಲು ಆಜ್ಞೆ ಮಾಡಿದಳು. ಅವಳ ಸೈನ್ಯ ಬೇವೂರನ್ನು ಮುತ್ತಿ ಅಲ್ಲಿಯ ತುರುಗಳನ್ನು ಅಪಹರಿಸಿತು. ತಮ್ಮವರೇ ತಮ್ಮ ಊರಿನ ತುರುಗಳನ್ನು ಅಪಹರಿಸಿದಾಗ ಬೇವೂರಿನ ಜನ ಅದನ್ನು ಪ್ರತಿಭಟಿಸಿದರು. ಬಹುತೇಕ ಆ ಪ್ರತಿಭಟನೆಯ ಸಂದರ್ಭದಲ್ಲಿ ಮುಂಚೂಣಿಯಲ್ಲಿದ್ದ ಕೇತಮಲ್ಲನು ಹೋರಾಟದಲ್ಲಿ ಸತ್ತಿರಬೇಕು. ಇಷ್ಟೆಲ್ಲಾ ಅನಾಹುತಗಳು ನಡೆದ ನಂತರ ಚೋಳ ಮಹಾದೇವಿಗೆ ತನ್ನ ತಪ್ಪಿನ ಅರಿವಾಗಿರಬೇಕು. ಆಗ ನೊಂದು ತನ್ನ ಆಸ್ಥಾನದಲ್ಲಿನ ಭಂಡಾರಿ ರಾಯಣ್ಣ ಮತ್ತು ನಾಚಣ್ಣ ಹೆಗ್ಗಡೆಗಳನ್ನು ಕರೆದು 'ಯಮ್ಮ ಮಕ್ಕಳ ನಾವು ನೋಯಿಸಿದೆವು' ಎಂದು ಪಶ್ಚಾತ್ತಾಪಪಟ್ಟು ಕೇತಮಲ್ಲನಾಯಕನ ಮಗ ನಾರಸಿಂಹನಿಗೆ ಭೂಮಿ ದಾನ ಮಾಡಿದ್ದಾಳೆ. ಯಾರು ಬೇಕಾದರೂ ತಪ್ಪನ್ನು ಮಾಡಬಹುದು. ಆದರೆ ಹಾಗೆ ಮಾಡಿದ ತಪ್ಪನ್ನು ತಿದ್ದಿಕೊಂಡು, ಮುಂದೆ ಯಾವ ತಪ್ಪನ್ನೂ ಮಾಡದೆ ಬಾಳುವುದು ದೊಡ್ಡ ಗುಣ. ಅಂತಹ ಉದಾತ್ತ ಗುಣವನ್ನು ಪಡೆದಿದ್ದವಳು ಚೋಳ ಮಹಾದೇವಿ.



*ಸುರಲೋಕದೊಳಗೆ ಕಲಿಗಳನಟ್ಟುವ ತೆಱದಿಂ....*

ಸಮಾಜದಲ್ಲಿ ಎಲ್ಲಾ ಕಾಲದಲ್ಲೂ ಚಾಡಿ ಹೇಳುವ ಜನ ಇರುತ್ತಿದ್ದರು. ಅಂತೆಯೇ 'ಹಿತ್ತಾಳೆ ಕಿವಿ'ಯ ಜನರೂ ಇರುತ್ತಿದ್ದರು. ಇಂತಹ ಜನರಿಂದಾಗಿ ಆಗಿರುವ ಲಿಖಿತ ಹಾಗೂ ಅಲಿಖಿತ ಹಾನಿಗಳು ಅಪಾರ. ಏನೇ ಮಾತು ಕಿವಿಗೆ ಬಿದ್ದರೂ ಅದರ ಸತ್ಯಾಸತ್ಯತೆಗಳನ್ನು ಪರೀಕ್ಷಿಸಿ ಕಾರ್ಯಾಚರಣೆಗೆ ಅಣಿಯಾಗಬೇಕಾದ್ದು ಅವಶ್ಯಕ. ಇಲ್ಲವಾದರೆ ತಿದ್ದಲಾಗದ ಹಾನಿಯಾಗಬಹುದು. ಇತಿಹಾಸದಿಂದ ನಾವು ಕಲಿಯಬೇಕಾದ ಬಹುಮುಖ್ಯ ಪಾಠಗಳಲ್ಲಿ ಇದೂ ಸಹ ಒಂದು. ಚೋಳ ಮಹಾದೇವಿಯ ನಡೆವಳಿಕೆಯು ಎಚ್ಚರಿಕೆಯ ಮತ್ತು ತಿಳುವಳಿಕೆಯ ವಿಷಯವಾಗಬೇಕು. ತಾನು ಮಾಡಿದ ತಪ್ಪನ್ನು ಅರಿತು, ಅದನ್ನು ತಿದ್ದಿಕೊಳ್ಳುವುದು ದೊಡ್ಡ ಗುಣ; ಅಂತಹ ದೊಡ್ಡ ಗುಣದ ಹೆಣ್ಣು ಚೋಳ ಮಹಾದೇವಿ.

ಮೇಲೆ ಪರಿಚಯಿಸಲಾದ ಶಾಸನಗಳು ಒಂದು ತೆರಿಗೆಯನ್ನು ವಿಧಿಸಿದ ಆಳುವ ವರ್ಗವನ್ನು ಪ್ರತಿಭಟಿಸಿದ ಪಂಪಯ್ಯನ ಕೆಚ್ಚನ್ನೂ ಮತ್ತೊಂದು ಆಳುವ ವರ್ಗದ ದಾಳಿಯನ್ನು ಪ್ರತಿಭಟಿಸಿ, ಗೆಲುವು ಸಾಧಿಸುತ್ತಲೇ ವೀರಮರಣ ಸಾಧಿಸಿದ ಕೇತಮಲ್ಲನ ಸ್ವಾಭಿಮಾನವನ್ನೂ ದಾಖಲಿಸಿವೆ. ಕೇತಮಲ್ಲನ ಪ್ರತಿಭಟನೆಯ ಮೂಲಕ ನಮಗೆ ಚೋಳಮಹಾದೇವಿಯ ಪಶ್ಚಾತ್ತಾಪದ ಗುಣವೂ ತಿಳಿಯುತ್ತದೆ. ಶಾಸನಗಳು ಸಾಮಾನ್ಯ ಜನರ ಗುಣ ವಿಶೇಷಗಳನ್ನು ದಾಖಲಿಸುತ್ತವೆ ಎಂಬ ಮಾತಿಗೆ ಮೇಲಿನ ಎರಡು ಶಾಸನಗಳು ಉದಾಹರಣೆಯಾಗಿವೆ.

**ಡಾ॥ ಎಚ್. ಎಸ್. ಗೋಪಾಲರಾವ್**
'ಸ್ವಸ್ತಿಶ್ರೀ ಸ್ಕಂದ', ಅರಸಿನಕುಂಟೆ
ನೆಲಮಂಗಲ ತಾಲ್ಲೂಕು
ಬೆಂಗಳೂರು ಗ್ರಾಮಾಂತರ ಜಿಲ್ಲೆ-೫೬೨ ೧೨೩

*(೫೨ನೇ ಪುಟದಿಂದ - ವಿಶ್ವವೀಕ್ಷಣೆ)*

ಅಮೆರಿಕದ ಕೃಪೆಗಾಗಿ ಬಾಯಿ ಬಿಡುತ್ತಿರುವ ನಮ್ಮ ಸರಕಾರದ ಪ್ರಭೃತಿಗಳು 'ಪುಂಡು' ದೇಶಗಳ ಸಾಲಿಗೆ ಪಾಕಿಸ್ತಾನವನ್ನು ಸೇರಿಸಲಿಲ್ಲವಲ್ಲ ಎಂಬ ಚಿಂತೆಗೀಡಾಗಿದ್ದಾರೆ, ಬುಷ್ ಭಾಷಣಗಳಲ್ಲಿ ಪಾಕಿಸ್ತಾನಕ್ಕೂ ಎಚ್ಚರಿಕೆ ಗಂಟೆ ಬಾರಿಸಲಾಗಿದೆ ಎಂಬ ಭ್ರಮೆಯಲ್ಲಿದ್ದಾರೆ. ನಮ್ಮ ಗಡಿಯಲ್ಲಿ, ಕಾಶ್ಮೀರದಲ್ಲಿ ಭಯೋತ್ಪಾದನೆ ತಡೆಯಲು ಅಗತ್ಯವಾದ ಕ್ರಮಗಳನ್ನು ತೆಗೆದುಕೊಂಡು, ಅದರ ಮೂಲವನ್ನು ಯಶಸ್ವಿಯಾಗಿ ಕಿತ್ತುಹಾಕಲು ನೆರೆಯ ರಾಷ್ಟ್ರದೊಂದಿಗೆ ಸಂಧಾನ, ನೇರ ಮಾತುಕತೆಗಳಲ್ಲಿ ತೊಡಗುವ ಬದಲು ಅಮೆರಿಕದ ಅಧ್ಯಕ್ಷರು ಏನೋ ಪವಾಡ ಮಾಡುತ್ತಾರೆ ಎಂದು ಈ ನಾಯಕರು ಅವರ ಬೆನ್ನುಹತ್ತಿದ್ದಾರೆ. ಇದು ನಮ್ಮ ದುರಾದೃಷ್ಟ ಎನ್ನೋಣವೆ ?

ಅದಿರಲಿ, ಎರಡನೇ ಮಹಾಯುದ್ಧದ ನಂತರ ಅಮೆರಿಕ ಬಹುದೊಡ್ಡ ಭಯೋತ್ಪಾದಕ ರಾಷ್ಟ್ರವಾಗಿ ಬೆಳೆದದ್ದು ಸರಿಯಷ್ಟೆ. ಪರಮಾಣು ಬಾಂಬಿನಂಥ ಭಯಂಕರ ಅಸ್ತ್ರದಿಂದ ದಾಳಿ ನಡೆಸಿ ಭಯೋತ್ಪಾದಕ ಕೃತ್ಯ ನಡೆಸಿದ ಮೊದಲ ರಾಷ್ಟ್ರ ಅಮೆರಿಕ. ಅರ್ಧಶತಮಾನಕ್ಕೂ ಕಮ್ಮಿ ಕಾಲದಲ್ಲಿ ಅದು ಪ್ರಪಂಚದಲ್ಲಿ ಏಕೈಕ ಬಲಾಢ್ಯ ರಾಷ್ಟ್ರವಾಗಿಬಿಟ್ಟಿದೆ. ಶೀತಯುದ್ಧದ ಕಾಲದಲ್ಲಿ ನಾಲ್ಕು ದಶಕಕ್ಕೂ ಹೆಚ್ಚು ಕಾಲ 'ಕಮ್ಯೂನಿಸಮ್ ತಡೆಯುವ' ಹೆಸರಿನಲ್ಲಿ ಅಮೆರಿಕ ನಡೆಸಿದ ಭಯೋತ್ಪಾದಕ ಕೃತ್ಯಗಳು ಒಂದೇ ಎರಡೇ. ಹಿಂದಿನ ಸೋವಿಯತ್ ಒಕ್ಕೂಟ ಮತ್ತು ಪೂರ್ವ ಯೂರೋಪಿನ ದೇಶಗಳು ಆಗ ಅಮೆರಿಕದ ಅಧಿನಾಯಕತ್ವದ ಹಂಚಿಕೆಗಳಿಗೆ ಕಂಟಕವಾಗಿದ್ದವು. ನಾನಾ ಕುತಂತ್ರಗಳನ್ನು ನಡೆಸಿ ಆ ದೇಶಗಳ ಕುಸಿತಕ್ಕೆ ಕಾರಣವಾದ ಅಮೆರಿಕ ಈಗ ಇಡೀ ಜಗತ್ತಿನ ಮೇಲೆ ತನ್ನ ಹಿಡಿತವನ್ನು ಬಿಗಿಗೊಳಿಸಲು ಎಲ್ಲ ದೇಶಗಳತ್ತ ನೋಡುತ್ತಿದೆ. 'ಪ್ರಭುತ್ವ ಭಯೋತ್ಪಾದನೆ'ಗೆ ಚಾಲನೆ ನೀಡಿದ, ಉತ್ತೇಜನ ನೀಡಿದ ಅಮೆರಿಕ ಬಹುದೊಡ್ಡ ಭಯೋತ್ಪಾದಕ ರಾಷ್ಟ್ರ. ಈಗ ಅದು ಭಯೋತ್ಪಾದನೆಯ ವಿರುದ್ಧ ಊದಿರುವ ರಣಕಹಳೆ ಹಾಸ್ಯಾಸ್ಪದವಾಗಿದೆ. ಭಯೋತ್ಪಾದನೆಗೆ ಮೂಲವಾಗಿರುವ ಸಮಸ್ಯೆಗಳನ್ನು ಬಗೆಹರಿಸುವುದರತ್ತ ಕ್ರಮ ತೆಗೆದುಕೊಳ್ಳುವುದನ್ನು ಬಿಟ್ಟು ಜಾರ್ಜ್ ಬುಷ್‌ನಂಥ ಅವಿವೇಕಿ ರಾಜಕಾರಣಿ ಹೊಸ ಸಮಸ್ಯೆಗಳನ್ನು ಹುಟ್ಟುಹಾಕಲು ಮುಂದಾಗಿದ್ದಾರೆ: ಇರಾನ್, ಇರಾಕ್ ಮತ್ತು ಉತ್ತರ ಕೊರಿಯ ದೇಶಗಳಿಗೆ ಬೆದರಿಕೆ ಹಾಕಿ. ಅಮೆರಿಕದ ಅಧ್ಯಕ್ಷ ಬುಷ್ ಮತ್ತು ಅವರ ಸರಕಾರ ಮತ್ತೇನಾದರೂ ದುಸ್ಸಾಹಸದಲ್ಲಿ ತೊಡಗಿದರೆ ಇರುವೆ ಹುತ್ತದಲ್ಲಿ ಕೈ ಇರಿಸಿದಂತಾದೀತು. ಬಲಪ್ರಯೋಗದಿಂದ, ಬೆದರಿಕೆ, ದುರಾಕ್ರಮಣಗಳಿಂದ ಭಯೋತ್ಪಾದನೆಯ ನಿರ್ಮೂಲನ ಕನಸಿನ ಮಾತು. ಬಗೆಹರಿಯದೆ ಇರುವ ಸಮಸ್ಯೆಗಳನ್ನು ಬಗೆಹರಿಸುವುದೊಂದೇ ಅದಕ್ಕೆ ಪರಿಹಾರ ಮಾರ್ಗ. ಇದನ್ನು ಎಷ್ಟು ಬೇಗ ಅರಿತರೆ ಅಷ್ಟೂ ಒಳ್ಳೆಯದು. ಆದರೆ ಭಯೋತ್ಪಾದನೆಯನ್ನೇ ನೀತಿಯಾಗಿ ಸ್ವೀಕರಿಸಿರುವ ಅಮೆರಿಕದ ಸಾಮ್ರಾಜ್ಯಶಾಹಿಗಳಿಗೆ ವಿವೇಕ ಉಂಟಾದೀತೆ ?

■

*(೫೧ನೇ ಪುಟದಿಂದ - ನನ್ನೊಳಗಿನ ಹಾಡು ಕ್ಯೂಬಾ)*

ಪರಿಗಣಿಸಬೇಕಾದ ಅಗತ್ಯವನ್ನು ಹೇಳುತ್ತದೆ.

ಕವಿ ಹೆಮ್ಮಿಂಗ್ವೇ, ಹೋರಾಟಗಾರ ಚೇ ಗೆವಾರ, ನಾಯಕ ಫಿಡಲ್ ಕ್ಯಾಸ್ಟ್ರೋ – ಕ್ಯೂಬಾದ ಶಕ್ತಿಯ ಸಂಕೇತವಾದ ಈ ಮೂರು ಹೆಸರುಗಳು ಸ್ವಾಭಿಮಾನದ ಮೂರು ಸ್ಮೃತಿಗಳಂತೆ ಅಚ್ಚಳಿಯದೆ ಉಳಿಯುತ್ತವೆ. ಕಾವ್ಯವನ್ನೂ ಕತ್ತಿಯನ್ನೂ ಎದೆಗೊತ್ತಿಕೊಂಡಿದ್ದ 'ಪಾಪಾ' ಹೆಮ್ಮಿಂಗ್ವೇ ಕ್ಯೂಬಾದ ಮೂಲೆ ಮೂಲೆಯಲ್ಲಿ ಮಿಡಿವ ನೆನಪು. ಯುವ ಚೈತನ್ಯಕ್ಕೆ, ಕ್ರಾಂತಿಯ ಹೆಬ್ಬಯಕೆಗೆ, ಸುಖದ ಬದುಕಿಗೆ ಕನಸನ್ನು ಕಸುವನ್ನು ತುಂಬಿದ 'ಚೆ' ಜಗತ್ತಿನ ಜನಪರ ಚಿಂತಕರಿಗೆ ಹುಚ್ಚೆಬ್ಬಿಸುವ ಹೆಸರು. 'ಬೆರಳಿಂದ ಸೂರ್ಯನನ್ನ ಮುಚ್ಚಿಬಿಡುತ್ತೇವೆ ಎನ್ನಲಾಗದು' ಎಂದು ಸಾಮ್ರಾಜ್ಯಶಾಹಿ ಪ್ರಭುತ್ವಕ್ಕೆ ಸವಾಲಾಗಿ ಕ್ಯೂಬಾದ ನೈತಿಕ ಸ್ತಂಭವಾಗಿರುವ ಫಿಡಲ್ ಕ್ಯಾಸ್ಟ್ರೋ ಪ್ರತಿಯೊಬ್ಬರ ನಾಡಿ ಮಿಡಿತದಂಥ ನಾಯಕ.

ಜಗತ್ತು ಸಾಮ್ರಾಜ್ಯಶಾಹಿಯ ಕತ್ತಲಲ್ಲಿ ತಡವರಿಸುತ್ತಿದ್ದಾಗ ಆತ್ಮವಿಶ್ವಾಸದಿಂದ ಬೆಳಗುತ್ತಿರುವ ಪುಟ್ಟ ಹಣತೆ ಕ್ಯೂಬಾ – ಎನ್ನುತ್ತಾರೆ ಲೇಖಕ ಜಿ. ಎನ್. ಮೋಹನ್. ಓದುಗನ ಕಣ್ಣು ಮಂಜಾಗಿ ಪುಟ ಮುಚ್ಚುವಾಗ ಎದೆಯಲ್ಲಿ ಹೊಸ ಚಿಂತನೆಯ ಬೆಳಕು ಬಿತ್ತುವುದು ಈ ಕೃತಿಯ ಸಾರ್ಥಕತೆ.

**ಡಾ॥ ವಿನಯಾ**
ಕನ್ನಡ ಅಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಸವಣೂರು, ಹಾವೇರಿ ಜಿಲ್ಲೆ

# ಗಾರ್ಮೆಂಟ್ ಮಹಿಳೆಯರು



**ಬೆಂ**ಗಳೂರಿನಲ್ಲಿರುವ ಪೀಣ್ಯ ಕೈಗಾರಿಕಾ ಪ್ರದೇಶ ಆಗ್ನೇಯ ಏಶಿಯಾದಲ್ಲೇ ಅತ್ಯಂತ ದೊಡ್ಡದು. ಸುಮಾರು ನಲವತ್ತು ಚ.ಕಿ.ಮೀ.ಗಳಷ್ಟು ವಿಸ್ತಾರವಿರುವ ಇದರಲ್ಲಿ ೩೫೦೦ಕ್ಕಿಂತಲೂ ಹೆಚ್ಚು ದೊಡ್ಡ ಹಾಗೂ ಸಣ್ಣ ಕೈಗಾರಿಕಾ ಘಟಕಗಳಿವೆ. ರಫ್ತು ಒಲವಿನ ಕೈಗಾರಿಕಾ ಘಟಕಗಳೇ ಹೆಚ್ಚು ಸಂಖ್ಯೆಯಲ್ಲಿವೆ. ಈ ಪೈಕಿ ಸುಮಾರು ೫೦೦-೬೦೦ ಸಿದ್ಧ ಉಡುಪು ತಯಾರಿಸುವ ಗಾರ್ಮೆಂಟ್ ಘಟಕಗಳು. ಈ ಗಾರ್ಮೆಂಟ್ ಕಾರ್ಖಾನೆಗಳಲ್ಲಿ ಮಾತ್ರವೇ ೨೫ ಸಾವಿರಕ್ಕೂ ಹೆಚ್ಚು ಮಂದಿ ದುಡಿಯುತ್ತಿದ್ದಾರೆ. ಇವರಲ್ಲಿ ಶೇ. ೯೦ ರಷ್ಟು ಮಹಿಳೆಯರು. ಇವರು ತಯಾರಿಸುವ ಉಡುಪುಗಳು ಹೊರ ದೇಶಗಳಿಗೆ ರಫ್ತಾಗಿ, ಯಾವುದೋ ವಿದೇಶಿ ಕಂಪೆನಿಯ ಬ್ರ್ಯಾಂಡ್ ಛಾಪಿಸಿಕೊಂಡು ಮಾರಾಟವಾಗುತ್ತವೆ. ಬ್ರ್ಯಾಂಡ್ ಹೆಸರು ಹೊತ್ತ ಅವು ಮತ್ತೆ ಬೆಂಗಳೂರಿಗೂ ಬರದೆ ಇರುವುದಿಲ್ಲ. ನೀವು ಯಾವುದಾದರೊಂದು ಫ್ಯಾಶನಬಲ್ ಅಂಗಡಿಯಲ್ಲಿ ಖರೀದಿಸಿರಬಹುದಾದ ಷರಟು, ಪ್ಯಾಂಟು ಪೀಣ್ಯದ ಮಹಿಳೆಯರು ಹೊಲಿದದ್ದೂ ಆಗಿರಬಹುದು!

ಬೆಂಗಳೂರಿನಲ್ಲೇ ಅನೇಕ ಕಡೆ ಇಂಥ ಸಿದ್ಧ ಉಡುಪು ತಯಾರಿಸುವ ಘಟಕಗಳಿದ್ದರೂ ಪೀಣ್ಯ ಕೈಗಾರಿಕಾ ಪ್ರದೇಶದಲ್ಲಿ ಇವು ಹೆಚ್ಚು ಸಂಖ್ಯೆಯಲ್ಲಿವೆ. ಬೇರೆ ಬೇರೆ ಜಿಲ್ಲೆಗಳಿಂದಲೂ ಬಂದಿರುವ ಇಲ್ಲಿಯ ಕೆಲಸಗಾರರು ಕೈಗಾರಿಕಾ ಪ್ರದೇಶಕ್ಕೆ ಹೊಂದಿಕೊಂಡಂತಿರುವ ಹಲವು ಬಡಾವಣೆ ಗಳಲ್ಲಿ ವಾಸಿಸುತ್ತಾರೆ. ಈ ಬಡಾವಣೆಗಳು ಗಾರ್ಮೆಂಟ್ ಘಟಕಗಳಿಗೆ ಅಗ್ಗದ ಶ್ರಮಶಕ್ತಿ ಒದಗಿಸುವ ಆಗರಗಳೂ ಆಗಿವೆ.

ಗಾರ್ಮೆಂಟ್ ಕಾರ್ಖಾನೆಗಳಲ್ಲಿ ಶೋಷಣೆ ನಡೆಯುವುದಿಲ್ಲವೆಂದಲ್ಲ. ಕೆಲಸಗಾರರಿಗೆ ಕನಿಷ್ಠ ಸೌಲಭ್ಯ ಗಳನ್ನು ಒದಗಿಸದಿರುವ ಕಾರ್ಖಾನೆಗಳೂ ಇವೆ. ಆದರೂ ಇವು ಸಾವಿರಾರು ಕುಟುಂಬಗಳ, ಬಹುಮಟ್ಟಿಗೆ ಮಹಿಳೆಯರ, ಆರ್ಥಿಕ ಸ್ಥಿತಿ ಸುಧಾರಿಸುವುದಕ್ಕೆ ಸಹಾಯಕವಾಗಿವೆ ಎಂಬುದರಲ್ಲಿ ಅನುಮಾನವಿಲ್ಲ. ಸ್ವಲ್ಪಮಟ್ಟಿನ ಅಕ್ಷರ ಜ್ಞಾನವಿರುವವರಿಗೆ, ಟೈಲರಿಂಗ್ ತರಬೇತು ಪಡೆದಿರು ವವರಿಗೆ, ಇಲ್ಲಿ ಉದ್ಯೋಗಾವಕಾಶ ಸದಾ ತೆರೆದಿರುತ್ತದೆ.

ಗಾರ್ಮೆಂಟ್ ಕಾರ್ಖಾನೆಗಳಲ್ಲಿ ಸಾಧಾರಣ ಓದುಬರಹ ಬಲ್ಲವರಿಂದ ಹಿಡಿದು ಹೈಸ್ಕೂಲು, ಕಾಲೇಜು ಮೆಟ್ಟಲು ಹತ್ತಿದವರೂ ಕೆಲಸ ಮಾಡುತ್ತಾರೆ. ಅಂಗವಿಕಲರಿಗೂ ಅವಕಾಶವಿದೆ.

ಮುಂಜಾನೆ ಬಣ್ಣ ಬಣ್ಣದ ಸೀರೆಗಳಲ್ಲಿ ಮಹಿಳೆಯರು, ಚೂರಿದಾರ ಧರಿಸಿದ ಯುವತಿಯರು ಆತ್ಮವಿಶ್ವಾಸದಿಂದ ಚುರುಕಾಗಿ ನಡೆಯುತ್ತ ತಮ್ಮ ಕಾರ್ಖಾನೆಗಳತ್ತ ಸಾಗುತ್ತಿರುವ ದೃಶ್ಯವನ್ನು ಕಾಣಬಹುದು. ಕೆಲವರು ಬಸ್ಸುಗಳಲ್ಲಿ, ವ್ಯಾನುಗಳಲ್ಲಿ ಹೋಗುತ್ತಾರಾದರೂ, ಹೆಚ್ಚು ಮಂದಿ ನಡೆದೇ ಹೋಗುತ್ತಾರೆ. ಸಂಜೆ ಹಿಂದಿರುಗುವಾಗ ದಿನದ ದುಡಿಮೆಯಿಂದ ಉತ್ಸಾಹ ಕುಂದಿದ್ದರೂ ಆದಷ್ಟು ಬೇಗನೆ ಮನೆ ಸೇರಿಕೊಳ್ಳುವ ಧಾವಂತ ಕಡಿಮೆ ಯಾಗಿರುವುದಿಲ್ಲ. ಪದೇ ಪದೇ ಕಿರುಕುಳ ನೀಡುವ ಮೇಸ್ತ್ರಿಯನ್ನೋ, ಸೂಪರ್‌ವೈಸರನ್ನೋ ಶಪಿಸುತ್ತ, ಮನೆಯಲ್ಲಿ ಕಾಯುತ್ತಿರುವ ಮಕ್ಕಳನ್ನು, ಇತರರನ್ನು ನೆನಪು ಮಾಡಿಕೊಳ್ಳುತ್ತ ಅಷ್ಟೇ ಚುರುಕಿನಿಂದ ಸಾಗುತ್ತಾರೆ.

ಗಾರ್ಮೆಂಟ್ ಕಾರ್ಖಾನೆಯ ಒಳಗೆ ಪ್ರವೇಶಿಸಿದ ನಂತರ ಇವರು ಟೈಲರ್, ಹೆಲ್ಪರ್, ಸೂಪರ್‌ವೈಸರ್, ಕಟಿಂಗ್ ಮಾಸ್ಟರ್, ಚೆಕಿಂಗ್, ಕ್ವಾಲಿಟಿ ಕಂಟ್ರೋಲರ್, ಐರನಿಂಗ್, ಬಟನಿಂಗ್ – ಇತ್ಯಾದಿ ಕೆಲಸಗಳಲ್ಲಿ ಹಂಚಿಹೋಗುತ್ತಾರೆ. ಯಂತ್ರದ ಸಹಾಯದಿಂದ ಕತ್ತರಿಸಲಾಗುವ ಬಟ್ಟೆಯನ್ನು ವಿದ್ಯುತ್ ಚಾಲಿತ ಹೊಲಿಗೆ ಯಂತ್ರದಲ್ಲಿ ಚಕಚಕ ಹೊಲಿಯುತ್ತ ಹೋಗುತ್ತಾರೆ. ಕೆಲವರು ಬರೀತೋಳು, ಮತ್ತೆ ಕೆಲವರು ಬರೀ ಕಾಲರ್, ಇನ್ನೂ ಕೆಲವರು ಜೇಬುಗಳನ್ನಷ್ಟೆ ಹೊಲೆಯುತ್ತ, ಗುಂಡಿ ಹಾಕುತ್ತ, ಇಸ್ತ್ರಿ ಮಾಡುತ್ತಾ – ಒಂದೊಂದು ಬಗೆಯ 'ಸ್ಪೆಷಲಿಸ್ಟ್'ಗಳಾಗುತ್ತಾರೆ. ಮನೆಯಲ್ಲಿ ಮಗನಿಗೆ ಅಂಗಿಯನ್ನೋ, ಮಗಳಿಗೆ ಲಂಗವನ್ನೋ ಹೊಲಿಯ ಬೇಕಾಗಿ ಬಂದರೆ ಫ್ಯಾಕ್ಟರಿಯ ಈ ವಿಶೇಷಜ್ಞರುಗಳು ಪೇಚಾಟಕ್ಕೆ ಸಿಕ್ಕಿಕೊಳ್ಳಬಹುದು !

ಗಾರ್ಮೆಂಟ್ ಮಹಿಳೆಯರ ದುಡಿಮೆಯೊಂದನ್ನೇ ಆಶ್ರಯಿಸಿರುವ ಕುಟುಂಬಗಳು ಸಾಕಷ್ಟಿವೆ. ಸಣ್ಣಪುಟ್ಟ ಕೆಲಸ ಮಾಡುವ ಗಂಡಸರು ಇವರ ಸಂಬಳವನ್ನು

### ಯಾರಾದರೂ

ಮುಲ್ಲ ಕಡಕಪ್ಪು ನೀಲಿ ವಸ್ತ್ರ, ಶೋಕವನ್ನಾಚರಿಸುವಾಗ ಧರಿಸುವಂಥಾದ್ದು, ಧರಿಸಿ ಪೇಟೆಯಲ್ಲಿ ಹೋಗುತ್ತಿದ್ದ. ಕಂಡವರು ಕೇಳಿದರು :

''ಮುಲ್ಲ, ಯಾರಾದರೂ ಸತ್ತುಹೋದರೇನು?''

''ಖಂಡಿತ, ಈ ಸಮಯದಲ್ಲಿ ಪ್ರಪಂಚದಲ್ಲಿ ಯಾರಾದರೂ ಸತ್ತಿರುತ್ತಾರೆ. ನನಗೆ ಅವರ ವಿವರ ಗೊತ್ತಿಲ್ಲದಿರಬಹುದು.''

### ನೀನೊಬ್ಬನೇ ಅಳು



ನಸ್ರುದ್ದೀನ್ ಮುಲ್ಲನ ಕತ್ತೆ ಸತ್ತುಹೋಯಿತು. ಪಾಪ, ಮುಲ್ಲನ ಗೋಳು ತೀರದು. ''ನಿನ್ನ ಮೊದಲನೆಯ ಹೆಂಡತಿ ಸತ್ತಾಗ ಅಳುತ್ತಿದ್ದಕ್ಕಿಂತ ಹೆಚ್ಚಾಗಿ ಅಳುತ್ತಿದ್ದೀಯಲ್ಲ, ಮುಲ್ಲ, ಸರಿಯಲ್ಲ ಬಿಡು'' ಎಂದು ಹಿತೈಷಿಗಳು ಸಮಾಧಾನಕ್ಕೆ ಯತ್ನಿಸಿದರು. ''ಅದು ಸರಿಯೇ. ಆಗ ನೀವೆಲ್ಲ 'ದೈವೇಚ್ಛೆ, ನಿನಗೆ ಇನ್ನೊಬ್ಬಳು ಹುಡುಕೋಣ ಬಿಡು' ಅಂದಿದ್ದಿರಿ. ಆದರೆ ಈಗ ಆ ರೀತಿಯ ಮಾತೇ ಇಲ್ಲವಲ್ಲ!'' ಅವನ ಗೋಳು ಜೋರಾಗಿ ಮುಂದುವರಿಯಿತು.

*ಸಂಗ್ರಹ : ಜಿ. ಪುರುಷೋತ್ತಮ*



*ಗಾಯತ್ರಿ - ದೇವರಾಜ್*

ಅವಲಂಬಿಸುವುದುಂಟು. ಉದ್ಯೋಗಸ್ಥ ಇತರ ಮಹಿಳೆಯರಿಗೆ ಹೋಲಿಸಿದಾಗ ಇವರ ಸಂಬಳ ಬಹಳ ಕಡಮೆ ಹೌದು. ಎಲ್ಲ ಹಣ ಕುಟುಂಬಕ್ಕೆ ಮೀಸಲಿಡಬೇಕಾಗುತ್ತದೆ. ಆದರೂ ಆಭರಣ ಚೀಟಿ, ಪಾತ್ರೆ ಚೀಟಿ, ಸೀರೆ ಚೀಟಿ – ಮೂಲಕ ಸಣ್ಣ ಮಟ್ಟಿನ ಉಳಿತಾಯ ಮಾಡಿ ತಮ್ಮ ಅಗತ್ಯಗಳನ್ನು ಪೂರೈಸಿಕೊಳ್ಳುವ ತಂತ್ರ ಅವರಿಗೆ ತಿಳಿದಿದೆ. ದಿನಕ್ಕೊಂದು ಉಡುಪು, ಒಂದೆರಡು ಚಿನ್ನಾಭರಣಗಳು, ಸ್ವಲ್ಪ ಅಲಂಕಾರ – ಇವು, ಈ ಮಹಿಳೆಯರು ಆರ್ಥಿಕವಾಗಿ ಸುಧಾರಿಸಿರುವುದಕ್ಕೆ ಸಾಕ್ಷಿಯಾಗಿವೆ. ಮದುವೆ ಮಾರುಕಟ್ಟೆಯಲ್ಲಿ ಗಾರ್ಮೆಂಟ್ ಹುಡುಗಿಯರಿಗೆ ಹೆಚ್ಚು ಅಂಕ ಸಿಕ್ಕುವ ಸಾಧ್ಯತೆ ಇದೆ !

ಒಂದೇ ಕುಟುಂಬದ ಎರಡು ಮೂರು ಜನರು ಗಾರ್ಮೆಂಟ್ ಕಾರ್ಖಾನೆಗಳಲ್ಲಿ ದುಡಿಯುತ್ತಿದ್ದಾರೆ. ಗಂಡ ಹೆಂಡತಿ ಇಬ್ಬರೂ ಟೈಲರ್‌ಗಳಾಗಿ ಕೆಲಸ ಮಾಡುವವರೂ ಇದ್ದಾರೆ.

''ಹೊಸತು'' ಜೊತೆಗೆ ಮಾತಾಡಲು ಸಿಕ್ಕಿದವರು ದೇವರಾಜ್-ಗಾಯತ್ರಿ ಎಂಬ ಯುವ ದಂಪತಿಗಳು. ಎಸ್ಸೆಸ್ಸೆಲ್ಸಿಯವರೆಗೂ ಕಲಿತಿರುವ ಗಾಯತ್ರಿ ಕಳೆದ ಐದು ವರ್ಷಗಳಿಂದ ಕೆಲಸ ಮಾಡುತ್ತಿದ್ದಾರೆ. ಸುಮಾರು ಐವತ್ತರವತ್ತು ಜನರಷ್ಟೇ ಕೆಲಸ ಮಾಡುವ ಸಣ್ಣ ಘಟಕ. ತಿಂಗಳಿಗೆ ಎರಡು ಸಾವಿರ ರೂಪಾಯಿ ಸಂಬಳ. ಕೆಲವೊಮ್ಮೆ ಕೆಲಸದ ವೇಳೆಯ ನಂತರ ಸ್ವಲ್ಪ ಓವರ್‌ಟೈಂ ಮಾಡಬೇಕಾಗುತ್ತದೆ. ಆಗ ಗಂಟೆಗಿಷ್ಟೆಂದು ನಿಗದಿಯಾದ ಸಂಬಳ. ದೀಪಾವಳಿ ಸಂದರ್ಭದಲ್ಲಿ ಒಂದು ತಿಂಗಳ ಬೋನಸ್ ಸಿಗುತ್ತದೆ.

ದೇವರಾಜು ಮತ್ತೊಂದು ಗಾರ್ಮೆಂಟ್ ಕಾರ್ಖಾನೆಯಲ್ಲಿ ಕಟ್ಟರ್ ಮತ್ತು ಸ್ಯಾಂಪಲ್ ಟೈಲರ್ ಆಗಿ ಕೆಲಸ ಮಾಡುತ್ತಾರೆ. ೩೫೦೦ ರೂ. ಸಂಬಳ. ಬಾಡಿಗೆ ಮನೆಯಲ್ಲಿ ವಾಸ. ಇನ್ನೂ ಮಕ್ಕಳಾಗಿಲ್ಲ. ಹಾಗಾಗಿ, ಗಾಯತ್ರಿ ಒಂದೆರಡು ಚಿನ್ನಾಭರಣ ಮಾಡಿಸಿಕೊಳ್ಳಲು ಸಾಧ್ಯವಾಗಿದೆ. ಇಬ್ಬರ ದುಡಿಮೆ, ಹೇಗೋ ನಿಭಾಯಿಸಬಹುದು – ಎಂದುಕೊಂಡರೂ, ಸ್ವಂತ ಊರಿನಲ್ಲಿರುವ ತಂದೆ ತಾಯಿಗಳಿಗೆ ಸಹಾಯ ಮಾಡಲೇಬೇಕಾಗುತ್ತದೆ. ಊರಿನಲ್ಲಿರುವವರು ಇವರಿಂದ ಹೆಚ್ಚು ನಿರೀಕ್ಷಿಸುತ್ತಾರೆ. ಇದೇನೂ ಅಪರೂಪವಲ್ಲ.

ತಿಂಗಳ ಸಂಬಳವಲ್ಲದೆ ದಿನಗೂಲಿಗೆ ದುಡಿಯುವವರೂ ಇದ್ದಾರೆ. ದಿನಕ್ಕೆ ೬೦ ರಿಂದ ೮೦ ರೂ. ಮಜೂರಿ. ಹೆಚ್ಚು ಕೆಲಸವಿದ್ದಾಗ ಮಾತ್ರ ಇವರಿಗೆ ಅವಕಾಶ.

**ಕೆ. ಪಿ. ಸ್ವಾಮಿ**
ನಂ. ೧೬೭, ೧೧ನೇ ಮೈನ್, ೩ನೇ ಘಟ್ಟ
ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು - ೫೬೦ ೦೫೮

# ಯಾವ ದಾರಿಯ ಗುರುತು ನಾಳೆಗಾಗಿ



೧

ನಮ್ಮ ಕಣ ಕಣದ ಶಕ್ತಿ
ಘನೀಕರಿಸಿ ಕರಾಳದಲಿ
ವಿಚ್ಛಿದ್ರವೇ ಕಾವು ಕೂತು
ಕಾರ್ಮೋಡದುದ್ಯಾನದಲಿ ಕರಿನೆರಳ ಸಂಚು
ಕಣ್ಣ ಕಣ್ಣಲಿ ಕೆಂಡದುಂಡೆಯ ಹೊಂಚು,

ಕೊಳಿತ ಮೇಟಿಗೆ
ಕೊಳಕು ಬದ್ಧತೆಯ ಕತ್ತಿ ಮಸೆಯುವ ವ್ಯಾಘ್ರ ವಾರಸುದಾರ
ಗುರಾಯಿಸಿ ನೋಡುವನು
ಇವನಾರವ ?
ಇವ ನಾರುವ !
ಸ್ವತಃ ನಾರುವ ತಾನು
ತಾನೇ ತಾನಾಗಿ
ಮನದ ಮನೆಯಂಗಳ ತುಂಬ
ರಕ್ತ ಮಾಂಸದ ಮಜ್ಜೆ
ಒಳಗಿನೊಳಗಿರುವ ನಂಜಿಗೂ ನಾಚಿಕೆ
ಕರುಳ ಬಳ್ಳಿಯ ಕಾಲ್ತೊಡಕು
ಊರ ತುಂಬ

೨

ವಿಶ್ವಾಸವಿಲ್ಲದ ಮಾತಿಗೆ
ನಿಶ್ವಾಸ ರಮಿಸುತಿದೆ
ಮಾತಲ್ಲದ ಮಾತೊಳಗೆ
ಬರೀ ಮರುಳ ಸುರಿವ ಶಬ್ದ
ಹಗಲಿಗಾರಂಭವಿಲ್ಲ
ಇರುಳಿಗೆ ಬೆಳಗೆಂಬುದಿಲ್ಲ
ಹಾಲ ಹೊಳೆ ಹರಿವ ಮಾತು ದೂರ

೩

ಮನದ ಮಾರುತವು
ಗಾಳಿಗೊಡ್ಡಿದ ಸೊಡರಾಗಿ
ಮುದುಡಿ ಮರುಗುತ ಹುಡುಕುವುದು
ಯಾವ ದಾರಿಯ ಗುರುತು ನಾಳೆಗಾಗಿ ?

ಊರಿಂದೂರಿಗೆದ್ದ ಉಪ್ಪಿನ್ಹೋರಾಟದ
ಆ ಪಯಣ ಆ ಪ್ರಮಾಣ
ಕಾಲನಡಿಗೆ ಸಿಕ್ಕು
ಹಿಮದ ಹೆಜ್ಜೆಯಲಿ ಕರಗಿ
ಡೋಗಿ ಡೋಗಿಯ ಕಣ್ಣಲಿ ಡೊಂಬರಾಟ
ಅಸ್ಥಿಪಂಜರಕೆ ತೆವಲು ಭರತನಾಟ್ಯ

೪

ಅಗ್ರಹಾರದ ಆತ್ಮ ರತಿ
ಕಲಿಸುತಿದೆ ಮಂಗಗಳಿಗೆ
ಮರದಿಂದ ಮರ ನೆಗೆವ ಮರ್ಕಟ ಶಾಸ್ತ್ರ
ಹಾವು ಚೇಳುಗಳಿಗೆ ವಿಷದ ಪಾಠ

ಅರವತ್ತರ ಮರುಳನ ಕೈಯಲಿದೆ ಸೂತ್ರ
ತಾಯಿ ಸೆರಗೇ ಮತ್ತೊಬ್ಬ ಮುದಿ ಮರುಳನಿಗೆ ಗಾಳಿಪಟ

**ಶಂಕರಯ್ಯ ಆರ್. ಘಂಟಿ**
ಡಿ. ೧೨, ಸ್ಟಾಫ್ ಕ್ವಾರ್ಟರ್ಸ್, ಗುಲಬರ್ಗಾ ವಿಶ್ವವಿದ್ಯಾಲಯ
ಗುಲ್ಬರ್ಗಾ-೫೮೫ ೧೦೬

## ಸಾಕ್ಷರ ದಾರಿಯ ಸಾವಿರ ಹೆಜ್ಜೆ

*ಸಂ|| ತುಕಾರಾಂ ಎಸ್., ರಾಜು. ಬಿ.*




**ಪುಟ : 536**

**ನಿರ್ದೇಶಕರು**, ರಾಜ್ಯ ಸಂಪನ್ಮೂಲ ಕೇಂದ್ರ, ಹಳೇ ಎಚ್.ಡಿ. ಕೋಟೆ ರಸ್ತೆ, ಮೈಸೂರು- 570 008

*ಸಾಕ್ಷರತೆಯ ಮಹತ್ವವನ್ನು ಮನಗಂಡು, ವಯಸ್ಕರ ಶಿಕ್ಷಣದಂತಹ ಚಟುವಟಿಕೆಗಳ ಮೂಲಕ ಮುಖ್ಯವಾಗಿ ಗ್ರಾಮ ಸಮೂಹದ ಜನರ ಸಮೀಪಕ್ಕೆ ಅದನ್ನು ಕೊಂಡೊಯ್ದು ಆಂದೋಲನ ರೂಪದಲ್ಲಿ ಸಾಧಿಸಿದ ಯಶಸ್ಸಿನ ವಿವರ ದಾಖಲಿಸಲಾಗಿದೆ. ಕಲಿಕೆಯ ಸಾಮಗ್ರಿಗಳನ್ನು ಒದಗಿಸಿ, ಜನ ಶಿಕ್ಷಣ ನಿಲಯಗಳ ಮೂಲಕ ಮುಖ್ಯವಾಗಿ ಹಿಂದುಳಿದ ಜನತೆಯನ್ನು ಸಾಕ್ಷರರನ್ನಾಗಿ ರೂಪಿಸಲು ಪಟ್ಟಿರುವ ಒಂದು ಸಾಧನೆಯ ಪೂರ್ಣ ನೋಟ. ಈ ಪುಸ್ತಕ ಅನೇಕ ಅಧಿಕಾರಿ-ಜನಸೇವಕರಿಗೆ ಮಾರ್ಗದರ್ಶಿಕೆಯೂ ಹೌದು.*

## ನಾನೊಂದ ಕನಸ ಕಂಡೆ

*ಸಂ. ಡಾ|| ವಿಜಯಾ*



**ಪುಟ : 104** **ಬೆಲೆ : ರೂ. 60**

**ಈ ಮಾಸ ನಾಟಕ**, ನಂ. 690, 'ಕ್ಯೂ', 12ನೇ ಅಡ್ಡರಸ್ತೆ, 14ನೇ ಮುಖ್ಯರಸ್ತೆ, ಜೆ. ಪಿ. ನಗರ, 2ನೇ ಹಂತ, ಬೆಂ-78

*ವೃತ್ತಿ ರಂಗಭೂಮಿಯ ಮಹಿಳೆಯರ ಸಾಧನೆಗಳನ್ನು ತಿಳಿಸಿಕೊಡುವ ಮಹಿಳಾ ವಿಶೇಷಾಂಕ. ನಾಟಕಗಳಲ್ಲಿ ಪಾತ್ರ ವಹಿಸುವ ಸ್ತ್ರೀಯರ ಬಗ್ಗೆ ಕೇವಲವಾಗಿ ನೋಡುವ ಅಂದಿನ ಸಮಾಜವನ್ನು ಹೇಗೋ ದಿಟ್ಟತನದಿಂದ ಎದುರಿಸಿ ತಮ್ಮ ದಾರಿಯಲ್ಲಿ ಯಶಸ್ವಿಯಾಗಿ ಮುನ್ನಡೆದ ಕೆಲವು ರಂಗ ಕಲಾವಿದೆಯರನ್ನು ಪರಿಚಯಿಸಲಾಗಿದೆ. ತಾವು ಸಾಗಿ ಬಂದದಾರಿ ಬಹಳ ದುರ್ಗಮವಿತ್ತೆಂದು, ಅದು ಪ್ರವಾಹಕ್ಕೆದುರಾಗಿ ಈಜುವ ಸಾಹಸವಾಗಿತ್ತೆಂದು ಬಹಳ ನೋವಿನಿಂದ ಅವರು ಹೇಳಿಕೊಂಡಿದ್ದಾರೆ. ಹವ್ಯಾಸಿ-ವೃತ್ತಿರಂಗ ತಂಡಗಳ ಬಗ್ಗೆಯೂ ಲೇಖನಗಳಿವೆ.*




## ಮೃಗ-ಯಾ-ವಿನೋದ

*ಭುವನೇಶ್ವರಿ ಹೆಗಡೆ*

**ಪುಟ : 96** **ಬೆಲೆ : ರೂ. 40**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರೋಡ್, ಬೆಂಗಳೂರು - 560 001

*ಬಸ್ಸು-ಡ್ರೈವರು-ಕಂಡಕ್ಟರು ಎಂದರೆ ನೀವು ನಗಲಾರಿರಿ! ಈ ತ್ರಿಕೂಟದ ಸದಸ್ಯ ಕಂಡಕ್ಟರು ನಿಮ್ಮನ್ನು ಎಲ್ಲಿಗೆ? ಎಂದಾಗ, ಇವರು ಯಮನ ಏಜೆಂಟರೆಂದೂ, ಕೊಡುವ ಟಿಕೇಟು ಸೀದಾ ಯಮಲೋಕಕ್ಕೆಂದೂ ಲೇಖಕಿ ಶಂಕಿಸಿದಾಗ ನೀವು ಈಗಾಗಲೇ ನಕ್ಕಿರುತ್ತೀರಿ. ಚಾಲಕನಿಗೊಂದು ಜಾಗರೂಕತೆಯ ಪಾಠ. ಹೀಗೆ ಸಮಾಜಕ್ಕೊಂದು ಸಂದೇಶವನ್ನೂ ಕೊಡುತ್ತ ಹಾಸ್ಯ ಲೇಖನಗಳನ್ನು ಬರೆಯುವ ಶ್ರೀಮತಿ ಭುವನೇಶ್ವರಿ ಹೆಗಡೆ ಇಲ್ಲಿ ಅಭಿನಂದನಾರ್ಹರು. ಇಂತಹ 19 ಹಾಸ್ಯ ಲೇಖನಗಳಿವೆ.*

## ಹಕ್ಕಿಗೊಂದಿಷ್ಟು ಜಾಗ ಬಿಡು (ಕವನಗಳು)

*ಮೀನಾ ಸದಾಶಿವ*



**ಪುಟ : 106** **ಬೆಲೆ : ರೂ. 50**

**ಸಂಕ್ರಮಣ ಪ್ರಕಾಶನ**, 2751, 17-ಎ ಕ್ರಾಸ್, 6ನೇ ಮೇನ್, ಬನಶಂಕರಿ 2ನೇ ಹಂತ, ಬೆಂಗಳೂರು-560 070

*ನಿಸರ್ಗದ ಎಲ್ಲ ಸುಂದರ ವಸ್ತುಗಳನ್ನು ಪ್ರೀತಿಸುವ ಕವಿಯ ಮನಸ್ಸು ಸರಳವಾಗಿ ನೇರ ಅಭಿವ್ಯಕ್ತಿಯ ಮೂಲಕ ತನ್ನ ಭಾವನೆಗಳನ್ನು ಸ್ಫುರಿಸುತ್ತದೆ. ಇಂದು ಇದ್ದು ನಾಳೆ ಇಲ್ಲವಾಗುವ ಕ್ಷಣಿಕ ಆನಂದವನ್ನು ಕೊಡುವ ವಸ್ತು-ಚೈತನ್ಯದೊಂದಿಗೆ ಹುಲು ಮಾನವನ ಮನಸ್ಸನ್ನು ತುಲನೆ ಮಾಡುವ ಪ್ರಯತ್ನ. ಸಹಬಾಳ್ವೆಯ ಮಹತ್ವವನ್ನು ಕಲಿಸಲು ಮಾತಿಗೂ ಮೀರಿದ ಒಂದು ವ್ಯವಸ್ಥೆ ನಮಗೆ ಬೋಧಿಸುತ್ತಲೇ ಇರುವುದನ್ನು ನಮ್ಮ ಗಮನಕ್ಕೆ ಕವಿತೆಗಳ ಮೂಲಕ ತರಲಾಗಿದೆ. 93 ಕವಿತೆಗಳ ಸಂಕಲನ.*

## ಮಯ್ಯಾದಾಸನ ವಾಡೆ

*ಭೀಷ್ಮ ಸಾಹನಿ, ಅನು : ದು. ನಿಂ. ಬೆಳಗಲಿ*




**ಪುಟ : 296** **ಬೆಲೆ : ರೂ. 160**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರೋಡ್, ಬೆಂಗಳೂರು - 560 001

*ಬ್ರಿಟಿಷರು ಭಾರತದಲ್ಲಿ ತಮ್ಮ ನೆಲೆಗಳನ್ನು ಭದ್ರಪಡಿಸುತ್ತಿದ್ದ ಕಾಲದ ಐತಿಹಾಸಿಕ ಕಾದಂಬರಿ. ಯುದ್ಧಗಳ ಖಾಡಾಖಾಡಿ ಇಲ್ಲದಿದ್ದರೂ ಕುಯುಕ್ತಿಯಿಂದ ಹೊಂಚು ಹಾಕಿ ಆಡಳಿತವನ್ನು ತನ್ನ ಮುಷ್ಟಿಯಲ್ಲಿ ತೆಗೆದುಕೊಳ್ಳುತ್ತಿದ್ದ ಕಾಲ. ತಮ್ಮ ಜೀವನ ಶೈಲಿ-ಸಂಪ್ರದಾಯಗಳನ್ನು ಬಿಟ್ಟುಕೊಡಲು ಸುತರಾಂ ಸಿದ್ಧವಿಲ್ಲದ ಅಂದಿನ ಜನ, ರಾಜ್ಯಗಳು ಕೈಬಿಟ್ಟುಹೋದರೂ ಸಾಂಕೇತಿಕವಾಗಿಯಾದರೂ ಅವುಗಳನ್ನು ಉಳಿಸಿಕೊಳ್ಳಲು ಹೆಣಗುತ್ತಿದ್ದ ರೀತಿ ಇಲ್ಲಿ ಚಿತ್ರಿತವಾಗಿದೆ. ಎಂದಿನಂತೆ ಹಳೆಯ ಮೌಲ್ಯಗಳು ಚಲಾವಣೆ ಗಿಲ್ಲದ ನಾಣ್ಯಗಳಂತೆ ಉಳಿದುಬಿಡುತ್ತವೆ. ಸೊಗಸಾದ ಅನುವಾದ ಬೆಳಗಲಿಯವರದ್ದು.*



## ಮಾಸ್ಟರ್ ಬಿಲ್ಡರ್

**ಮೂಲ** : *ಹೆನ್ರಿಕ್ ಇಬ್ಸನ್*, **ಅನು** : *ಶ್ರೀನಿವಾಸ ವಿ. ಸುತ್ರಾವೆ*

**ಪುಟ : 152** **ಬೆಲೆ : ರೂ. 60**

**ವಿನಯ್ ಪ್ರಕಾಶನ**, 1646/18, ವಿದ್ಯಾನಗರ, ದಾವಣಗೆರೆ-5

*ಪಾಶ್ಚಿಮಾತ್ಯ-ಯೂರೋಪ್‌ಗಳ ಯಶಸ್ವೀ ನಾಟಕಕಾರರಿಗೆ ಭದ್ರ ಬುನಾದಿ ಹಾಕಿಕೊಟ್ಟ ಇಬ್ಸನ್‌ನ ಒಂದು ನಾಟಕದ ಅನುವಾದ. ತಲುಪಲಾರದ ಎತ್ತರಕ್ಕೆ ಏರುವ ಮಹತ್ವಾಕಾಂಕ್ಷೆಯಲ್ಲಿ ಮೇಲೇರಿ ವಿಜಯಿಯಾದೆ ಎನ್ನುವಷ್ಟರಲ್ಲಿ ಅವನು ಪತನದ ದಾರಿ ಹಿಡಿದಿರುತ್ತಾನೆಂಬುದು ಇಲ್ಲಿನ ನಾಟಕದ ನೀತಿಯಾಗಿದೆ. ಅತ್ಯಂತ ಸಂಕೀರ್ಣ ಪಾತ್ರಗಳು ನಮ್ಮ ಎಚ್ಚರದಲ್ಲಿ ನಾವಿರಬೇಕಾದ ಅಗತ್ಯವನ್ನು ಸಾರಿ ಹೇಳುತ್ತವೆ. ಅನುವಾದ ಸಾಹಿತ್ಯದಲ್ಲಿ ಪಳಗಿದ, ರಶ್ಯನ್ ಸಾಹಿತ್ಯ ಕೃತಿಗಳನ್ನು ಈಗಾಗಲೇ ಕನ್ನಡಿಸಿದ ಶ್ರೀ ಸುತ್ರಾವೆಯವರ ಸಮರ್ಥ ಅನುವಾದ.*




## ನೆನಪಿನ ಬಿಂಬಗಳು (ಆತ್ಮಕಥೆ)

*ಎಂ. ವಿ. ಭಟ್ (ಶ್ರೀ ಮಿತ್ತೂರು)*

**ಪುಟ : 272** **ಬೆಲೆ : ರೂ. 120**

ಜನಜೀವನ ಸಾಹಿತ್ಯ ಸದನ, ಮೇದರಹಳ್ಳಿ, ಬೆಂಗಳೂರು-90

*ಇದೊಂದು ಆತ್ಮಕಥೆ ಅಥವಾ ಆತ್ಮಾವಲೋಕನ. ವಿದ್ಯಾರ್ಥಿಗಳಿಗೆ ಪಾಠ ಹೇಳುವ ಶ್ರೀ ಮಿತ್ತೂರು ದಂಪತಿಗಳು ಜೀವನದುದ್ದಕ್ಕೂ ಬದುಕನ್ನು ಬಹು ಗಂಭೀರವಾಗಿ, ಸೂಕ್ಷ್ಮವಾಗಿ ಅವಲೋಕಿಸುತ್ತ ಹೆಜ್ಜೆ ಹೆಜ್ಜೆಗೂ ಸಮಾಜದಿಂದ ಪಾಠ ಕಲಿತವರು. ಈ ಕಥನದ ಮೂಲಕ ತಮ್ಮ ಸುದೀರ್ಘ ಬಾಳಿನಲ್ಲಿ ಬೀಸಿದ ತಂಗಾಳಿ, ಚುಚ್ಚಿದ ಮುಳ್ಳುಗಳು, ಉಂಡ ಸಿಹಿ-ಕಹಿಗಳನ್ನು ಪ್ರಾಮಾಣಿಕವಾಗಿ ದಾಖಲಿಸಿದ್ದಾರೆ. ಅವರು ತನ್ನ ಬಗ್ಗೆ ಹೇಳಿಕೊಳ್ಳುತ್ತಲೇ ಸುತ್ತಲ ಸಮಾಜದ ಒಳಿತನ್ನೂ, ಹುಳುಕನ್ನೂ ನಮಗೆ ತಿಳಿಸುತ್ತಾರೆ.*

## ಭಗವದ್ಗೀತೆ: ಅಪರಾಧ ಮತ್ತು ಶಿಕ್ಷೆ

*ಆರ್. ಡಿ ಹೆಗಡೆ, ಆಲ್ಮನೆ*

**ಪುಟ : 88** **ಬೆಲೆ : ರೂ. 35**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರೋಡ್, ಬೆಂಗಳೂರು - 560 001

*ದುಷ್ಟ ಸಂಹಾರ-ಶಿಷ್ಟ ರಕ್ಷಣೆಯ ನೆಪದಲ್ಲಿ ಅಮಾನವೀಯ ಹತ್ಯೆಗಳನ್ನು ಪ್ರಚೋದಿಸುವ, ಅವತಾರ ಪುರುಷನ ಮುಖವಾಣಿಗಳ ಮೂಲಕ ಅಪರಾಧಗಳನ್ನು ಸಮರ್ಥಿಸುವ ಧರ್ಮಗ್ರಂಥಗಳಿಗೆ ನಮ್ಮಲ್ಲಿ ಕೊರತೆಯಿಲ್ಲ. ಕೊರತೆಯಿರುವುದು ಅವುಗಳ ಕುರುಡು ಅಂಶಗಳನ್ನು ಪ್ರಶ್ನಿಸುವ ಮನಸ್ಸುಗಳದ್ದು ಮಾತ್ರ. [illegible] ಹಿಂಸೆ ಹತ್ಯೆಗಳ ಕ್ರೌರ್ಯ ಕಡಿಮೆಯಾಗಲಾರದು. ಭಾರತೀಯ [illegible] ಯಾವ ನೆಲೆಯಲ್ಲಿ ಸಮರ್ಥಿಸಲಾಗಿದೆಯೆಂದು ಲೇಖನಗಳಲ್ಲಿ [illegible]*

– [illegible]




*ಫೆಬ್ರವರಿ ೨೦೦೨ನೇ ಸಂಚಿಕೆಯಲ್ಲಿ ಈ ಲೇಖನದ ಮೊದಲ ಭಾಗ ಪ್ರಕಟವಾಗಿತ್ತು*

■

**ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ**

ಸಂಧಾನಕ್ಕಾಗಿ ಆಹ್ವಾನಿಸುವ ಮುಂಚೆ ಕಾಶ್ಮೀರ ಜನತೆಯ 'ಕಾಶ್ಮೀರತ್ವದ' (Kashmiriyat) ಪ್ರತಿನಿಧಿಗಳು ಯಾರು ಎಂಬುದನ್ನು ತಿಳಿದುಕೊಳ್ಳುವುದು ಅಗತ್ಯ. ಹಾಗೆಯೇ, ಕಾಶ್ಮೀರಕ್ಕೆ ಸಂಬಂಧಿಸಿದ ಯಾವುದೇ ಮಾತುಕತೆಯಲ್ಲಿ ಪಾಕಿಸ್ತಾನವು ಪಾಲ್ಗೊಳ್ಳುವುದು ಕೂಡ ಅನಿವಾರ್ಯ. ಇದರ ಜೊತೆಗೆ, ಶಾಂತಿ ಒಪ್ಪಂದವನ್ನು ಅಂಗೀಕರಿಸಿ, ಆಚರಣೆಗೆ ತರುವಂತೆ ಹೋರಾಟದಲ್ಲಿ ತೊಡಗಿರುವ ವಿವಿಧ ಬಣಗಳ ಮೇಲೆ ಪಾಕಿಸ್ತಾನವು ಪ್ರಭಾವ ಬೀರಬಲ್ಲುದೆ ಎಂಬುದನ್ನೂ ಯೋಚಿಸಬೇಕಾಗುತ್ತದೆ.

ಕಾಶ್ಮೀರ ರಾಜ್ಯದ ವಿವಿಧ ಭಾಗಗಳ ನಡುವೆ ಸಾಕಷ್ಟು ಮಟ್ಟಿನ ಅಂತರ್‌ಮಿಶ್ರಣವಿದ್ದರೂ ಪ್ರತಿಯೊಂದು ವಿಭಾಗಕ್ಕೆ ತನ್ನದೇ ಆದ ವೈಶಿಷ್ಟ್ಯಗಳೂ ಇವೆ. ಗಿಲ್ಗಿಟ್ ಮತ್ತು ಬಾಲ್ಟಿಸ್ತಾನಗಳ ವಿಶಾಲವಾದ ಉತ್ತರ ಭಾಗವು ಈಗ ನೇರವಾಗಿ ಇಸ್ಲಾಮಾಬಾದ್ ಆಳ್ವಿಕೆಯಲ್ಲಿದೆ; ಪಶ್ಚಿಮ ಭಾಗವು, ಈಗ ನಾವು 'ಪಾಕ್ ಆಕ್ರಮಿತ ಕಾಶ್ಮೀರ' (POK) ಎಂದು ಕರೆಯುವ, ಪ್ರಧಾನವಾಗಿ ಪಂಜಾಬಿ ಮುಸಲ್ಮಾನರು ವಾಸಿಸುವ ಪ್ರದೇಶ; ಟಿಬೆಟನ್ ಮತ್ತು ಮಧ್ಯ ಏಷ್ಯಾ ಸಂಸ್ಕೃತಿಗಳ ಪ್ರಭಾವವಿದ್ದು ಅಡ್ಡಾದಿಡ್ಡಿಯಾಗಿ ಹರಡಿಕೊಂಡಿರುವುದು ಲಡಾಖ್ ಪ್ರದೇಶ; ಜಮ್ಮು ಪ್ರದೇಶ; ಮತ್ತು ಕಡೆಯದಾಗಿ ತನ್ನದೇ ಆದ ಸಂಸ್ಕೃತಿ ಮತ್ತು ಐತಿಹಾಸಿಕ ಪರಂಪರೆಯನ್ನು ಹೊಂದಿರುವ ಕಾಶ್ಮೀರ ಕಣಿವೆ. ಈ ಐದು ಪ್ರದೇಶಗಳ ಪೈಕಿ ಎರಡು ಪ್ರದೇಶಗಳು ಕಳೆದ ಅರ್ಧ ಶತಮಾನದಿಂದಲೂ ಪಾಕಿಸ್ತಾನದ ವಶದಲ್ಲಿವೆ.

ಜನವಸತಿಯ ದೃಷ್ಟಿಯಿಂದ ಜಮ್ಮು, ಕಾಶ್ಮೀರ ಮತ್ತು ಲಡಾಖ್‌ಗಳು ಬಹುಧರ್ಮೀಯರ ನೆಲೆವೀಡಾಗಿವೆ. ಕಾಶ್ಮೀರ ಕಣಿವೆಯಲ್ಲಿ ಮುಸಲ್ಮಾನರು ಬಹು ಸಂಖ್ಯೆಯಲ್ಲಿದ್ದರೆ, ಜಮ್ಮು ಮೈದಾನ ಪ್ರದೇಶದಲ್ಲಿ ಹಿಂದುಗಳು ಹೆಚ್ಚಾಗಿದ್ದಾರೆ; ಒಟ್ಟಿನ ಮೇಲೆ ಜಮ್ಮು ಮತ್ತು ಕಾಶ್ಮೀರ ರಾಜ್ಯದಲ್ಲಿ ಹಿಂದುಗಳು ದೊಡ್ಡ ಅಲ್ಪಸಂಖ್ಯಾತ ಪಂಗಡ. ಮೂರನೆಯ ದೊಡ್ಡ ಗುಂಪು ಹಿಮಾವೃತ ಲಡಾಖ್ ಬಂಜರು ಭೂಮಿಯ ಸಮೀಪದ ಪರ್ವತ ಶ್ರೇಣಿಗಳಲ್ಲಿ ನೆಲೆಸಿರುವ ಲಡಾಖಿ ಬೌದ್ಧರದು.

'ಕಾಶ್ಮೀರ ಸ್ವಾತಂತ್ರ್ಯ' ಹೋರಾಟವು ಈಚಿನ ದಿನಗಳಲ್ಲಿ ಹಿಂಸಾಚಾರದ ಜೊತೆಗೆ ಹೆಚ್ಚು ಹೆಚ್ಚಾಗಿ ಪ್ರಚೋದನಕಾರಿ ಮತೀಯ ಘೋಷಣೆಗಳ ಸ್ವರೂಪವನ್ನು ತಾಳಿದೆ. ಭಾರತದ ರಾಜನೀತಿ ಮತ್ತು ಆಡಳಿತ ವಿಧಾನಗಳು ಹಿಂದು ಪರವಾಗಿವೆಯೆಂಬ ಸಂಶಯ ಕಾಶ್ಮೀರ ಜನತೆಯಲ್ಲಿ ನೆಲೆಸಿರುವುದು ಇದಕ್ಕೆ ಕಾರಣವಾಗಿದೆ. ಭಾರತ ಸರ್ಕಾರದ ಅಧಿಕೃತ ಮಾಹಿತಿಯ ಪ್ರಕಾರವೇ ದಂಗೆಕೋರರಲ್ಲಿ ಆಫ್ಘನ್ನರು, ಉಜ್‌ಬೆಕರು, ಸೂಡಾನಿಗಳು ಕೂಡ ಅಧಿಕಾಧಿಕ ಸಂಖ್ಯೆಯಲ್ಲಿ ಸೇರಿಕೊಂಡಿದ್ದಾರೆ. ಈ ಪಂಗಡಗಳು ಇಸ್ಲಾಂ 'ಪವಿತ್ರಯುದ್ಧ'ದ ನೆಲೆಯನ್ನು ಭದ್ರಗೊಳಿಸಿವೆ. ಹಾಗೆ ನೋಡಿದರೆ ಕಾಶ್ಮೀರದಲ್ಲಿ ಈ ಬಗೆಯ ಇಸ್ಲಾಂ ಮೂಲಭೂತವಾದವು ಒಂದು ವಿಪರ್ಯಾಸ. ಏಕೆಂದರೆ, ಕಾಶ್ಮೀರಿಗಳು ಅನುಸರಿಸುವ ಇಸ್ಲಾಂ ಧರ್ಮವು ಸಿಲ್ಸಿಲಾ-ಎ-ಋಷಿಯನ್ (Silsila-e-Rishiyan) ಎಂಬ ಸ್ಥಳೀಯ ಸೂಫಿ ಪಂಥದಿಂದ ಪ್ರಚುರಗೊಂಡದ್ದು. ಕಾಶ್ಮೀರ ಮುಸ್ಲಿಂ ಸಂತರ ಮೂಲಪುರುಷನಾದ ಶೇಕ್ ನೂರುದ್ದೀನ್ (೧೩೭೭-೧೪೪೨) ಎಂಬಾತನು ನೂರುದ್ದೀನ್ ಋಷಿ ಅಥವಾ ನಂದ್‌ಋಷಿ ಎಂಬ ಹೆಸರಿನಿಂದ ಕೂಡ ಪರಿಚಿತನಾಗಿದ್ದು, ಇಲ್ಲಿ ಸಣ್ಣ ಪ್ರಮಾಣದ ಒಂದು ಹಿಂದೂ ಸಮುದಾಯದವರು ಕೂಡ ಈತನನ್ನು ಮಹಾಸಂತನೆಂದು ಆರಾಧಿಸುತ್ತಾರೆ.

ಕಾಶ್ಮೀರ ಸಮಸ್ಯೆಯ ಬೀಜಾಣುಗಳನ್ನು ನಾವು ಹುಡುಕಬೇಕಾಗಿರುವುದು ಅಲ್ಲಿನ ದೊಡ್ಡ ಮುಸ್ಲಿಂ ಸಮುದಾಯದ ಅತೃಪ್ತಿ, ಅಸಮಾಧಾನಗಳ ಕಾರಣಗಳನ್ನು ಸಹಾನುಭೂತಿಯಿಂದ, ಸ್ಪಷ್ಟವಾಗಿ ಗ್ರಹಿಸುವ ಮೂಲಕ. ಸ್ವಾತಂತ್ರ್ಯವು ದೊರೆತ ದಿನಗಳಿಂದಲೂ ಕಾಶ್ಮೀರವು ಅಭಿವೃದ್ಧಿಯಲ್ಲಿ ತುಂಬ ಹಿಂದೆ ಬಿದ್ದಿದೆ. ರಾಜ್ಯದ ಬಹುತೇಕ ಕೈಗಾರಿಕೋದ್ಯಮಗಳು ಜಮ್ಮುವಿನಲ್ಲಿ ಕೇಂದ್ರೀಕೃತವಾಗಿದ್ದರೂ ಅಭಿವೃದ್ಧಿ ಯೋಜನೆಗಳ ಹೆಚ್ಚಿನ ಭಾಗವು ವ್ಯಯವಾಗುತ್ತಿರುವುದು ಶ್ರೀನಗರ ಮತ್ತಿತರ ಪ್ರವಾಸಿ ತಾಣಗಳಲ್ಲಿ. ಸಂಪನ್ಮೂಲಗಳಿಗಾಗಿ ಕಾಶ್ಮೀರ ಕಣಿವೆಯ ಈ ಎರಡೂ ಪ್ರದೇಶಗಳು ಕಚ್ಚಾಡುತ್ತಿವೆ. ಎರಡೂ ಪ್ರದೇಶಗಳ ನಡುವೆ ಸಮತೋಲನವನ್ನು ಕಾಯ್ದುಕೊಳ್ಳುವುದಕ್ಕಾಗಿ ರಾಜ್ಯ ಸರ್ಕಾರವು ಮಾಡುತ್ತಿರುವ ಒಂದು ಪ್ರಯೋಗವೆಂದರೆ, ಆಡಳಿತ ಕಛೇರಿಯನ್ನು ಚಳಿಗಾಲದಲ್ಲಿ ಜಮ್ಮುವಿಗೂ ಬೇಸಗೆಯಲ್ಲಿ ಶ್ರೀನಗರಕ್ಕೂ ವರ್ಗಾಯಿಸುವುದು. ಆರ್ಥಿಕಾಭಿವೃದ್ಧಿ ಕುಂಠಿತವಾಗಿರುವುದರಿಂದ ಇಡೀ ರಾಜ್ಯದಲ್ಲಿ ಅತೃಪ್ತಿ, ಅಸಮಾಧಾನಗಳು ತಲೆದೋರಿವೆ. ಇದರ ಜೊತೆಗೆ ಬಹುಸಂಖ್ಯಾತ ಮುಸಲ್ಮಾನರಲ್ಲಿ ಕೇಂದ್ರ ಸರ್ಕಾರವು ತಮ್ಮ ಬಗ್ಗೆ ಮಲತಾಯಿ ಧೋರಣೆ ತಾಳಿದೆಯೆಂಬ ಭಾವನೆಯೂ ಇದೆ. ಮುಸಲ್ಮಾನರ ಅಸಮಾಧಾನಕ್ಕೆ ಕಾರಣವಾಗಿರುವ ಮತ್ತೊಂದು ಸಂಗತಿಯೆಂದರೆ ಉರ್ದು ಭಾಷೆಯನ್ನು ಭಾರತದ ಅಧಿಕೃತ ಭಾಷೆಗಳಲ್ಲೊಂದಾಗಿ ಮಾಡದಿರುವುದು. ಕಾಶ್ಮೀರದಲ್ಲಿ ಶಿಕ್ಷಣಕ್ಕೆ ವಿನಿಯೋಗಿಸುವ ಹಣವು ಇಡೀ ರಾಷ್ಟ್ರದಲ್ಲಿಯೇ ಕನಿಷ್ಠ ಪ್ರಮಾಣದ್ದಾಗಿದೆ. ಕೈಗಾರಿಕೆಗಳಲ್ಲಿ ಬಂಡವಾಳ ಹೂಡಿಕೆಯು ವಸ್ತುತಃ ಶೂನ್ಯವಾಗಿದೆ.

ಜಮ್ಮು-ಕಾಶ್ಮೀರ ರಾಜ್ಯ ಸರ್ಕಾರದ ರಾಜಕೀಯ ಚಟುವಟಿಕೆಗಳು ದೆಹಲಿ ಪ್ರಭುಗಳ ಮರ್ಜಿಯನ್ನು ಅನುಸರಿಸಿಯೇ ನಡೆಯಬೇಕಾಗಿರುವುದು ಕೂಡ ಭಾರತ ಸರ್ಕಾರದ ವಿರುದ್ಧ ಜನತೆಯ ಅಸಮಾಧಾನಕ್ಕೆ ಕಾರಣವಾಗಿದೆ. ಪರಿಸ್ಥಿತಿಯು ಮತ್ತಷ್ಟು ಬಿಗಡಾಯಿಸಲು ಒಂದಾದ ಮೇಲೊಂದರಂತೆ ಬಂದ ರಾಜ್ಯ ಸರ್ಕಾರಗಳ ಅಸಾಮರ್ಥ್ಯ, ಭ್ರಷ್ಟಾಚಾರಗಳ ಜೊತೆಗೆ ೧೯೯೮ರಲ್ಲಿ ಭಾರತ ಪಾಕಿಸ್ತಾನಗಳೆರಡರಿಂದಲೂ ನಡೆದ ಅಣ್ವಸ್ತ್ರ ಸ್ಫೋಟವೂ ಕಾರಣವಾಯಿತು. ಲಡಾಖ್ ಪ್ರದೇಶವನ್ನು ಜಮ್ಮು ಮತ್ತು ಕಾಶ್ಮೀರಗಳಿಂದ ಪ್ರತ್ಯೇಕಿಸಿ, ನೇರವಾಗಿ ಕೇಂದ್ರಾಡಳಿತಕ್ಕೆ ಒಳಪಡಿಸಬೇಕೆಂಬ ಒತ್ತಾಯವು ಇಡೀ ರಾಜ್ಯದ ವಾತಾವರಣವನ್ನು ವಿಷಪೂರಿತವಾಗಿಸಿದೆ.

ಕಾಶ್ಮೀರದಲ್ಲಿ ನಡೆಯುತ್ತಿರುವ ಉಗ್ರಗಾಮಿ ಚಟುವಟಿಕೆಗಳು ಮತ್ತು ಅದನ್ನು ದಮನ ಮಾಡುವುದರ ಮೇಲೆಯೇ ಸರ್ಕಾರಗಳ ಗಮನವು ಕೇಂದ್ರೀಕೃತವಾಗಿರುವುದರಿಂದ ಕಾಶ್ಮೀರಿಗಳ ಆರ್ಥಿಕ ಸಾಮಾಜಿಕ ಸ್ಥಿತಿಗತಿಗಳ ವಿಚಾರವು ಪರಿಗಣನೆಗೇ ಬಂದಿಲ್ಲ. ಜಾಗತೀಕರಣ, ಉದಾರೀಕರಣ, ಜೀವನದ ವಿವಿಧ ರಂಗಗಳಲ್ಲಿ ಆಧುನಿಕ ತಂತ್ರಜ್ಞಾನದ ಅಳವಡಿಕೆ ಮೊದಲಾದವೆಲ್ಲ ಕಾಶ್ಮೀರದಿಂದ ದೂರವೇ ಉಳಿದಿವೆ. ಶೈಕ್ಷಣಿಕ ಸೌಲಭ್ಯಗಳು ಮತ್ತು ಸಂಪನ್ಮೂಲಗಳ ಕೊರತೆಯಿಂದಾಗಿ ಜನರು ತಮ್ಮ ಪರಂಪರಾಗತ ವೃತ್ತಿಗಳನ್ನೇ ಅವಲಂಬಿಸಿ ಹೇಗೋ ಬದುಕಿದ್ದಾರೆ. ಸಾಂಕೇತಿಕವಾದ ಆದರೆ ಎದ್ದು ಕಾಣುವ ಬೇರೆ ಬೇರೆ ಗುಂಪುಗಳನ್ನು ಐಕ್ಯಗೊಳಿಸಲು ಅಗತ್ಯವಾದ ಸಾಮಾಜಿಕಾರ್ಥಿಕ ಅಂತರ್ ಸಂಬಂಧಗಳು, ಪರಸ್ಪರಾವಲಂಬನೆಗಳು ಬೆಳೆಯುತ್ತಿಲ್ಲ. ಪ್ರತಿಯೊಂದು ಗುಂಪೂ ತನ್ನಷ್ಟಕ್ಕೇ ಪ್ರತ್ಯೇಕವೆನ್ನುವಂತೆ ಇದ್ದುಬಿಟ್ಟಿದೆ.

ಭಾರತದ ಮತಧರ್ಮನಿರಪೇಕ್ಷ ರಾಜಕೀಯ ನೀತಿಯು ಕೆಲವು ವಿಚಿತ್ರವಾದ ನಡೆವಳಿಕೆಗಳನ್ನು ಪ್ರದರ್ಶಿಸುತ್ತದೆ. ಸರ್ಕಾರವು ಕೆಲವು ನಿರ್ದಿಷ್ಟ ಬಣಗಳ ಮತಧಾರ್ಮಿಕ, ಸಾಂಸ್ಕೃತಿಕ ಬೇಡಿಕೆಗಳನ್ನು ಸಾಂಕೇತಿಕವಾಗಿ ಅಂಗೀಕರಿಸಿ ಪ್ರೋತ್ಸಾಹಿಸುತ್ತದೆ : ಮತ್ತೆ ಕೆಲವನ್ನು ಅಷ್ಟೇ ನಿರ್ಲಕ್ಷಿಸುತ್ತದೆ. ಕಾಶ್ಮೀರದ ಮುಸಲ್ಮಾನರಲ್ಲಿ ಹೆಚ್ಚು ಜನ ಅನುಸರಿಸುವುದು ನಿರ್ದಿಷ್ಟ ಸ್ಥಳೀಯ ಮುಸಲ್ಮಾನ್ ಋಷಿಗಳ 'ಕಾಶ್ಮೀರಿ ಇಸ್ಲಾಂ' ಎಂಬ ಸಂಪ್ರದಾಯ. ಈ ಮುಸಲ್ಮಾನ್ ಋಷಿಗಳಲ್ಲಿ ತುಂಬ ಪ್ರಸಿದ್ಧನಾದವನು ಶೇಕ್ ನೂರುದ್ದೀನ್ ಎಂಬಾತ; ಚರಾರ್-ಎ-ಷರೀಫ್ (Charar-e-sharief) ಎಂಬಲ್ಲಿದ್ದ ಆತನ ಪೂಜಾ ಮಂದಿರವನ್ನು ೧೯೯೫ರಲ್ಲಿ ಮೇ ೧೧ರಂದು ರಾತ್ರಿ ಧ್ವಂಸ ಮಾಡಲಾಯಿತು. ಆದರೆ, ಸರ್ಕಾರವಾಗಲೀ, ಸುದ್ದಿ ಮಾಧ್ಯಮಗಳಾಗಲಿ ಇದನ್ನು ಗಮನಿಸಿದಂತೆ ಇಲ್ಲ.

ಭಾರತ ಸಂವಿಧಾನದ ವಿಧಿ ನಿಯಮಗಳನ್ನು ಕಾಶ್ಮೀರಕ್ಕೆ ವಿಸ್ತರಿಸುವ ಸಲುವಾಗಿ ಆ ರಾಜ್ಯದ ಚುನಾಯಿತ ಸರ್ಕಾರಗಳನ್ನು ಮತ್ತೆ ಮತ್ತೆ ವಜಾ ಮಾಡಲಾಗುತ್ತಿದೆ. ಇಂಥ ಒಂದೊಂದು ಪ್ರಯತ್ನವೂ ಕೇಂದ್ರ ಸರ್ಕಾರ ಮತ್ತು ರಾಜ್ಯದ ನಡುವಿನ ಕಂದಕವನ್ನು ಹಿಗ್ಗಿಸುತ್ತಿವೆ. ಈ ನಡುವೆ ಶಾಂತಿ ಸಂಧಾನಕ್ಕಾಗಿ ನಡೆದಿರುವ ಕೆಲವು ಪ್ರಯತ್ನಗಳನ್ನು ಹೆಸರಿಸಬಹುದು.

ಅ) ೧೯೫೨ರಲ್ಲಿ ಶೇಕ್ ಅಬ್ದುಲ್ಲಾ ಮತ್ತು ಪಂಡಿತ ನೆಹರೂ ನಡುವೆ ಏರ್ಪಟ್ಟ ಸಂಧಾನದಲ್ಲಿ ಭಾರತದ ಒಳಗೆ ಕಾಶ್ಮೀರಕ್ಕೆ ಸ್ವಾಯತ್ತತೆಯನ್ನು ಕೊಡಲು ಒಪ್ಪಿಕೊಳ್ಳಲಾಯಿತು.

ಆ) ೧೯೭೫ರಲ್ಲಿ ಇಂದಿರಾ ಗಾಂಧಿ ಸಂದೇಶವಾಹಕರಾಗಿದ್ದ ಪಾರ್ಥಸಾರಥಿ ಮತ್ತು ಅಫ್ಜಲ್ ಅವರು ರಾಜ್ಯದ ಸಂವಿಧಾನದಲ್ಲಿ ಪ್ರಸ್ತಾಪಿಸಲ್ಪಟ್ಟಿರುವ ವಿಷಯಗಳ ಮೇಲೆ ಜಮ್ಮು ಮತ್ತು ಕಾಶ್ಮೀರದ ಹಕ್ಕನ್ನು ದೃಢೀಕರಿಸಿದರು.

ಇ) ೧೯೯೫ರಲ್ಲಿ ಪಿ. ವಿ. ನರಸಿಂಹರಾವ್ ಸರ್ಕಾರವು ಕಾಶ್ಮೀರಕ್ಕೆ 'ಸಂಪೂರ್ಣ ಸ್ವಾತಂತ್ರ್ಯಕ್ಕೆ ಸ್ವಲ್ಪವೇ ಕಡಿಮೆಯಾಗಿ ಆಕಾಶವ್ಯಾಪಿಯಾದ ಹಕ್ಕನ್ನು' ಕೊಡುವುದಾಗಿ ಘೋಷಿಸಿತು.

ಈ) ದೇವೇಗೌಡ ಅವರು, ಜಮ್ಮು ಮತ್ತು ಕಾಶ್ಮೀರವು ವಿಶೇಷ ಗಮನವನ್ನು ನಿರೀಕ್ಷಿಸುವುದರಿಂದ 'ಪರಮಾವಧಿ ಸ್ವಾಯತ್ತತೆ' ಕೊಡುವ ಭರವಸೆ ನೀಡಿದರು.

ಇಷ್ಟಾದ ಮೇಲೆಯೂ ಕೇಂದ್ರ ಸರ್ಕಾರದ ಧೋರಣೆಯನ್ನು ಸಂಕೇತಿಸುವಂತೆ, ಅತ್ಯಂತ ಹೆಚ್ಚು ಬಾರಿ ಚುನಾಯಿತ ಸರ್ಕಾರಗಳು ವಜಾ ಆಗಿರುವ ರಾಜ್ಯ ಕಾಶ್ಮೀರವಾಗಿದೆ. ಹಿಂದಿನ ಎಲ್ಲ ಅತಿರೇಕಗಳನ್ನು ಮೀರಿಸುವ ಕಾರ್ಯ ನಡೆದುದು ೧೯೮೪ರಲ್ಲಿ ಕಾಶ್ಮೀರದ ರಾಜ್ಯಪಾಲರಾಗಿದ್ದ ಜಗ್‌ಮೋಹನ್ ಅವರಿಂದ. (ಈಗ ಇವರು ಕೇಂದ್ರ ಸರ್ಕಾರದಲ್ಲಿ ಮಂತ್ರಿಯಾಗಿದ್ದಾರೆ). ''ಕಾಶ್ಮೀರವು ಭಾರತದಿಂದ ಪ್ರತ್ಯೇಕಗೊಳ್ಳುವ ವಿಚಾರ ಹಾಗಿರಲಿ; ಆ ರಾಜ್ಯವು ತನ್ನದೇ ಆದ ಚುನಾಯಿತ ಸರ್ಕಾರವನ್ನು ಕೂಡ ಹೊಂದಿರಲಾರದು'' ಎಂಬ ಸ್ಪಷ್ಟ ಸಂದೇಶವನ್ನು ಕೊಡುವಂತೆ ಫರೂಕ್ ಅಬ್ದುಲ್ಲಾ ಸರ್ಕಾರವನ್ನು ಕಿತ್ತುಹಾಕಿದರು. ಇದರಿಂದ ಕಾಶ್ಮೀರಿ ಅನನ್ಯತೆಯು ಕ್ಷೀಣಿಸಲು, ಅವರ ಪರಕೀಯತೆಯು ಹೆಚ್ಚಲು, ಮುಸಲ್ಮಾನರಲ್ಲಿ ಮತೀಯ ಭಾವನೆಯು ಉಲ್ಬಣಗೊಳ್ಳಲು ಪ್ರಬಲ ಕಾರಣಗಳೊದಗಿದಂತಾಯಿತು. ಭಾರತ ವಿರೋಧಿ ಶಕ್ತಿಗಳು, ಸ್ವಾರ್ಥ ಸಾಧಕರು ಇಂತಹ ಸನ್ನಿವೇಶವನ್ನು ಚೆನ್ನಾಗಿಯೇ ಬಳಸಿಕೊಳ್ಳತೊಡಗಿದರು.

**ಕಾಶ್ಮೀರ ಪರಿಸ್ಥಿತಿ : ಹಿಂದು-ಮುಸ್ಲಿಂ ಸಮಸ್ಯೆಯೆಂಬ ಭ್ರಮೆ**

ಕಾಶ್ಮೀರದ ರಾಜಕೀಯವು ಇಲ್ಲಿನ ಇತಿಹಾಸವನ್ನು ಕಾಶ್ಮೀರಿಗಳ ಸ್ವಯಮಾಡಳಿತಾವಧಿ ಮತ್ತು ವಿದೇಶಿ ಆಡಳಿತಾವಧಿ ಎಂದು ವಿಂಗಡಿಸುವುದಿಲ್ಲ. ಹಿಂದು ಮತ್ತು ಮುಸ್ಲಿಂ ಮತೀಯವಾದಿಗಳು ಮಾತ್ರ ಹಾಗೆ ವಿಭಜಿಸುತ್ತಾರಷ್ಟೆ. ವಾಸ್ತವವಾಗಿ ಕಾಶ್ಮೀರದ ಪರಾಧೀನತೆಯು ೧೯೪೭ರಲ್ಲಿ ಡೋಗ್ರಾ ವಂಶದ ಕಡೆಯ ದೊರೆಯು ಭಾರತಕ್ಕೆ ಸೇರಲು ಒಪ್ಪಿಕೊಂಡಾಗ ಅಥವಾ ೧೮೪೬ರಲ್ಲಿ ಮೊದಲ ಡೋಗ್ರಾ ದೊರೆ ಗುಲಾಬ್ ಸಿಂಗನು ಕಾಶ್ಮೀರವನ್ನು ಬ್ರಿಟಿಷರಿಂದ ಗೆದ್ದುಕೊಂಡಾಗ (ಕೊಂಡುಕೊಂಡಾಗ ?) ಆರಂಭವಾಗಲಿಲ್ಲ. ನಿಜವಾಗಿ ಕಾಶ್ಮೀರದ ಪರಾಧೀನತೆಯು ೧೫೮೬ರಲ್ಲಿ ಅಕ್ಬರ್ ಚಕ್ರವರ್ತಿಯು ತನ್ನ ಸಾಮ್ರಾಜ್ಯವನ್ನು ಕಾಶ್ಮೀರ ಕಣಿವೆಗೂ ವಿಸ್ತರಿಸಿ ಮುಂದೆ ಆಫ್ಘಾನ್, ಸಿಖ್ ಮತ್ತು ಡೋಗ್ರಾ ದೊರೆಗಳ ಮೂಲಕ ಆಡಳಿತ ನಡೆಸುವಾಗ ಆರಂಭವಾಯಿತು. ಭಾರತದ 'ಮತಧರ್ಮನಿರಪೇಕ್ಷ' ರಾಜನೀತಿಯಲ್ಲಿ ಅದು ಮುಂದುವರಿಯುತ್ತಿದೆ.'

ಶೇಕ್ ಅಬ್ದುಲ್ಲಾ ೧೯೪೩ ಮತ್ತು ೧೯೫೩ರ ನಡುವೆ ಭಾರತದೊಡನೆ ಸೇರ್ಪಡೆಯ ವಿಚಾರದಲ್ಲಿ ನುಣಚಿಕೊಳ್ಳುತ್ತ, ಡೋಲಾಯಮಾನವಾಗಿದ್ದರೂ ಆತನ ಸ್ವಂತ ನಿಲುವು (ಹಾಗೂ ಕಾಶ್ಮೀರಿ ಜನರ ಮನೋಭೀಷ್ಟಗಳು), ಶೇಕ್ ಅಬ್ದುಲ್ಲಾ ಬಗೆಗೆ ಜನಜನಿತವಾಗಿರುವ ಅಭಿಪ್ರಾಯಗಳಿಗೆ ವಿರುದ್ಧವಾಗಿವೆ. ಜಮ್ಮು ಮತ್ತು ಕಾಶ್ಮೀರ ಸಂವಿಧಾನದ ಉದ್ಘಾಟನಾ ಭಾಷಣದಲ್ಲಿ ಕಾಶ್ಮೀರವು ಪಾಕಿಸ್ತಾನವನ್ನು ಬಿಟ್ಟು ಭಾರತದ ಕಡೆಗೇ ಏಕೆ ಒಲಿಯಿತೆಂಬುದನ್ನು ಆತ ಸ್ಪಷ್ಟಪಡಿಸಿದ್ದಾನೆ. ''ಭಾರತದ ಮತಧರ್ಮನಿರಪೇಕ್ಷ ಸಂವಿಧಾನವು, ಬಹುಸಂಖ್ಯಾತ ಹಿಂದುಗಳ ದೇಶದಲ್ಲಿ ಮುಸಲ್ಮಾನರು ಸುರಕ್ಷಿತರಲ್ಲವೆಂಬ ಭಯವನ್ನು ನಿವಾರಿಸುತ್ತದೆ'' ಎಂಬುದು ಆತನ ಮಾತಿನ ಸಾರಾಂಶ. ಕಾಶ್ಮೀರದ ರಾಷ್ಟ್ರೀಯ ಸ್ವಾತಂತ್ರ್ಯ ಚಳುವಳಿಯು ಸಹಜವಾಗಿಯೇ ಮತಧರ್ಮನಿರಪೇಕ್ಷ, ಪ್ರಜಾಪ್ರಭುತ್ವವಾದಿ ನೀತಿಯನ್ನು ಆಧರಿಸಿತ್ತು. ಏಕೆಂದರೆ, ಇಲ್ಲಿನ ಜನರು ಒಂದು ಮತಧರ್ಮ ಅಥವಾ ಒಂದು ಸಾಮಾಜಿಕ ಪಂಗಡದ ಮೇಲೆ ಮತ್ತೊಂದು ಮತಧರ್ಮ ಅಥವಾ ಸಾಮಾಜಿಕ ಪಂಗಡವು ಅಧಿಕಾರ ಚಲಾಯಿಸುವುದನ್ನು ಎಂದೆಂದೂ ಒಪ್ಪಿರಲಿಲ್ಲ. ಇದರ ಜೊತೆಗೆ ಕಾಶ್ಮೀರವನ್ನು ಭಾರತಕ್ಕೆ ಸೇರ್ಪಡೆ ಮಾಡುವ ಮೂಲಕ, ತರ್ಕರಹಿತ ಮತಾಂಧತೆಯನ್ನು ಸೋಲಿಸಬಹುದು; ಮತೀಯ ಹಿಂದುತ್ವ ಶಕ್ತಿಗಳನ್ನು ನಿಗ್ರಹಿಸಬಹುದು - ಎಂಬುದು ಕೂಡ ಶೇಕ್ ಅಬ್ದುಲ್ಲಾ ನಿರೀಕ್ಷೆಯಾಗಿತ್ತು. ಸಂಗ್ರಹದಲ್ಲಿ ಹೇಳುವುದಾದರೆ, ಶೇಕ್ ಅಬ್ದುಲ್ಲಾ ನೇತೃತ್ವದಲ್ಲಿ ಆರಂಭವಾದ ನ್ಯಾಷನಲ್ ಕಾನ್‌ಫರೆನ್ಸ್ ಚಳುವಳಿಯು ಮತಧರ್ಮನಿರಪೇಕ್ಷ ಪ್ರಜಾಪ್ರಭುತ್ವವಾದಿ ಚಳುವಳಿಯಾಗಿತ್ತು.

ಅಂದಿನ ದಿನಗಳಲ್ಲಿ ಕಾಶ್ಮೀರದ ಮಹಾರಾಜನಿಗೆ ಮತ್ತು ಪ್ರಭಾವಶಾಲಿ ಮುಸ್ಲಿಂ ನಾಯಕರಿಗೆ ಪಾಕಿಸ್ತಾನವು ಅತ್ಯಂತ ಲಾಭದಾಯಕವಾದ ಸ್ಥಾನಮಾನಗಳ ಆಮಿಷ ಒಡ್ಡಿದರೂ ಸಹ ಅವರು ಪಾಕಿಸ್ತಾನದ ಕಡೆಗೆ ಒಲಿಯಲಿಲ್ಲ; ಏಕೆಂದರೆ, ಮತಧರ್ಮನಿರಪೇಕ್ಷ ಸಮಕಾಲೀನ ಮೌಲ್ಯಗಳನ್ನು ಸಾಧಿಸಿ ತೋರಿಸಬೇಕೆಂಬುದು ಅವರ ಪ್ರಬಲ ಆಕಾಂಕ್ಷೆಯಾಗಿತ್ತು. ಆರಂಭದ ದಿನಗಳಲ್ಲಿ ಭಾರತದ ಧೋರಣೆಯೂ ಕೂಡ ಇದೇ ಬಗೆಯಾಗಿತ್ತು. ಪ್ರಧಾನಮಂತ್ರಿ ಪಂಡಿತ್ ನೆಹರೂ ಅವರು ೧೯೪೮ರ ಮಾರ್ಚ್ ೫ರಂದು ಸಂವಿಧಾನ ಸಭೆಯಲ್ಲಿ ''ಕಾಶ್ಮೀರ ಮಹಾರಾಜನು ನಮ್ಮನ್ನು ಆಹ್ವಾನಿಸಿದ್ದರೂ ಸಹ ಆ ಆಹ್ವಾನವು ಕಾಶ್ಮೀರದ ಜನಪ್ರತಿನಿಧಿಗಳಿಂದ ಸಮರ್ಥಿತವಾಗದಿದ್ದ ಪಕ್ಷದಲ್ಲಿ ನಾವು ಅಲ್ಲಿಗೆ ಹೋಗುತ್ತಲೇ ಇರಲಿಲ್ಲ'' ಎಂದು ಹೇಳಿದ್ದುಂಟು. ಆದರೆ, ಕ್ರಮೇಣ ಕಾಶ್ಮೀರವನ್ನು ಭಾರತದಲ್ಲಿ ಐಕ್ಯಗೊಳಿಸುವ ಮತ್ತು ಭಾರತ ಸಂವಿಧಾನ ವಿಧಿಗಳನ್ನು ಹೇಗಾದರೂ ಮಾಡಿ ಕಾಶ್ಮೀರಕ್ಕೆ ವಿಸ್ತರಿಸುವ ಪ್ರಯತ್ನಗಳು ಕಾಶ್ಮೀರಿ ಜನತೆಯನ್ನು ಪರಕೀಯರಾಗಿಸುವುದರಲ್ಲಿ ಪರ್ಯವಸಾನವಾದುವು. ಕಾಶ್ಮೀರದ ಅನನ್ಯತೆಯು ಕ್ಷೀಣಿಸಿದಂತೆ ಅದು ಮುಸ್ಲಿಂ ಅನನ್ಯತೆಯಾಗಿ ಹೊರಹೊಮ್ಮತೊಡಗಿತು.

ಇಷ್ಟಾದ ಮೇಲೆಯೂ ಕಾಶ್ಮೀರಿಗಳು ಪಾಕಿಸ್ತಾನಕ್ಕೆ ಸೇರ್ಪಡೆಯಾಗುವ ಪರ್ಯಾಯವನ್ನು ಆಯ್ಕೆ ಮಾಡಿಕೊಂಡಿಲ್ಲವೆಂಬುದು ಗಮನಾರ್ಹ. ಅವರ ಮನೋಭೀಷ್ಟವೆಂದರೆ, ಕಾಶ್ಮೀರಿ ಜನಾಂಗದ ವಿಶಿಷ್ಟ ಲಕ್ಷಣಗಳನ್ನು ಕಾಪಾಡಿಕೊಂಡುಬರುವುದು ಮತ್ತು ಮದ್ದುಗುಂಡುಗಳ ಸಿಡಿಸಿಡಿ ರಾಜಕೀಯದಿಂದ ಮುಕ್ತವಾಗಿ ಶಾಂತಿಯುತ ಬಾಳ್ವೆ ನಡೆಸುವುದು. 'ಔಟ್‌ಲುಕ್' ಪತ್ರಿಕೆಯು (೧೬ನೇ ಅಕ್ಟೋಬರ್ ೨೦೦೦) ನಡೆಸಿದ ಸಮೀಕ್ಷೆಯೊಂದು, ಇದಕ್ಕೆ ವಿರುದ್ಧವಾದ ಊಹಾಪೋಹಗಳೆಲ್ಲ ಬರಿ ಭ್ರಾಂತಿಯೆಂದು ಸಾರುತ್ತದೆ. ಸಮೀಕ್ಷೆಯ ಪ್ರಕಾರ ಕಾಶ್ಮೀರದಲ್ಲಿ ಶೇ. ೭೪ ಜನ ಬಯಸುವುದು ಈ ರಾಜ್ಯಕ್ಕೆ ವಿಶಿಷ್ಟವಾದ ಅನನ್ಯತೆ; ಶೇ. ೧೬ ಜನ ಹೆಚ್ಚಿನ ಸ್ವಾಯತ್ತತೆಯನ್ನು ಬಯಸಿದ್ದು, ಶೇ. ೦೨ ಜನ ಮಾತ್ರ ಪಾಕಿಸ್ತಾನದೊಡನೆ ಸೇರ್ಪಡೆಯಾಗುವುದನ್ನು ಬಯಸಿದ್ದಾರೆ. ಈಗಲೂ ಸಹ ಶೇ. ೩೯ರಷ್ಟು ಜನ ಭಾರತ ಸಂವಿಧಾನದ ಚೌಕಟ್ಟಿನಲ್ಲೇ ಕಾಶ್ಮೀರ ಸಮಸ್ಯೆಗೆ ಪರಿಹಾರ ಕಾಣುವುದು ಸಾಧ್ಯವೆಂದು ನಂಬಿದ್ದಾರೆ.

**ಹಿಂಸಾಚಾರ ಮತ್ತು ಕಾಶ್ಮೀರಿ ಪಂಡಿತರ ವಲಸೆ**

ಕಾಶ್ಮೀರಿಗಳ ಪರಕೀಯತೆಯ ಭಾವನೆಯು ಅವರ ಬಗೆಗೆ ಭಾರತದಲ್ಲಿ ಸಾಮಾನ್ಯವಾಗಿ ಹರಡಿರುವ ಅಪನಂಬಿಕೆಯಿಂದ ಮತ್ತಷ್ಟು ಉಲ್ಬಣಗೊಂಡಿದೆ. ಅವರು ಪಾಕಿಸ್ತಾನ ಪರವಾಗಿದ್ದಾರೆಂಬ ಅಭಿಪ್ರಾಯವನ್ನು ಪ್ರಚಾರ ಮಾಡುವುದರಲ್ಲಿ ಬಲಪಂಥೀಯ ಹಿಂದುತ್ವ ವಾದಿಗಳದು (ಅವರು ಮಾತ್ರವೇ ಅಲ್ಲದಿರಬಹುದು) ಪ್ರಮುಖ ಪಾತ್ರ. ಕಾಶ್ಮೀರವು ನ್ಯಾಯಸಮ್ಮತವಲ್ಲದ ಬೇಡಿಕೆಗಳನ್ನು ಮುಂದಿಟ್ಟು ಕೇಂದ್ರ ಸರ್ಕಾರದಿಂದ ಅತಿ ಹೆಚ್ಚಿನ ಲಾಭ ಪಡೆದುಕೊಳ್ಳುತ್ತಿದೆ; ಕಾಶ್ಮೀರವು ಕೇಂದ್ರದ 'ಅತಿವಾತ್ಸಲ್ಯ'ಕ್ಕೆ ಪಾತ್ರವಾಗಿದೆ; ಇದು ಅಲ್ಪಸಂಖ್ಯಾತರನ್ನು ಓಲೈಸುವ ನೀತಿಗೆ ಸ್ಪಷ್ಟ ನಿದರ್ಶನ - ಎಂದೆಲ್ಲ ಅವರು ಆರೋಪಿಸುತ್ತಾರೆ. ರಾಷ್ಟ್ರೀಯತೆಯ ಸೋಗಿನಲ್ಲಿ ಪ್ರದರ್ಶನಗೊಳ್ಳುವ ಇವರ ಆವೇಶವು, ಕಾಶ್ಮೀರದ ಅನನ್ಯತೆಯನ್ನು ಸಂಪೂರ್ಣ ಅಳಿಸಿಹಾಕಿದಾಗಲೇ ಅಲ್ಲಿನ ಸಮಸ್ಯೆಯನ್ನು ಬಗೆಹರಿಸುವುದು ಸಾಧ್ಯ ಎಂಬ ರೂಪವನ್ನು ಕೂಡ ತಾಳುತ್ತದೆ. ಭಾಜಪ ಸಹ ಕೇಂದ್ರದಲ್ಲಿ ಅಧಿಕಾರಕ್ಕೆ ಬರುವವರೆಗೆ 'ಕಾಶ್ಮೀರಕ್ಕೆ ವಿಶೇಷ ಸ್ಥಾನಮಾನಗಳನ್ನು ಕೊಡುವ ಸಂವಿಧಾನದ ೩೭೦ನೇ ವಿಧಿಯನ್ನು ರದ್ದುಪಡಿಸಬೇಕು; ಕಾಶ್ಮೀರವನ್ನು ಭಾರತದೊಂದಿಗೆ ಸಂಪೂರ್ಣ ಐಕ್ಯಗೊಳಿಸುವುದೊಂದೇ ಅಲ್ಲಿನ ಸಮಸ್ಯೆಗೆ ಪರಿಹಾರ,' ಎಂದು ವಾದಿಸುತ್ತಿತ್ತು. ಹಿಂದುತ್ವವಾದಿಗಳೂ, ಭಾಜಪದವರೂ ಸೂಚಿಸುವ ಮತ್ತೊಂದು ಪರಿಹಾರ, ಕಾಶ್ಮೀರೇತರ ಜನ (ಅಂದರೆ ಮುಸಲ್ಮಾನರಲ್ಲದವರು) ಹೆಚ್ಚು ಹೆಚ್ಚಾಗಿ ಅಲ್ಲಿಗೆ ಹೋಗಿ ನೆಲೆಸಬೇಕು; ಹೀಗೆ ಕಾಶ್ಮೀರಿಗಳು (ಅಂದರೆ ಮುಸಲ್ಮಾನರು) ಅಲ್ಲಿ ಬಹುಸಂಖ್ಯಾತರಾಗಿರುವುದನ್ನು ತಪ್ಪಿಸಬಹುದು ಎಂಬುದು. ಪ್ರಾಯಶಃ ಈ ಜನರು ಪ್ಯಾಲಸ್ಟೇನ್‌ನಲ್ಲಿ ಯಹೂದಿಗಳನ್ನು ತುಂಬುವ ನೀತಿಯ ವೈಫಲ್ಯದಿಂದಲೂ ಪಾಠ ಕಲಿತಂತಿಲ್ಲ.




ಕಾಶ್ಮೀರ ಕಣಿವೆಯಲ್ಲಿ ಉಗ್ರಗಾಮಿಗಳ ದಾಳಿ, ಹಿಂಸಾಚಾರಗಳಿಂದ ಹಿಂದು ಪಂಡಿತರು ನಾಡಿನ ಬೇರೆ ಬೇರೆ ಭಾಗಗಳಿಗೆ ವಲಸೆ ಹೋಗುತ್ತಿದ್ದಾರೆಂಬ ಅಂಶವನ್ನು ಪರಿಗಣಿಸಬೇಕು. ಹಾಗೆ ನೋಡಿದರೆ ಕಾಶ್ಮೀರಿ ಪಂಡಿತರು ಮಾತ್ರವೇ ಉಗ್ರಗಾಮಿಗಳ ದಾಳಿಗೆ ಗುರಿಯಾಗಿಲ್ಲ. ದಂಗೆಕೋರರು ಒಟ್ಟಿನ ಮೇಲೆ ಜನರನ್ನು ಕೊಂದು, ಲೂಟಿ ಮಾಡುತ್ತಾರೆಯೇ ಹೊರತು ಹಿಂದುಗಳು, ಮುಸಲ್ಮಾನರು ಎಂದು ಭೇದ ಮಾಡುವುದಿಲ್ಲ. ಈಚಿನ ದಿನಗಳಲ್ಲಿ ಮಾತ್ರ ಹೊರಗಿನಿಂದ ಬಂದ ಕೆಲವು ಉಗ್ರವಾದಿ ಗುಂಪುಗಳು ಶಾಂತಿ ಸಂಧಾನದ ಪ್ರಯತ್ನಗಳನ್ನು ಹಾಳುಮಾಡುವ ಉದ್ದೇಶದಿಂದ ತಮ್ಮ ಹಿಂಸಾಚಾರಕ್ಕೆ ಮತೀಯ ಬಣ್ಣ ಬಳಿದು ಮುಸ್ಲಿಮರಲ್ಲದವರನ್ನು, ಅಮಾಯಕರನ್ನು ಹೆಚ್ಚಾಗಿ ಕೊಲ್ಲುತ್ತಿರುವ ವರದಿಯಾಗಿದೆ. 'ಟೈಮ್ಸ್ ಆಫ್ ಇಂಡಿಯಾ' ವರದಿಯೊಂದರ ಪ್ರಕಾರ (ಫೆಬ್ರವರಿ ೫, ೧೯೯೨) ಭಯೋತ್ಪಾದಕರು ೧೯೯೦-೯೨ರ ನಡುವೆ ಕೊಲೆಮಾಡಿದವರಲ್ಲಿ ೯೮೨ ಜನ ಮುಸಲ್ಮಾನರು, ೨೧೮ ಹಿಂದುಗಳು, ೨೩ ಸಿಖ್ಖರು ಮತ್ತು ೩೬೩ ಜನ ರಕ್ಷಣಾ ಪಡೆಯವರು; ಹೆಂಗಸರು ಗಂಡಸರು ಮಕ್ಕಳೂ ಒಟ್ಟು ೧೫೮೫ ಜನ ಸೇರಿದ್ದಾರೆ.

೧೯೯೦ಕ್ಕಿಂತ ಮುಂಚೆ ಕಾಶ್ಮೀರಿ ಪಂಡಿತರು ವಲಸೆ ಹೋಗುವ ಪರಿಸ್ಥಿತಿಯಿರಲಿಲ್ಲ. ಆನಂತರದ ದಿನಗಳಲ್ಲಿ ಹಿಮಾಚಲ ಪ್ರದೇಶ ಮತ್ತು ಇತರ ರಾಜ್ಯಗಳಿಗೆ ವಲಸೆ ಆರಂಭವಾಯಿತು. ದೆಹಲಿಯ ನಿರಾಶ್ರಿತ ಶಿಬಿರಗಳಲ್ಲಿ ಸುಮಾರು ೪೦,೦೦೦ ಜನರಿದ್ದಾರೆ. ಕಾಶ್ಮೀರಿ ಪಂಡಿತರು ವಲಸೆ ಹೋಗುವ ವಿಚಾರವನ್ನು ಮೊದಲಬಾರಿಗೆ ೧೯೮೬ರಲ್ಲಿ ಯೋಚಿಸಿದ್ದರು. ಆದರೆ ಕಾಶ್ಮೀರದ ಹಲವು ಗೌರವಾನ್ವಿತ ವ್ಯಕ್ತಿಗಳು ಸೇರಿ ರಚಿಸಿದ 'ಸೌಹಾರ್ದ ನಿಯೋಗ' (goodwill mission)ದ ಮನವಿಯ ಮೇರೆಗೆ ಪಂಡಿತರು ತಮ್ಮ ನಿರ್ಧಾರವನ್ನು ತಡೆಹಿಡಿದಿದ್ದರು. ೧೯೯೦ರ ವೇಳೆಗೆ ಭಯೋತ್ಪಾದಕರ ದೌರ್ಜನ್ಯವು ಅತಿಯಾಯಿತು. ಆಗ ಕಾಶ್ಮೀರದ ರಾಜ್ಯಪಾಲರಾಗಿದ್ದ ಜಗ್‌ಮೋಹನ್, ಸೌಹಾರ್ದ ನಿಯೋಗವನ್ನು ವಿಸರ್ಜಿಸಿ ಪಂಡಿತರು ಜಮ್ಮುವಿಗೆ ವಲಸೆ ಹೋಗುವಂತೆ ಪ್ರೇರೇಪಿಸಿದರು. ''ತೀವ್ರವಾಗಿ ಆಘಾತಗೊಂಡಿದ್ದ ಪಂಡಿತ ವರ್ಗಕ್ಕೆ ಅಗತ್ಯವಾದ ರಕ್ಷಣೆ ಒದಗಿಸಲು ಸೇನಾದಳವು ಅಸಮರ್ಥವಾಗಿದೆಯೆಂದೂ ಆದ್ದರಿಂದ ಕಣಿವೆಯನ್ನು ಬಿಟ್ಟುಹೋಗುವಂತೆ ಪಂಡಿತರಿಗೆ ಸಲಹೆ ಮಾಡಿದುದಾಗಿಯೂ'' ಆತ ಬಹಿರಂಗ ಹೇಳಿಕೆಗಳನ್ನು ನೀಡಿದರು. ಸರ್ಕಾರವು ಇಡೀ ಜನಸಮುದಾಯಕ್ಕೆ ರಕ್ಷಣೆ ನೀಡಲು ಅಸಮರ್ಥವಾಗಿದೆಯೆಂದು ಜಗಮೋಹನ್ ಹೇಳಿದ್ದು ಸಾರ್ವಜನಿಕರನ್ನು ನಂಬಿಸಲು ಒಂದು ನೆಪ ಮಾತ್ರ. ವಾಸ್ತವವಾಗಿ ಆತನ ವೈಯಕ್ತಿಕ ಉದ್ದೇಶವೇ ಬೇರೆಯಾಗಿತ್ತು. ಕಾಶ್ಮೀರದ ಹಿಂಸಾಚಾರಕ್ಕೆ ತೀವ್ರ ಕೋಮು ಘರ್ಷಣೆಯ ಬಣ್ಣ ಬಳಿದು ಭಾರತದ ಕೋಮುವಾದಿಗಳು ಮಾಡುತ್ತಿದ್ದ ಪ್ರಚಾರಕ್ಕೆ ಒಂದು ಸೂಕ್ತ ಸಂಕೇತವನ್ನೊದಗಿಸುವ ಹುನ್ನಾರ ಇದಾಗಿತ್ತು. ಭಯೋತ್ಪಾದಕರ ಮೂಲಕ ಉಂಟಾಗುತ್ತಿದ್ದ ಕೋಮು ವಿಭಜನೆಯನ್ನು ತಡೆಯಲು ಕಾಶ್ಮೀರದ ಗಣ್ಯರು ಮಾಡಿದ ಪ್ರಯತ್ನಗಳಿಗೆ ರಾಜ್ಯಪಾಲರು ತೋರಿದ ಪ್ರತಿಕ್ರಿಯೆಯಿಂದಲೂ ಇದು ವ್ಯಕ್ತವಾಗುತ್ತದೆ. ''ಕಾಶ್ಮೀರವು ಹೀಗೆಯೇ ಉಳಿದಿದ್ದರೆ, ಅಮೆರಿಕ ಮತ್ತು ಪಾಕಿಸ್ತಾನಗಳು ಪರಿಸ್ಥಿತಿಯನ್ನು ದುರುಪಯೋಗಪಡಿಸಿಕೊಳ್ಳುತ್ತವೆ. ಕಣಿವೆಯಲ್ಲಿ ಹಿಂದುಗಳು ಮತ್ತು ಮುಸಲ್ಮಾನರು ಒಟ್ಟಿಗೆ ಇದ್ದರೆ ಅದರಿಂದ ಸೇನಾ ಪಡೆಗಳ ನೈತಿಕ ಧೈರ್ಯವು ಕುಗ್ಗುತ್ತದೆ'' ಎಂದು ವಾದಿಸಿದ ಜಗಮೋಹನ್ ಶಾಂತಿ ಸ್ಥಾಪನೆಗಾಗಿ ಗಣ್ಯವ್ಯಕ್ತಿಗಳು ಮಾಡಿದ ಪ್ರಯತ್ನವು ಯಶಸ್ವಿಯಾಗಲು ಬಿಡಲಿಲ್ಲ.

೧೯೯೦ರ ಮಾರ್ಚ್‌ನಲ್ಲಿ ಬಲರಾಜ್ ಪುರಿಯವರು ''ಕಾಶ್ಮೀರದ ಸಾಮಾನ್ಯ ಮುಸಲ್ಮಾನರಲ್ಲಿ ಹಿಂದು ಪಂಡಿತರ ಬಗ್ಗೆ ದ್ವೇಷಾಸೂಯೆಗಳು ನನಗೆ ಗೋಚರಿಸಲಿಲ್ಲ. ರಕ್ಷಣಾ ಪಡೆಗಳಿಂದ ತೀವ್ರ ಸ್ವರೂಪದ ಮಾನವ ಹಕ್ಕುಗಳ ಉಲ್ಲಂಘನೆಯಾಗಿದೆಯೆಂಬ ಆರೋಪವನ್ನು ಕುರಿತು ತನಿಖೆ ನಡೆಸಬೇಕು'' ಎಂದು ಹೇಳಿದರು. ಇದೇ ಸಮಯದಲ್ಲಿ ಹಿಂದು ಕೋಮುವಾದಿ ಸಂಘಟನೆಗಳು ಕಾಶ್ಮೀರಿ ಪಂಡಿತರು ಭಯಪೀಡಿತರಾಗಿರುವರೆಂಬ ಸುದ್ದಿ ಹರಡುವ ತೀವ್ರ ಪ್ರಚಾರ ಕೈಗೊಂಡವು. ಕಾಶ್ಮೀರದಲ್ಲಿ ನೂರಾರು ಹಿಂದು ದೇವಾಲಯಗಳನ್ನು ನಾಶ ಮಾಡಲಾಗಿದೆ ಇಲ್ಲವೆ ಅಪವಿತ್ರಗೊಳಿಸಲಾಗಿದೆಯೆಂಬ ವದಂತಿಯನ್ನು ದೆಹಲಿ ಮತ್ತು ಜಮ್ಮುವಿನಲ್ಲಿ ಹಬ್ಬಿಸಲಾಯಿತು. ಜನರಿಗೆ ಸತ್ಯಾಂಶವನ್ನು ತಿಳಿಸುವ ಸಲುವಾಗಿಯಾದರೂ ಕಾಶ್ಮೀರದ ಮಂದಿರಗಳ ಬಗೆಗೆ ಒಂದು ಕಾರ್ಯಕ್ರಮ ನಡೆಸುವಂತೆ ಸರ್ಕಾರವು ದೂರದರ್ಶನವನ್ನು ಏಕೆ ಕೇಳಲಿಲ್ಲ ಎಂಬುದು ನಿಜವಾಗಿಯೂ ಆಶ್ಚರ್ಯದ ಸಂಗತಿ.

ಕಾಶ್ಮೀರ 'ಸಮಸ್ಯೆ'ಯನ್ನು ಬಗೆಹರಿಸುವುದಕ್ಕಾಗಿ ಸರ್ಕಾರವು/ಗಳು ಕೈಗೊಳ್ಳುತ್ತಿರುವ ಕ್ರಮಗಳ ಜೊತೆಗೆ ಹಲವು ಹೊಸ ಸಲಹೆಗಳು ಬಂದಿರುವುದೂ ಉಂಟು. ಕಾಶ್ಮೀರದಲ್ಲಿ ಭಯೋತ್ಪಾದನೆ, ಹಿಂಸಾಕೃತ್ಯಗಳು ಹೆಚ್ಚಿದಂತೆಲ್ಲ ಸೇನಾಕಾರ್ಯಾಚರಣೆಯೂ ಹೆಚ್ಚುತ್ತ ಹೋಗಿದೆ. ಇಂಥ ಸೈನಿಕ ಕಾರ್ಯಾಚರಣೆಗಳನ್ನು ಇನ್ನೂ ಹೆಚ್ಚಿಸಬೇಕು; ಕೇಂದ್ರ ಸರ್ಕಾರದ ವಶದಲ್ಲಿರುವ ಎಲ್ಲ ಬಗೆಯ ಸೇನಾಶಕ್ತಿಯನ್ನೂ ಬಳಸಬೇಕು ಎಂಬುದು ಒಂದು ಸಲಹೆ. ಆದರೆ, ವಾಸ್ತವವಾಗಿ, ಈಗಲೇ ಸೇನಾ ಕಾರ್ಯಾಚರಣೆಗಳಿಂದಾಗಿ ಆ ರಾಜ್ಯದಲ್ಲಿ ನಾಗರಿಕ ಆಡಳಿತವೆಂಬುದೇ ಇಲ್ಲದಂತಾಗಿದೆ. ಭಾರತೀಯ ಸೈನ್ಯವು ಆಕ್ರಮಣಕಾರಿಗಳೆಂದೇ ಅಲ್ಲಿನ ಜನರು ಭಾವಿಸುವುದರಲ್ಲಿ ಆಶ್ಚರ್ಯವಿಲ್ಲ. ಸೈನ್ಯವು ಕಾಶ್ಮೀರಿ ಯುವಕರನ್ನು ಸಂಶಯದ ಆಧಾರದ ಮೇಲೆ ಬಂಧಿಸುವುದು, ವಿವೇಚನಾರಹಿತವಾಗಿ ಹಲವೊಮ್ಮೆ ಮರಣಾಂತಿಕವಾಗಿ ಹಿಂಸಿಸುವುದು ನಡೆದೇ ಇದೆ. ಕಾಶ್ಮೀರ ವಿಶ್ವವಿದ್ಯಾನಿಲಯದ ಬಕ್ಷಿ ಅಹಮದ್ ದಾಬ್ಲ ಅವರು 'ಮಕ್ಕಳ ನಿಧಿಯನ್ನು ರಕ್ಷಿಸಿ' (save the children fund) ಎಂಬ ವಿಷಯದ ಮೇಲೆ ಸಿದ್ಧಪಡಿಸಿದ ಅಧ್ಯಯನವು, ಕಾಶ್ಮೀರದಲ್ಲಿ ೧೯೯೯ರವರೆಗೆ ೬೦,೦೦೦ ಜನ ಸತ್ತರು; ೨೦,೦೦೦ ಮಕ್ಕಳು ಅನಾಥರಾದರು; ೧೬,೦೦೦ ವಿಧವೆಯರಾದರೆಂದು ವಿವರಿಸುತ್ತದೆ. ಇದೇ ಅಧ್ಯಯನವು ನಿದರ್ಶನಗಳನ್ನು ಆಧರಿಸಿ ಶೇ. ೮೦ರಷ್ಟು ಸಾವುಗಳು ರಕ್ಷಣಾ ಪಡೆಗಳೊಡನೆ ಸಂಘರ್ಷದಲ್ಲಿ ಇಲ್ಲವೆ ಅನ್ಯಮತೀಯರ ಬಂಧನದಲ್ಲಿ ಸಂಭವಿಸಿದವೆಂದು ಪ್ರತಿಪಾದಿಸುತ್ತದೆ. ಶ್ರೀನಗರದಲ್ಲಿರುವ ಸರ್ಕಾರಿ ಮಾನಸಿಕ ಆಸ್ಪತ್ರೆಯು ೧೯೯೯ರಲ್ಲಿ ೩೧,೦೦೦ ರೋಗಿಗಳಿಗೆ ಚಿಕಿತ್ಸೆ ನೀಡಿತು. ಇದರಲ್ಲಿ ಶೇ. ೬೦-೭೦ರಷ್ಟು ಜನ ರಕ್ಷಣಾ ಪಡೆಗಳ ದುಷ್ಕೃತ್ಯಗಳಿಗೆ ಬಲಿಯಾದವರು. ಇಲ್ಲವೇ, ದುಷ್ಕೃತ್ಯಗಳನ್ನು ಕಣ್ಣಾರೆ ಕಂಡವರು. ಸೈನಿಕ ಪಡೆಗಳನ್ನು ಹೆಚ್ಚು ಹೆಚ್ಚಾಗಿ ನಿಯೋಜಿಸಿದಂತೆ ಸ್ಥಳೀಯ ಜನರ ಪರಕೀಯತೆಯೂ ಹೆಚ್ಚುತ್ತಲೇ ಹೋಗಿದೆ.

ಕಾಶ್ಮೀರವನ್ನು (ಅ) ಮುಸಲ್ಮಾನ್ ಪ್ರಭಾವವು ಹೆಚ್ಚಿರುವ ಕಣಿವೆ, (ಆ) ಹಿಂದು ಪ್ರಭಾವವು ಹೆಚ್ಚಿರುವ ಜಮ್ಮು, ಮತ್ತು (ಇ) ಬೌದ್ಧ ಮತ ಪ್ರಭಾವವು ಹೆಚ್ಚಿರುವ ಲಡಾಖ್ ಪ್ರದೇಶ- ಹೀಗೆ ಮೂರಾಗಿ ವಿಭಜಿಸಬೇಕೆಂಬ ಸಲಹೆ: ಸಂಘಪರಿವಾರದ ಮಾನಸಿಕ ಶಿಶುವಾದ ಈ ಪರಿಹಾರವು ಒಂದು ಭ್ರಮೆ. ಜಮ್ಮು-ಕಾಶ್ಮೀರದ ಒಂದೊಂದು ಭಾಗದಲ್ಲಿ ಒಂದೊಂದು ಮತಧರ್ಮವು ಹೆಚ್ಚು ಪ್ರಭಾವಶಾಲಿಯಾಗಿರುವುದು ನಿಜವಾದರೂ ಎಲ್ಲ ಪ್ರದೇಶಗಳಲ್ಲಿ ಅಂತರ್ಮಿಶ್ರಣಗಳು ಸಾಕಷ್ಟು ಪ್ರಮಾಣದಲ್ಲಿವೆ. ಹೀಗಾಗಿ ಯಾವುದೇ ಪ್ರದೇಶವು ಜನಾಂಗೀಯವಾಗಿ/ಮತ ಧಾರ್ಮಿಕವಾಗಿ ಏಕರೀತಿಯಾಗಿದೆಯೆಂದು ಹೇಳುವಂತಿಲ್ಲ.

ಕಾಶ್ಮೀರದ ವಿಚಾರದಲ್ಲಿ ಅಂತಾರಾಷ್ಟ್ರೀಯ ನಿಲುವು ಕೂಡ ಈಚಿನ ದಿನಗಳಲ್ಲಿ ನಾಟಕೀಯ ರೀತಿಯಲ್ಲಿ ಬದಲಾಗಿದೆ. ಚಾರಿತ್ರಿಕವಾಗಿ ಪಾಶ್ಚಾತ್ಯ ರಾಷ್ಟ್ರಗಳು, ಅದರಲ್ಲೂ ಅಮೆರಿಕ ಮತ್ತು ಇಂಗ್ಲೆಂಡ್‌ಗಳು, ಕಾಶ್ಮೀರ ಸಮಸ್ಯೆಯನ್ನು ಅಂತಾರಾಷ್ಟ್ರೀಯಗೊಳಿಸಲು ಯತ್ನಿಸಿದವು. ಆ ಪ್ರದೇಶದಲ್ಲಿ ಜನಾಭಿಪ್ರಾಯ ಸಂಗ್ರಹವಾಗಬೇಕೆಂಬ ಪಾಕಿಸ್ತಾನದ ನಿಲುವನ್ನು ಬೆಂಬಲಿಸಿದವು. ಹಾಗೆ ಮಾಡುವಾಗ ವಿಶ್ವಸಂಸ್ಥೆಯ ನಿರ್ಣಯದ ಒಂದು ಭಾಗವನ್ನು ಮಾತ್ರ ಅವು ನೆನಪಿಟ್ಟುಕೊಂಡಿದ್ದಿರಬೇಕು. ಏಕೆಂದರೆ, ಕಾಶ್ಮೀರದಲ್ಲಿ ಪಾಕಿಸ್ತಾನವು ಆಕ್ರಮಿಸಿಕೊಂಡಿರುವ ಭಾಗವನ್ನು ತೆರವು ಮಾಡದೆ ಜನಾಭಿಪ್ರಾಯ ಸಂಗ್ರಹವು ನಡೆಯುವಂತಿಲ್ಲ. ವಿಶ್ವಸಂಸ್ಥೆಯ ಮುಂದೆ ಕಾಶ್ಮೀರದ ವಿಚಾರ ಬಂದಾಗಲೆಲ್ಲ ಸೋವಿಯತ್ ಒಕ್ಕೂಟವು (ಯು.ಎಸ್.ಎಸ್.ಆರ್.) ಮಾತ್ರ ಭಾರತದ ಪರ ದೃಢವಾಗಿ ನಿಂತಿತು. ಭದ್ರತಾ ಮಂಡಳಿಯಲ್ಲಿ ಪಾಕಿಸ್ತಾನದ ಹುನ್ನಾರವನ್ನು ನಿರರ್ಥಕಗೊಳಿಸುವಂತೆ 'ವೀಟೋ' ಸಹ ಚಲಾಯಿಸಿತು.

ಸೋವಿಯತ್ ಒಕ್ಕೂಟದ ವಿಭಜನೆ, ಶೀತಲ ಸಮರದ ಆತಂಕವು ದೂರವಾದುದು, ಆರ್ಥಿಕ ಜಾಗತೀಕರಣಗಳ ಪರಿಣಾಮವಾಗಿ ಈಗ ಅಮೆರಿಕಾಕ್ಕೆ ಪಾಕಿಸ್ತಾನವು ಅಷ್ಟೊಂದು ಪ್ರಯೋಜನಕಾರಿಯಾಗಿದ್ದಂತೆ ತೋರುತ್ತಿಲ್ಲ. ಈಗ ಅದು ಭಾರತವನ್ನು ಹೆಚ್ಚು ಹೆಚ್ಚಾಗಿ 'ಅರ್ಥಮಾಡಿಕೊಳ್ಳುತ್ತಿದೆ.' ಭಾರತ ಪಾಕಿಸ್ತಾನಗಳ ಮಧ್ಯಸ್ತಿಕೆ ವಹಿಸುವ ಪ್ರಯತ್ನವನ್ನು ಕೂಡ ಮಾಡಿದೆ. ಅಮೆರಿಕದ ಮಾಜಿ ಅಧ್ಯಕ್ಷ ಕ್ಲಿಂಟನ್ 'ಕಾರ್ಗಿಲ್ ವಿಭಾಗದಿಂದ ಅಕ್ರಮ ಪ್ರವೇಶವನ್ನು ತಡೆಗಟ್ಟುವಂತೆ ತಾವು ಪಾಕಿಸ್ತಾನದ ಮೇಲೆ ಒತ್ತಡ ತಂದುದಾಗಿ' ಹೇಳಿದರೆಂದು ಈಚೆಗೆ ವರದಿಯಾಗಿತ್ತು. ಶಾಂತಿ ಸಂಧಾನದಲ್ಲಿ ಅಮೆರಿಕವನ್ನು ಬಳಸಿಕೊಳ್ಳುವ ಪ್ರತ್ಯಕ್ಷ ಪರೋಕ್ಷ ಪ್ರಯತ್ನಗಳು ನಡೆಯುತ್ತಲೇ ಇವೆ.

ಇತ್ತೀಚಿನ ಘಟನೆಗಳಿಗೆ ಬರೋಣ : ಆರು ತಿಂಗಳ ಕಾಲ ಏಕಪಕ್ಷೀಯವಾಗಿ 'ಸೈನಿಕ ಕಾರ್ಯಾಚರಣೆಯನ್ನು' ಸ್ಥಗಿತಗೊಳಿಸಲಾಯಿತು. ಆದರೆ 'ಕದನವಿರಾಮ'ದ ಅವಧಿಯನ್ನು ಯಥೋಚಿತವಾದ, ತೀವ್ರತರ ರಾಜಕೀಯ ಚಟುವಟಿಕೆಗಳೊಂದಿಗೆ ಮುಂದುವರಿಸಲಿಲ್ಲ. ಅಂತೂ ಕಡೆಗೆ ಮಾತುಕತೆಯ ಸಾಧ್ಯತೆ ಕಂಡುಬಂದಾಗ ''ಒಪ್ಪಂದ''ವನ್ನು ಹಿಂತೆಗೆದುಕೊಳ್ಳಲಾಯಿತು. ಪಾಕಿಸ್ತಾನದಲ್ಲಿ ಪ್ರಜಾಪ್ರಭುತ್ವ ವಿಧಾನದಿಂದ ಚುನಾಯಿತವಾದ ಸರ್ಕಾರದೊಡನೆ ಮಾತ್ರ ಮಾತುಕತೆ ನಡೆಸುವುದಾಗಿ ಹೇಳುತ್ತಿದ್ದ ಕೇಂದ್ರ ಸರ್ಕಾರವು ಇದ್ದಕ್ಕಿದ್ದಂತೆ ತನ್ನ ನಿಲುವನ್ನು ಬದಲಾಯಿಸಿತು. ಆಗಿನ್ನೂ ಪ್ರಧಾನ ಆಡಳಿತಾಧಿಕಾರಿಯಾಗಿದ್ದ (ಸಿಇಓ) ಜನರಲ್ ಪರ್ವೇಜ್ ಮುಶಾರಫರನ್ನು ಮಾತುಕತೆಗೆ ಆಹ್ವಾನಿಸಿತು. ಪಾಕಿಸ್ತಾನದೊಡನೆ ಸಂಬಂಧವನ್ನು ಉತ್ತಮಪಡಿಸಿಕೊಳ್ಳುವ ಶಾಂತಿ ಸಂಧಾನದ ಯಾವ ಪ್ರಯತ್ನವೂ ಸ್ವಾಗತಾರ್ಹವೇ. ಆದರೆ, ಜನರಲ್ ಪರ್ವೇಜ್ ಮುಶಾರಫರನ್ನು ಮಾತುಕತೆಗೆ ಆಹ್ವಾನಿಸಿದ ಕಾಲವು ಅಪಕ್ವವಾಗಿತ್ತೆನ್ನುವುದು ಅನೇಕರ ಅಭಿಪ್ರಾಯ. ಇಂಥ ಆಹ್ವಾನ ಮತ್ತು ವಿಫಲಗೊಂಡ ಮಾತುಕತೆಯ ದೀರ್ಘಾವಧಿಯ ಪರಿಣಾಮವೇನಾದೀತೆಂಬುದನ್ನು ಕಾದುನೋಡಬೇಕು. ಈ ನಡುವೆ ಕ್ಲಿಂಟನ್ ಹೇಳಿಕೆಯ ಹಿನ್ನೆಲೆಯಲ್ಲಿ ಭಾರತವು ಕಡೆಗೂ ಮೂರನೆ ಪಕ್ಷವೊಂದರ ಮಧ್ಯಸ್ತಿಕೆಗೆ ಒಪ್ಪಿಕೊಂಡಿತೇ (ನಿಜಾಂಶವನ್ನು ಎಷ್ಟೇ ಬಚ್ಚಿಟ್ಟರೂ) ಎಂಬ ಅನುಮಾನಕ್ಕೆ ಅವಕಾಶವಿದೆ.

*ಆಧಾರ: ವಿಕಾಸ ಅಧ್ಯಯನ ಕೇಂದ್ರವು ಪ್ರಕಟಿಸಿರುವ "FACTS against MYTHS" ಎಂಬ ಮಾಹಿತಿ ಪತ್ರಿಕೆಯಲ್ಲಿ ರಾಮ್ ಪುನಿಯಾನಿ ಬರೆದ ಎರಡು ಲೇಖನಗಳು (Vol. VI # 12 / 2000 ಮತ್ತು VII # 1 / 2001).*

**ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ**
ನಂ. ೨೨೭೩, ೨೨ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ, ಬೆಂಗಳೂರು- ೫೬೦ ೦೭೦

# ಬೆಳಕಿನತ್ತ ಹೆಜ್ಜೆ ಇಟ್ಟ

**ಈ** ಬಾರಿ ವಿಶ್ವವಿದ್ಯಾಲಯದ ಘಟಿಕೋತ್ಸವದ ಸಮಯದಲ್ಲಿ ಮೈಸೂರಿನಲ್ಲಿದ್ದೆ. ಓರ್ವ ಅಂಧ ಹುಡುಗಿ ನಾಲ್ಕು ಚಿನ್ನದ ಪದಕಗಳನ್ನು ತೆಗೆದುಕೊಂಡದ್ದು ತಿಳಿದು ಎಲ್ಲಿಲ್ಲದ ಖುಷಿಯಾಯಿತು. ಆಕೆಯನ್ನು ಕಾಣುವ, ಮಾತನಾಡಿಸುವ ತವಕ. ಆ ಹುಡುಗಿ 'ಸ್ತ್ರೀ ಸೇವಾನಿಕೇತನ' ಎಂಬ ಅನಾಥಾಲಯದಲ್ಲಿರುವುದು ತಿಳಿದು, ಕೋರ್ಟ್ ಮುಂಭಾಗದ ವಾಣಿವಿಲಾಸ್ ರಸ್ತೆಯಲ್ಲಿ ಹುಡುಕಿ ಹೊರಟೆ. ಸರಕಾರ ನಡೆಸುತ್ತಿರುವ ಸ್ಟೇಟ್ ಹೋಂ 'ಸೇವಾನಿಕೇತನ' ಕಂಡು ಒಳಹೊಕ್ಕೆ. ಒಂದಷ್ಟು ಯುವತಿಯರ ಮೆಲುದನಿಯ ಮಾತಿನ ನಡುವೆ ಮಧ್ಯಾಹ್ನದ ಊಟ ನಡೆದಿತ್ತು. ನನ್ನ ಅದೃಷ್ಟಕ್ಕೆ ಜಬೀನಾ ಅಲ್ಲಿರಲಿಲ್ಲ. ತನಗೆ ನಿನ್ನೆ ತಾನೇ ದೊರೆತ ಚಿನ್ನದ ಪದಕಗಳನ್ನು ತೋರಿಸಲು 'ಅಮ್ಮ'ನ ಮನೆಗೆ ಹೋಗಿದ್ದರು. ಇವರ ಗೌರವ ಪ್ರೀತಿಗೆ ಪಾತ್ರರಾದ 'ಅಮ್ಮ' ಸೇವಾನಿಕೇತನದ ಮೇಲ್ವಿಚಾರಕರಾದ ಸೋಮಲತಾ ಮೇಡಂ. ಸರಸ್ವತಿಪುರಂನಲ್ಲಿಯ ಅವರ ಮನೆಗೆ ಜಬೀನಾರನ್ನು ಹುಡುಕಿ ಹೋದೆ. ಮನೆಯಲ್ಲಿ ಸಂಭ್ರಮದ ವಾತಾವರಣ. 'ಮನೆ ಮಗಳು' ಚಿನ್ನದ ಪದಕ ತಂದ ಹೆಮ್ಮೆ. ಹಬ್ಬದ ಸಡಗರ. ಆದರೆ ಜಬೀನಾ ಅಲ್ಲಿರಲಿಲ್ಲ. ಅದಾಗಲೇ ಅಲ್ಲಿಂದ ಹೊರಟು, ತಮ್ಮ ವಿದ್ಯಾಭ್ಯಾಸಕ್ಕೆ ನೆರವಾದ ಗೆಳತಿಯರ ಮನೆಗೆ ಹೋಗಿದ್ದರು. ಬಿಡದ ಛಲದಲ್ಲಿ ಅಂತೂ ರಾತ್ರಿ ಎಂಟು ಗಂಟೆಗೆ ಜಬೀನಾರನ್ನು ಭೇಟಿ ಮಾಡಿ, ಮನೆಗೆ ಕರೆತಂದು ಮಾತನಾಡಿಸಿದಂತೆ, ಜಬೀನಾ ಕತ್ತಲ ಬದುಕಿನಲ್ಲಿ ಬೆಳಕು ಮೂಡಿದ ಸಂತಸದ ಕತೆ ಹಂಚಿಕೊಂಡರು. ಜಬೀನಾರನ್ನು ನೋಡಿ ನನ್ನ ವಯಸ್ಸಾದ ತಾಯಿ ಮಂಚದ ಮೇಲಿಂದ 'ಅಯ್ಯೋ ತಾಯಿ ಎಷ್ಟು ಓದಿದ್ದೀಯಲ್ಲಮ್ಮಾ, ಕಣ್ಣಿರೋ ಮಕ್ಕಳು ಒಂದು ಡಿಗ್ರಿ ಮಾಡಿಕೊಳ್ಳಲಿಲ್ಲ' ಎಂದು ಮೆಚ್ಚುಗೆಯ ನುಡಿ ಹೇಳುತ್ತಿದ್ದಂತೆ, ಸ್ವರ ಬಂದೆಡೆಗೆ ತಡವರಿಸದೆ ನೇರ ಸಾಗಿ 'ನಿಮ್ಮ ಆಶೀರ್ವಾದ ಬೇಕು' ಎಂದು ಬಾಗಿದಳು.



# ಜಬೀನಾ

ಜಬೀನಾ ಹುಟ್ಟಿದ್ದು ಮೈಸೂರಿನಲ್ಲಿಯೇ. ಆದರೆ ಸೇರಿದ್ದು ದಾವಣಗೆರೆ. ತಂದೆ ತಾಯಿಯ ಬಗ್ಗೆ ಹೇಳಲು ಕೊಂಚ ಹಿಂಜರಿದ ಜಬೀನಾ, ನಿಧಾನವಾಗಿ ತಾನು 'ತಾಯ್ತಂದೆ ತೊರೆಯಲ್ಪಟ್ಟ ಮಗು' ಎಂದು ತಿಳಿಸಿದರು. ಅಂಥ ಮಗುವನ್ನು ತೊರೆದ ಅಪ್ಪ ಅಮ್ಮ. ಪುಟ್ಟ ಮಗು ಪೊಲೀಸರ ಸಹಾಯದಿಂದ ಸರಕಾರಿ ಅಂಧರ ಶಾಲೆಗೆ ಸೇರಿತು. 'ಆಗಿನ್ನೂ ತನಗೆ ಮೂರೋ ನಾಲ್ಕೋ ವರ್ಷವಿರಬೇಕು. ವಯಸ್ಸು ಹೆಚ್ಚಿಸಿ ಅಂತೂ ಶಾಲೆಗೆ ಸೇರಿಸಿದರು' ಎನ್ನುತ್ತಾರೆ ಜಬೀನಾ.

ಶಿವಾಜಿ ಟಾಕೀಸಿನ ಬಳಿಯ ಈ ಅನಾಥ ಅಂಧಮಕ್ಕಳ ಪಾಠಶಾಲೆಯಲ್ಲಿ ವಿದ್ಯಾಭ್ಯಾಸ, 'ಸರಕಾರಿ ಸುಧಾರಣಾ ಸಂಸ್ಥೆ'ಯಲ್ಲಿ ವಾಸ. ಇಲ್ಲಿ ಬ್ರೈಲ್ ಹೇಳಿಕೊಟ್ಟರು. ಬ್ರೈಲ್‌ನಲ್ಲಿ ಬರೆಯುವುದು, ಓದುವುದು ಎಲ್ಲ ಚುರುಕಾಗಿ ಕಲಿತ ಹುಡುಗಿ, ಎಸ್. ಎಸ್. ಎಲ್. ಸಿ.ಯಲ್ಲಿ ಮೊದಲ ದರ್ಜೆಯಲ್ಲಿ ಪಾಸಾದಳು. ಓದಿನ ಜೊತೆಗೆ ಸಂಗೀತದಲ್ಲಿ ಜ್ಯೂನಿಯರ್, ಸೀನಿಯರ್ ಕೂಡಾ ಮಾಡಿಕೊಂಡಳು. ಹತ್ತನೇ ತರಗತಿಗೆ ಓದು ನಿಲ್ಲಿಸುವ ಇಚ್ಛೆ ಇರಲಿಲ್ಲ. 'ತುಂಬಾ ಓದಬೇಕು, ಡಿಗ್ರಿ ಪಡೆಯಬೇಕು' ಎಂಬ ಜಬೀನಾಳ ಆಸೆಯನ್ನು ಹೇಗೆ ಪೂರೈಸಬೇಕೆಂದು ದಾವಣಗೆರೆಯ ಆ 'ಸುಧಾರಣಾ ಸಂಸ್ಥೆ'ಗೆ ತಿಳಿದಿರಲಿಲ್ಲ. ಮೈಸೂರಿನ 'ಸ್ಟೇಟ್ ಹೋಂ'ಗೆ ಕಳುಹಿಸಿದರೆ ಓದು ಮುಂದುವರೆಯಬಲ್ಲದು ಎಂದು ಈಕೆಯನ್ನು ಮೈಸೂರಿನ ಸ್ತ್ರೀ ಸೇವಾನಿಕೇತನ ಅನಾಥಾಲಯಕ್ಕೆ ಕಳುಹಿಸಿದರು. ಅನೇಕ ರಾಜ್ಯಗಳಲ್ಲಿ ಸರಕಾರಿ 'ಸ್ಟೇಟ್ ಹೋಂ'ಗಳ ಅಧ್ವಾನದ ಅವಸ್ಥೆಯ ಬಗ್ಗೆ ಕೇಳಿದ ನನಗೆ, ಮೈಸೂರಿನ ಈ 'ಸ್ಟೇಟ್ ಹೋಂ' ಜಬೀನಾಳಂತಹ ಅಂಧ ಹುಡುಗಿಗೆ ಎಂತಹ ಪ್ರೋತ್ಸಾಹ ನೀಡಿ, ಜೀವನೋತ್ಸಾಹ ತುಂಬಿದೆ ಎಂದು ತಿಳಿದು ಸಂತಸವಾಯಿತು.

ಸೇವಾನಿಕೇತನ ಜಬೀನಾರನ್ನು ಮಹಾರಾಣಿ ಕಾಲೇಜಿಗೆ ಪಿ.ಯು.ಸಿ.ಗೆ ಸೇರಿಸಿತು. ಕಲಿಕೆ ಸುಲಭವಿರಲಿಲ್ಲ. ಇಲ್ಲಿಯವರೆಗೂ ಕಲಿತದ್ದು ಅಂಧರ ಶಾಲೆಯಲ್ಲಿ, ಬ್ರೈಲ್ ಪುಸ್ತಕಗಳಿಂದ ಓದಿ ಬರೆದದ್ದು. ಈಗ ಜಬೀನಾ ಸಾಧಾರಣ ಪುಸ್ತಕಗಳ ಮೂಲಕ, ಸಾಮಾನ್ಯ ವಿದ್ಯಾರ್ಥಿಗಳೊಡನೆ ಹೋಗಿ ಓದಬೇಕಿತ್ತು. ಸದಾ ಗೆಳತಿಯರನ್ನು, ಪರಿಚಿತರನ್ನು ಪಠ್ಯ ಪುಸ್ತಕ ಓದಲು ಕೇಳಿಕೊಳ್ಳುತ್ತಿದ್ದರು. ಅವರು ಓದಿದಂತೆ, ಬ್ರೈಲ್ ಮೊಳೆಯಿಂದ ಬ್ರೈಲ್ ಲಿಪಿಯಲ್ಲಿ ನೋಟ್ಸ್ ಮಾಡಿಕೊಳ್ಳುತ್ತಿದ್ದರು. ಬ್ರೈಲ್ ಮೊಳೆಯಿಂದ ದಪ್ಪ ಹಾಳೆಯ ಮೇಲೆ ಚುಚ್ಚು ಚುಚ್ಚಿ, ಒಂದೊಂದು ಅಕ್ಷರವನ್ನೂ ಬ್ರೈಲ್ ಲಿಪಿಯಲ್ಲಿ ಮೂಡಿಸುವುದು ಸಾಕಷ್ಟು ಶ್ರಮದ ಕೆಲಸ. ಬ್ರೈಲ್ ಮೊಳೆ ಒತ್ತಿ ಒತ್ತಿ ಒಂದಿಷ್ಟು ಸೊಟ್ಟಗಾದ ಬೆರಳುಗಳನ್ನು, ಗಟ್ಟಿಯಾದ ಚರ್ಮವನ್ನು, ಜಬೀನಾ ತೋರಿಸಿದರು. ಎಷ್ಟೋ ಹುಡುಗಿಯರು ಜಬೀನಾ ಬಂದರೆ 'ಪುಸ್ತಕ ಓದಲು ಹೇಳುತ್ತಾಳೆ' ಎಂದು ಕೈಗೆ ಸಿಗದಂತೆ ಓಡುತ್ತಿದ್ದುದೂ ಉಂಟು. ಆದರೆ ಈಕೆಯ ಅಗಾಧ ಪರಿಶ್ರಮ, ಓದುವ ಹೆಬ್ಬಯಕೆಯನ್ನು ಮೆಚ್ಚಿ ಸಹಾಯ ಮಾಡಿದ ಗೆಳತಿಯರು ಅನೇಕ. ಮಿತ್ರಜ್ಯೋತಿ ಸಂಸ್ಥೆ, ಅಂಗವಿಕಲರ ಕಲ್ಯಾಣ ಸಂಸ್ಥೆ ಜಬೀನಾರಿಗೆ ಒಂದು ಟೇಪ್ ರೆಕಾರ್ಡರ್ ಮತ್ತು ಕ್ಯಾಸೆಟ್ ಒದಗಿಸಿಕೊಟ್ಟು ಸಹಾಯ ಮಾಡಿತು. ಆದರೆ ಪರೀಕ್ಷೆಯಲ್ಲಿ ಜಬೀನಾಗೆ ಸಾಕಷ್ಟು ತೊಂದರೆಗಳು ಕಾದಿರುತ್ತಿತ್ತು. ಪ್ರಶ್ನೆ ಓದಿ, ಉತ್ತರಗಳನ್ನು ಬರೆಯಲು ಕೊಡುತ್ತಿದ್ದ 'ಸಹಾಯಕ', 'ಬೇಗ ಹೇಳಿ, ಬೇಗ ಹೇಳಿ' ಎಂದು ಅಸಹನೆಯಿಂದ ಅವಸರಿಸುತ್ತಾ, ಯೋಚಿಸಲೂ ಸಮಯ ಕೊಡದಿದ್ದ ಸಂದರ್ಭಗಳಿದ್ದವು.

ಪಿ.ಯು.ಸಿ. ಮುಗಿಸಿದ ಜಬೀನಾ ಬಿ.ಎಫ್.ಎ. ಡಿಗ್ರಿ ಪಡೆಯಲು, ಲಲಿತ ಕಲಾ ಕಾಲೇಜನ್ನು ಸೇರಿದರು. ಆಗ ಸೇವಾನಿಕೇತನ ಇದ್ದದ್ದು ಸಿದ್ಧಾರ್ಥ ಬಡಾವಣೆಯಲ್ಲಿ. ನಗರದ ಆ ಮೂಲೆಯಿಂದ ಗಂಗೋತ್ರಿಯ ಈ ಮೂಲೆಗೆ ದಿನವೂ ಬಸ್ ಹಿಡಿದು ಓಡಾಡಿದರು. ಒಂದೆರಡು ಬಾರಿ ರಸ್ತೆ ಗುರುತಾದರೆ ಸಾಕು. ಯಾರ ಮೇಲೂ ಅವಲಂಬಿತರಾಗದೆ ಒಬ್ಬರೇ ಹೋಗಿಬರುವ ಧೈರ್ಯ ಮತ್ತು ಜಾಣ್ಮೆ ಎರಡೂ ಜಬೀನಾಗಿದೆ. ಬಿ.ಎಫ್.ಎ. ಡಿಗ್ರಿಗೆ ಇಂಗ್ಲಿಷ್, ಕನ್ನಡ, ಸೌಂದರ್ಯಶಾಸ್ತ್ರ, ಗಮಕ, ಸಂಗೀತ ಮುಂತಾದ ವಿಷಯಗಳನ್ನು ಅಧ್ಯಯನ ಮಾಡಬೇಕಿತ್ತು. ಡಿಗ್ರಿಯ ಜೊತೆಗೆ, ಅದೇ ಕಾಲೇಜಿನಲ್ಲಿ ಸಂಗೀತದ ಡಿಪ್ಲೋಮಾ ಕೂಡಾ ಕಟ್ಟಿದರು. ಇಲ್ಲಿಯ ಪ್ರಾಧ್ಯಾಪಕರ ಅವಿರತ ಪ್ರೋತ್ಸಾಹ, ನೆರವು, ಜಬೀನಾಗೆ ಪಾಠಗಳನ್ನು ಅರ್ಥಮಾಡಿಕೊಳ್ಳಲು, ಅಭ್ಯಾಸ ಮಾಡಲು, ಪರೀಕ್ಷೆಗೆ ಸಿದ್ಧವಾಗಲು ಸಹಾಯಕವಾಯಿತು. ಈ ಎಲ್ಲ ವಿದ್ಯಾಭ್ಯಾಸದ ಜೊತೆಯಲ್ಲಿಯೇ ತನ್ನ ಸಂಗೀತದ ಆಸಕ್ತಿಯನ್ನು ಮುಂದುವರಿಸಿದರು. ಸ್ಪರ್ಧೆಗಳಲ್ಲಿ ಭಾಗವಹಿಸಿ ಬಹುಮಾನಗಳನ್ನು ಪಡೆದರು. ಜಬೀನಾಗೆ ಕರ್ನಾಟಕ ಶಾಸ್ತ್ರೀಯ ಸಂಗೀತದಲ್ಲಿ ತುಂಬಾ ಆಸಕ್ತಿಯಿದೆ. ದಸರಾ ಸಮಯದಲ್ಲಿ ಮೈಸೂರು ಅರಮನೆಯಲ್ಲಿ ಜಬೀನಾ 'ಕಛೇರಿ' ಕೂಡ ಮಾಡಿದರು. ಜಬೀನಾರ ಪರಿಶ್ರಮ ಫಲ ಕೊಟ್ಟಿತು. ನಾಲ್ಕು ಚಿನ್ನದ ಪದಕ, ಎರಡು ನಗದು ಬಹುಮಾನವನ್ನು ಪಡೆಯಲು ವೇದಿಕೆಯ ಮೇಲೆ ಜಬೀನಾ ಹೋಗುತ್ತಿದ್ದಂತೆ, ಕಿಕ್ಕಿರಿದ 'ಕ್ರಾಫರ್ಡ್ ಹಾಲ್'ನಲ್ಲಿ ಚಪ್ಪಾಳೆಯ ಸುರಿಮಳೆ. ಜಬೀನಾ ತನ್ನ ಸ್ಥಾನಕ್ಕೆ ಹಿಂತಿರುಗಿ ಬಂದು ಕೂರುವ ತನಕವೂ ಚಪ್ಪಾಳೆ ಮುಂದುವರೆದಿತ್ತು.

ಇದೀಗ ಜಬೀನಾ ಬಂಬೂ ಬಜಾರ್‌ನ ಅಂಧರ ಶಾಲೆಯಲ್ಲಿ 'ಟೀಚರ್ಸ್ ಟ್ರೈನಿಂಗ್' ಮಾಡುತ್ತಿದ್ದಾರೆ. ಇಲ್ಲಿಯ ಪ್ರಾಧ್ಯಾಪಕರ ನೆರವು ಈಕೆಯಲ್ಲಿ ಉತ್ಸಾಹ ತುಂಬಿದೆ. ದಿನವೂ ಬಂಬೂ ಬಜಾರ್‌ಗೆ ಬಸ್ಸು ಹಿಡಿದು ಹೋಗಿ ಬರುತ್ತಾರೆ. ತನಗೆ ವಿದ್ಯಾಭ್ಯಾಸ ಮುಗಿದೊಡನೆ ಒಂದು ಕೆಲಸ ಸಿಕ್ಕರೆ, ತನ್ನ ಕಾಲ ಮೇಲೆ ತಾನು ನಿಲ್ಲಬಲ್ಲೆ ಎಂದು ತವಕದಿಂದ ಜಬೀನಾ ಕಾದಿದ್ದಾರೆ. ವಿವಾಹದ ಬಗ್ಗೆ ಕೇಳಿದರೆ, 'ತಮ್ಮ ಹಿನ್ನೆಲೆ ಮತ್ತು ಅಂಧತ್ವ ತಿಳಿದೂ, ಸುಖ ದುಃಖವನ್ನು ಹಂಚಿಕೊಳ್ಳಬಲ್ಲ ಬಾಳಸಂಗಾತಿ ಸಿಕ್ಕರೆ ವಿವಾಹ' ಎನ್ನುತ್ತಾರೆ.

ರಾತ್ರಿ ಸಾಕಷ್ಟು ತಡವಾಗಿತ್ತು. ಜಬೀನಾರನ್ನು ಆಟೋದಲ್ಲಿ ಸೇವಾನಿಕೇತನಕ್ಕೆ ಕರೆದೊಯ್ದೆ. ಆಕೆಯ ಸಂಗಾತಿಯರು ಹೊರಬಂದು ಸಂಭ್ರಮದಿಂದ ಜಬೀನಾರನ್ನು ಒಳಗೆ ಕರೆದೊಯ್ದರು.

'ಕಾಲ ಕೆಟ್ಟುಹೋಯಿತು' ನಾವು ಪದೇ ಪದೇ ಕೇಳುವ ಮಾತು. ಆದರೆ ಕೆಟ್ಟದ್ದನ್ನೇ ಕೇಂದ್ರೀಕರಿಸಿ, ಕೆಲವೊಮ್ಮೆ ನಮ್ಮ ಸುತ್ತಲೂ ನಡೆಯುತ್ತಿರುವ ಒಳ್ಳೆಯದಕ್ಕೆ ನಾವು ಕುರುಡಾಗಿರುವುದುಂಟು. ಜಬೀನಾರ ಈ ಸಾಧನೆಗೆ ಆಕೆಯ ಆತ್ಮಬಲ, ಉನ್ನತ ವ್ಯಾಸಂಗದ ಕನಸು, ಅಡೆತಡೆಗಳ ಜಿಗಿದು ದಾಟುವ ಹುಮ್ಮಸ್ಸಿನಂತೆಯೇ, ಅನೇಕಾನೇಕ ಜನರ ಕಳಕಳಿ, ಫಲಾಪೇಕ್ಷೆಯಿಲ್ಲದ ನೆರವು, ಪ್ರೋತ್ಸಾಹ ಕಾರಣವಿದೆ. ಇವು ಸರಕಾರಿ ಸಂಸ್ಥೆಗಳು, ಕಾಲೇಜುಗಳು ಎಂದು ತಿಳಿದಾಗ ಮತ್ತಷ್ಟು ಹಿಗ್ಗಾಗುತ್ತದೆ. ಜಬೀನಾರ ಭವಿಷ್ಯದ ಕನಸುಗಳೆಲ್ಲ ನನಸಾಗಲಿ ಎಂದು ಹಾರೈಸುತ್ತಾ ಮನೆಗೆ ಹೊರಟೆ.

ನೇಮಿಚಂದ್ರ
ನಂ. ೪೦೧, 'ವಿಜಯ ಟವರ್ಸ್', ಆರ್. ಪಿ. ಸಿ. ಲೇ ಔಟ್, ವಿಜಯನಗರ ೨ನೇ ಹಂತ, ಬೆಂಗಳೂರು - ೪೦

## ತಿಳಿವು

# ಪ್ರೇಮ - ಕಾಮ

ಪ್ರೇಮ - ಕಾಮಗಳು ಅಂತರ್‌ಸಂಬಂಧಿ ಪರಿಕಲ್ಪನೆಗಳಾದರೂ ಪರಸ್ಪರ ಭಿನ್ನ ಸ್ವರೂಪದವುಗಳೂ ಆಗಿವೆ. ಪ್ರೇಮ ನಿಷ್ಕಲ್ಮಶ ಮಾತ್ರವಲ್ಲ, ಪವಿತ್ರವಾದುದೂ ಕೂಡ. ಅಂತೆಯೇ ಪ್ರೇಮ ಅನುಕರಣೀಯ, ಅಷ್ಟೇಕೆ ಮಾದರಿ ಆದರ್ಶವೂ ಹೌದು. ಆದರೆ ಕಾಮ ಹಾಗಲ್ಲ. ಇದು ಮೃಗೀಯ ಸ್ವರೂಪವುಳ್ಳದ್ದು. ಅಂತೆಯೇ ಕಾಮ ಶ್ರೇಷ್ಠ ಮೌಲ್ಯವಾಗಿ ಚರಿತ್ರೆಯುದ್ದಕ್ಕೂ ಪ್ರತಿಪಾದಿತವಾಗಿಲ್ಲ.

ಮನುಷ್ಯ ಪ್ರೇಮಿ, ಪ್ರಾಣಿ ಕಾಮಿ. ಒಂದು ಪಕ್ಷ ಮಾನವನೂ ಕಾಮಿಯಾದರೆ, ಅವನು ಪ್ರಾಣಿಯೇ ಸೈ! ವ್ಯಕ್ತಿಗೆ ಆನಂದ ಮಾತ್ರವೇ ಮುಖ್ಯವಾಗುವುದಿಲ್ಲ. ಆನಂದ ಪಡೆಯಲು ಆಯ್ದುಕೊಂಡ ವಿಧಾನವೂ ಅಷ್ಟೇ ಪ್ರಧಾನ ಅಂಶವಾಗುತ್ತದೆ. ಹೆಂಡ ಕುಡಿಯುವುದರಿಂದಲೂ ಖುಷಿ ಸಿಗುತ್ತದೆಯೇನೋ ನಿಜ; ಆದರೆ ಅದರ ಸ್ವರೂಪ ಶ್ರೇಷ್ಠವಾದುದಲ್ಲ. ಅದು ಖುಷಿಯೂ ಅಲ್ಲ, ಆನಂದವಂತೂ ಅಲ್ಲವೇ ಅಲ್ಲ; ಅದೊಂದು ಬಗೆಯ ಉನ್ಮಾದ. ಉನ್ಮಾದ ಯಾವತ್ತೂ ಆನಂದವಾಗಲಾರದು. ಕಾಮವೂ ಹಾಗೆಯೇ. ಕಾಮವೆನ್ನುವುದು ಕೂಡ ಕುಡಿತದ ಸುಖವಿದ್ದಂತೆ. ಕುಡಿತದಿಂದ ಸಿಗುವ ಸುಖಕ್ಕಿಂತ, ನಂತರ ಆಗುವ ಪರಿಣಾಮವೇ ಭೀಷಣವಾದುದು. ಹಾಗೆಯೇ ಕಾಮ ಕೂಡ.

ಪ್ರೇಮ ಶ್ರೇಷ್ಠ. ಪ್ರತಿಯೋರ್ವನೂ 'ಪ್ರೇಮ'ದಲ್ಲಿ ಸುಖಿಸುತ್ತಾನೆ, ಆನಂದಿಸುತ್ತಾನೆ. ಪ್ರೇಮ ಮಾನವರಿಗಷ್ಟೇ ಸೀಮಿತವಾದುದು. ಆದರೆ ಕಾಮ ಹಾಗಲ್ಲ, ಸಕಲ ಪ್ರಾಣಿಗಳಲ್ಲಿಯೂ ಜೀವಂತವಾಗಿರುತ್ತದೆ. ಪ್ರೇಮ-ಕಾಮಗಳು ಪರಸ್ಪರ ಭಿನ್ನ ಮಾತ್ರವಲ್ಲ, ಇವುಗಳೇ ಮನುಷ್ಯನನ್ನು ಪ್ರಾಣಿಗಳಿಂದ ಬೇರ್ಪಡಿಸಿವೆ. ಎಂತಲೇ ಪ್ರೇಮ ಮನುಕುಲದ ಮೌಲ್ಯ; ಮಾನವತೆಯ ಪ್ರತೀಕ.

ಪ್ರೇಮದಲ್ಲಿ ತಾಯ್ತನ-ತಂದೆತನ, ಪ್ರೀತಿ-ವಾತ್ಸಲ್ಯ, ಜವಾಬ್ದಾರಿ, ಇತ್ಯಾದಿ ಅಡಗಿರುತ್ತದೆ. ಆದರೆ ಕಾಮದಲ್ಲಿ ಇವೆಲ್ಲವೂ ಶೂನ್ಯ. ಇದರಲ್ಲಿ ಕೇವಲ ವಾಂಛೆ, ದೈಹಿಕ ತೃಷೆ ಇತ್ಯಾದಿ ಮಾತ್ರ ಸ್ಫೋಟಕ ಸ್ಥಿತಿಯಲ್ಲಿರುತ್ತವೆ. ಕಾಮಿ ವಿಘ್ನಸಂತೋಷಿ; ಸಂತೋಷದ ಸ್ವರೂಪವೂ ಇಲ್ಲಿ ಹಲವು ವೇಳೆ ಕ್ರೂರವಾಗಿರುತ್ತದೆ, ಹೇಸಿಗೆ ತರಿಸುವಷ್ಟು ಹೀನಾಯವಾಗಿರುತ್ತದೆ. ಅಂತೆಯೇ ಕಾಮ ಅಸಹ್ಯವಾದುದು, ಜುಗುಪ್ಸಾ ಸ್ವರೂಪಿಯಾದುದು.

ಕಾಮ ಏಕಮುಖಿಯಾಗಿರುತ್ತದೆ. ಹೀಗಾಗಿ ಸೌಂದರ್ಯ ಹೆಪ್ಪುಗಟ್ಟಿದ ಜಾಗಕ್ಕೆ ಕಾಮ ಎರಗುತ್ತದೆ. ತಾನು ಅಪೇಕ್ಷಿಸಿದ ವ್ಯಕ್ತಿ ಇಷ್ಟವೋ, ಇಷ್ಟವಿಲ್ಲವೋ ಎನ್ನುವುದು ಇಲ್ಲಿ ಗೌಣವಾಗುತ್ತದೆ. ಬಲಾಢ್ಯ ವಾಂಛೆಯೇ ಇಲ್ಲಿ ಪ್ರಧಾನಪಾತ್ರ ವಹಿಸುತ್ತದೆ. ಹೆಂಡತಿಯನ್ನೂ ಕಾಮಿಸುವವರಿದ್ದಾರೆ. ಕೆಲವು ಪುರುಷರು ಅನೇಕ ವೇಳೆ ಪತ್ನಿಯ ಆಸಕ್ತಿ-ಅಭಿರುಚಿಗೆ ವಿರುದ್ಧವಾಗಿ ರತಿಕ್ರೀಡೆಯಲ್ಲಿ ತೊಡಗುತ್ತಾರೆ. ಇದು 'ರೇಪ್' ಅಲ್ಲದೆ ಮತ್ತೇನು ?

ಪ್ರೇಮ ಶ್ರೇಷ್ಠ ಮೌಲ್ಯ. ಏಕೆಂದರೆ, ಪ್ರೇಮದಲ್ಲಿ ಪರಸ್ಪರ ಸಹಮತವಿರುತ್ತದೆ ಮತ್ತು ಆಸಕ್ತಿ-ಅಭಿರುಚಿಗಳೂ ಒಂದೇ ಆಗಿರುತ್ತವೆ. ಇಲ್ಲಿ ಈರ್ವರೂ ಸಮಾನಮನಸ್ಕರಾಗಿರುತ್ತಾರೆ. ಹೀಗಾಗಿ ಪ್ರೇಮ, ಸ್ವಾತಂತ್ರ್ಯ-ಸಮಾನತೆ-ಭ್ರಾತೃತ್ವಗಳ ಪ್ರತೀಕ. ಅಂತೆಯೇ ಪ್ರೇಮ ಪ್ರಜಾಸತ್ತೆಯ ಮೌಲ್ಯ.

ಬಿ. ಶರಣಪ್ಪ ಸತ್ಯಂಪೇಟೆ
ಅಂಚೆ: ಲಕ್ಷ್ಮೀಪುರ, ತಾಲ್ಲೂಕು: ಸುರಪುರ
ಜಿಲ್ಲೆ: ಗುಲಬರ್ಗಾ

# ಪಾಠ ಕಲಿಸಿ

ವಿಶ್ವಶಾಂತಿ ಮತ್ತು ಭಾರತದಲ್ಲಿ ನಡೆಯಲಿರುವ ಅಂತಃಕಲಹಕ್ಕೆ ಪರಿಹಾರವಾಗಿ ಅಶ್ವಮೇಧ ಯಜ್ಞವನ್ನು ನಡೆಸಲು ಉದ್ದೇಶಿಸಲಾಗಿದೆಯೆಂದು ಬಾಲಗೋಪಾಲ ಜೋಯಿಸ್ ಅವರು ಹೇಳಿದ್ದಾರೆ. ಏಪ್ರಿಲ್ ೩ರಿಂದ ೧೦೮ ದಿನಗಳವರೆಗೆ ಅಲಹಾಬಾದ್‌ನಲ್ಲಿ ೭ ಕೋಟಿ ರೂಪಾಯಿ ವೆಚ್ಚದಲ್ಲಿ ೭೦೦೦ ಪುರೋಹಿತರು ಇದನ್ನು ಮಾಡಲಿದ್ದು ಸಾರ್ವಜನಿಕ ಹಾಗೂ ಸರಕಾರಿ ಧನಸಹಾಯವನ್ನು ಅವರು ಕೇಳಿದ್ದಾರೆ.

ನಾವೇನು ೨೧ನೇ ಶತಮಾನದ ವಿಜ್ಞಾನದ ಯುಗದಲ್ಲಿದ್ದೇವೆಯೋ ಇಲ್ಲಾ ಕಂದಾಚಾರಗಳ ಅಂಧಕಾರ ಕಾಲದಲ್ಲಿದ್ದೇವೆಯೋ ? ಕೆಲಸವಿಲ್ಲದ ಈ ಪುರೋಹಿತರು ೭ ಕೋಟಿ ರೂಪಾಯಿ ಮೌಲ್ಯದ ಹಾಲು, ಜೇನು, ಏಲಕ್ಕಿ, ಲವಂಗ, ತುಪ್ಪ, ಬೆಲ್ಲ, ಕೊಬ್ಬರಿ, ಬೆಲೆ ಬಾಳುವ ಇತರ ದಿನಸಿ ಪದಾರ್ಥಗಳು, ದವಸ ಧಾನ್ಯಗಳು ಮುಂತಾದವುಗಳನ್ನು ಈ ಯಜ್ಞದಲ್ಲಿ ಸುಟ್ಟು ಹೋಮ ಮಾಡಲಿದ್ದಾರೆ. ಈ ದುರ್ದೈವಿ ದೇಶದಲ್ಲಿ ಕೋಟ್ಯಂತರ ಬಡ ಜನ ಹಸಿವೆಯಿಂದ ಬಳಲುತ್ತಿದ್ದಾರೆ. ಎಷ್ಟೋ ಜನ ಹಸಿವೆಯಿಂದಲೇ ಪ್ರಾಣ ಬಿಡುತ್ತಿರುವ ವಿದ್ಯಮಾನಗಳಿವೆ. ಆದರೆ ಈ ಪುರೋಹಿತರಿಗೆ ಬಡ ಜನತೆಯ ಹಸಿದ ಹೊಟ್ಟೆಗಳ ಬಗ್ಗೆ ಕರುಣೆಯಿಲ್ಲ. ಯಾವುದೋ ಮಾರ್ಗಗಳಿಂದ ತಾವು ತಿಂದು ತೇಗುತ್ತಾರೆ. ಉಳಿದ ಅಮೂಲ್ಯ ಆಹಾರ ವಸ್ತುಗಳನ್ನು ಹೀಗೆ ಹೋಮ ಮಾಡಿ ಸುಡುತ್ತಾರೆ. ಇತರರಿಗೆ ಉಪವಾಸವೇ ಗತಿ. ಇದೆಂಥ ವಿಶ್ವಶಾಂತಿ ? ೭ ಕೋಟಿ ರೂ. ಮೌಲ್ಯದ ಆಹಾರ ವಸ್ತುಗಳನ್ನು ಸುಡಲು ಇವರಿಗೆ ಸಾರ್ವಜನಿಕರು ಮತ್ತು ಸರಕಾರ ಬೇರೆ ಧನಸಹಾಯ ಮಾಡಬೇಕಂತೆ ! ವಿವಿಧ ಸಮಸ್ಯೆಗಳಿಂದ ಜನ ಮತ್ತು ದೇಶ ಬಳಲುತ್ತಿರುವಾಗ ಇವರ ಈ ಕೃತ್ಯವೇ ದೊಡ್ಡ ಆರ್ಥಿಕ ಅಪರಾಧ. ದೇಶದ್ರೋಹಿ ಕೆಲಸವೂ ಹೌದು. ಇವರನ್ನು ದಸ್ತಗಿರಿ ಮಾಡಬೇಕು. ಇವರೇ ಸಮಾಜ ಕಂಟಕರು.

ವೈಜ್ಞಾನಿಕ ಮನೋಧರ್ಮವನ್ನು ಕಾಪಾಡುವುದು ಮತ್ತು ಪ್ರೋತ್ಸಾಹಿಸುವುದು ನಮ್ಮ ಸಂವಿಧಾನದ ನಿರ್ದೇಶಕ ತತ್ವವಾಗಿದೆ. ಸಮಾಜಬಾಹಿರ ಶಕ್ತಿಗಳು ದೇವರು, ಧರ್ಮಗಳ ಹೆಸರಲ್ಲಿ ಜನರನ್ನು ಸುಲಿಯುವುದು, ಹಾದಿ ತಪ್ಪಿಸುವುದು, ಮೂಢ ನಂಬಿಕೆಗಳನ್ನು ಬಿತ್ತುವುದು ಇನ್ನೂ ನಿಂತಿಲ್ಲ. ೨೧ನೇ ಶತಮಾನದಲ್ಲಿ ಸಹ ಇದು ಮುಂದುವರಿಯುತ್ತಿದೆ. ವೈಜ್ಞಾನಿಕ ಮನೋಧರ್ಮವನ್ನು ಒಪ್ಪಿಕೊಂಡು ಕಂದಾಚಾರಗಳನ್ನು ಬದಿಗೊತ್ತಿರುವ ಪಾಶ್ಚಾತ್ಯ ದೇಶಗಳು ನಮಗಿಂತ ಸುಖದಿಂದಿವೆ. ಕೋಟ್ಯಂತರ ರೂಪಾಯಿಯ ಅಮೂಲ್ಯ ಆಹಾರ ಪದಾರ್ಥಗಳನ್ನು ಸುಟ್ಟು ಹೋಮ ಮಾಡುವ ಮೂಲಕ ಅವರು ಅದನ್ನು ಸಾಧಿಸಿದರೆ ? ಇಂಥ ಕಂದಾಚಾರಗಳನ್ನು ಬಿತ್ತಿ ತಮ್ಮ ಹೊಟ್ಟೆ ತುಂಬಿಸಿಕೊಂಡು, ಹೋಮದಂಥ ಕರಾಳ ಕೃತ್ಯಗಳನ್ನು ಎಸಗುವ ಇಂಥ ಪುರೋಹಿತಶಾಹಿಗಳಿಗೆ ಜನ ಮುಟ್ಟಿ ಮುಟ್ಟಿ ನೋಡಿಕೊಳ್ಳುವಂತೆ ಪಾಠ ಕಲಿಸಬೇಕು. ಇಲ್ಲದಿದ್ದರೆ ಇವರು ಎಲ್ಲರನ್ನೂ ದಿಕ್ಕು ತಪ್ಪಿಸಿ ದೇಶವನ್ನು ಕತ್ತಲೆಯ ಮೃಗೀಯ ಕಾಲಕ್ಕೊಯ್ಯುತ್ತಾರೆ. ಇಂಥ ಕಂದಾಚಾರಗಳಿಂದಲೇ ಈ ದೇಶ ಹೀಗಾಗಿರುವುದು. ಕೇರಳದಲ್ಲಿ ಕೆಲವು ವರ್ಷಗಳ ಹಿಂದೆ ಮಕ್ಕಳಾಗದಿರುವವರಿಗೆ ಪುತ್ರಕಾಮೇಷ್ಟಿ ಯಜ್ಞವನ್ನು ದೊಡ್ಡ ಪ್ರಮಾಣದಲ್ಲಿ ನಡೆಸಲಾಯಿತು. ಅದರಲ್ಲಿ ಭಾಗವಹಿಸಿದ ಸ್ತ್ರೀಯರಲ್ಲಿ ಎಷ್ಟು ಜನ ಸ್ತ್ರೀಯರಿಗೆ ಮಕ್ಕಳಾದವು ಎಂಬ ಬಗ್ಗೆ ಇದುವರೆಗೆ ಯಾವ ಅಂಕಿ ಅಂಶಗಳನ್ನೂ ಬಹಿರಂಗಪಡಿಸಿಲ್ಲ. ಇವೆಲ್ಲ ಪುರೋಹಿತಶಾಹಿಗಳು ಜನರನ್ನು ಸುಲಿಯುವ ತಂತ್ರಗಳಷ್ಟೇ.




ಕಲ್ಲಿನಾಥ ಮಾಧವನವರ
ಬೆಂಗಳೂರು

# ನಿಮ್ಮ ತಾರುಣ್ಯದ ರಹಸ್ಯ!




ಎಲ್ಲಾ ಹೊಸ ಸಂತೂರಿನಲ್ಲಿ ಶ್ರೀಗಂಧ ಮತ್ತು ಹರಿಶಿನದ ಸಾರ ಅಡಗಿದೆ. ಈಗ ಸಮೃದ್ಧ ನೊರೆ ಮತ್ತು ಸದಾ ಸುಳಿದಾಡುವ ಸುಗಂಧದೊಡನೆ ದೊಡ್ಡದಾದ, ಉತ್ತಮ ಆಕಾರದೊಡನೆ, ಬಹುಕಾಲ ಬಾಳಿಕೆ ಬರುವ,

# ಸಂತೂರ್

FCB◆ULKA-42723

**HOSATHU** Kannada Monthly / March 2002 Rs. 10
RNI Regn. No. KARKAN/1999/614 REGD. CPMG / KA / BGE – 7 / 2002 Licenced to post without prepayment. Licence No. WPP-14



...by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published
...Road, P. B. 5159, Bangalore-560 001. Chief Editor : Dr. G. Ramakrishna